ಮಾಣಿಕ್ಯಮಾಲಾ ಮಣಿ ೫

ಶ್ರೀಯುತ ಪಾಂಚಕೊರಿ ದೇ ಮಹಾಶಯರ

# ಮಾಯಾವಿ

ಎಂ. ವೆಂಕಟಾದ್ರಿಶಾಸ್ತ್ರಿಗಳಿಂದ

ಪರಿವರ್ತಿತವಾಯಿತು

ಪ್ರಥಮ ಮುದ್ರಣ ೧,೦೦೦

ಬೆಂಗಳೂರಲ್ಲಿರುವ

**ಬೆಂಗಳೂರು ಪ್ರೆಸ್ಸಿನಲ್ಲಿ** ಮುದ್ರಿತವಾಗಿ

**ಕೆ. ಮಾಣಿಕಂ ಕಂಪೆನಿಯವರಿಂದ**

ಪ್ರಕಟಿತವಾಯಿತು

(ಎಲ್ಲ ಬಾಧ್ಯತೆಗಳನ್ನೂ ಕಾಯ್ದುಕೊಳ್ಳಲಾಗಿದೆ)

ನನ್ನ ಪರಮ ಮಿತ್ರರೂ

**ಮಧುರವಾಣೀ ಪತ್ರ ಸಂಪಾದಕರೂ**

**ಮಾತೃಭಾಷಾ ಸೇವಕರೂ ಆದ**

ದಿವಂಗತ

# ಕೆ. ಹನುಮದಾಸರ

ಜ್ಞಾಪಕಾರ್ಥವಾಗಿ.

# ವಿಜ್ಞಾಪನೆ

---

ಪೊಲೀಸ್ ಇಲಾಖೆಯಲ್ಲಿ ಪತ್ತೇದಾರಿಯ ಶಾಖೆಯೊಂದು ಇರುವಂತೆಯೇ ನವನ್ಯಾಸದಲ್ಲಿ 'ಪತ್ತೇದಾರರ ಸಾಹಸ ಕಥೆಗಳು' ಎಂಬ ಸಾಹಿತ್ಯವಿಶೇಷವುಂಟು. ರಹಸ್ಯವಾಗಿ ನಡೆದ ಕೊಲೆ, ಕಳವು, ದರೋಡೆ ಮುಂತಾದುವುಗಳ ಕಾರಣವನ್ನು ಅಮೂಲಾಗ್ರವಾಗಿ ಶೋಧಿಸಿ, ದೋಷಿಯನ್ನು ದಂಡನೆಗೆ ಗುರಿಪಡಿಸಿದ ಪ್ರಸಿದ್ಧ ಪತ್ತೇದಾರರ ಸಾಹಸ ಕಾರ್ಯಗಳೂ, ತಾವು ನಿರ್ದೋಷಿಗಳೆಂದು ತೋರ್ಪಡಿಸಿಕೊಳ್ಳುವುದಕ್ಕಾಗಿ ಕೊಲೆಪಾತಕರು ನಡೆಯಿಸುವ ಭಯಂಕರ ಸನ್ನಾಹಗಳೂ ಅಂತಹ ಸಾಹಿತ್ಯದಲ್ಲಿ ಚಿತ್ರಿತವಾಗಿರುತ್ತವೆ. ಇಂತಹ ಪುಸ್ತಕಗಳು ಜನಸಾಮಾನ್ಯರ ವಾಚನಾಭಿರುಚಿಯನ್ನು ವೃದ್ಧಿಗೊಳಿಸುವುದೂ ಅಲ್ಲದೆ ಪ್ರಾಪಂಚಿಕ ವ್ಯವಹಾರದಲ್ಲಿನ ಯುಕ್ತಾಯುಕ್ತ ವಿಚಾರಗಳನ್ನೂ ಸಾಧ್ಯಾಸಾಧ್ಯ ವಿವೇಚನೆಯನ್ನೂ ಅರಿತುಕೊಳ್ಳುವ ಮಟ್ಟಿಗೆ ಜನರ ಮನಶ್ಶಕ್ತಿಯನ್ನು ವಿಕಸನಗೊಳಿಸತಕ್ಕುವಾಗಿಯೂ ಇರುತ್ತವೆ. ಇಂತಹ ಗ್ರಂಥಗಳು ಪಾಶ್ಚಾತ್ಯ ಸಾಹಿತ್ಯದಲ್ಲಿ ದಿನದಿನವೂ ಪ್ರಕಟವಾಗುತ್ತಿರುವ ಹಾಗೆಯೇ ನಮ್ಮೀಯರೂ ಕೂಡ ದೇಶೀಯರ ಬುದ್ಧಿಬಲದ ಸುಧಾರಣೆಗಾಗಿ ಅಂತಹ ಪುಸ್ತಕಗಳನ್ನು ಹೇರಳವಾಗಿ ಪ್ರಕಟೀಕರಿಸುತ್ತಿದ್ದಾರೆ.

ಈ ಪುಸ್ತಕದ ಮೂಲಗ್ರಂಥಕಾರರಾದ ಶ್ರೀಯುತ ಬಾಬು ಪಾಂಚಕೊರಿ ದೇ ಮಹಾಶಯರು ಈ ತಮ್ಮ ವಂಗಭಾಷೆಯ ಗ್ರಂಥ ಲೇಖನದಲ್ಲಿ ಸಿದ್ಧಹಸ್ತರು. ಇವರಿಂದ ವಿರಚಿತವಾದ ಪರಿಮಳಾ, ಮನೋರಮಾ ಎಂಬ ಪತ್ತೇದಾರೀ ಕಥೆಗಳನ್ನು ದಿವಂಗತ ಬಿ. ವೆಂಕಟಾಚಾರ್ಯರು ಈ ಮೊದಲೇ ಕನ್ನಡಿಸುವುದರ ಮೂಲಕ ಕನ್ನಡಿಗರಿಗೆ ದೇ ಮಹಾಶಯರ ರಚನಾ ಕೌಶಲದ ಪರಿಚಯವನ್ನು ಮಾಡಿಕೊಟ್ಟಿರುತ್ತಾರೆ. ಆದರೂ ಈ ಕಥೆಯಲ್ಲಿ ಚಿತ್ರಿತವಾಗಿರುವಂತಹ ಭೀಷಣ ಘಟನಾವಳಿಗಳನ್ನೂ ಅಲೌಕಿಕ ವ್ಯಾಪಾರಗಳನ್ನೂ ಕನ್ನಡಿಗರು ಓದಿ ಅರಿಯರು. ನಿಷ್ಕರುಣಿಯಾದ ಕೊಲೆಪಾತಕಿಯ ಸಾಹಸ ಕಾರ್ಯ ಕೌಶಲಗಳನ್ನೂ, ಕೊಲೆಪಾತಕನನ್ನು ಬಹಿರಂಗಪಡಿಸುವುದಕ್ಕೆ ಪ್ರಸಿದ್ಧ

ಪತ್ತೇದಾರನಾದ ಅರಿಂದಮನು ಅವಲಂಬಿಸಿದ ರೀತಿ ನೀತಿಗಳನ್ನೂ, ದಸ್ಯುದಳದವರ ಹತ್ಯಾರಹಸ್ಯಗಳನ್ನೂ, ಮಾಯಾವಿನಿಯಾದ ಜುಮೇಲಿಯ ಸಾಹಸಪೂರ್ಣವಾದ ಕಪಟಾಚರಣೆಗಳನ್ನೂ ಈ ಕಾದಂಬರಿಯಲ್ಲಿ ಕೌತುಕಪ್ರದವಾಗಿ ಚಿತ್ರಿಸಿ, 'ಅಧರ್ಮಕ್ಕೆ ಎಂದಿಗೂ ಜಯವಿಲ್ಲ' ಎಂಬುದನ್ನು ನಿದರ್ಶನಗೊಳಿಸಿದೆ.

ಇದರ ಪರಿವರ್ತನ ಕಾರ್ಯವು ಮುಗಿದು ಸುಮಾರು ವರ್ಷಗಳೇ ಆಗಿದ್ದರೂ ಕೆಲವು ಅನಿವಾರ್ಯಗಳ ದೆಸೆಯಿಂದ ಎಂದರೆ ನನ್ನ ಲೇಖನಗಳಿಗೆ ಉದಾರಾಶ್ರಯ ಕೊಡುತ್ತಿದ್ದ ಶ್ರೀ ಕೃಷ್ಣಸೂಕ್ತಿ ಪತ್ರವು ಹಠಾತ್ತಾಗಿ ನಿಂತುಹೋದುದರಿಂದಲೂ ಈ ಪುಸ್ತಕವನ್ನು ಸ್ವತಂತ್ರ ಗ್ರಂಥವಾಗಿ ಮುದ್ರಿಸಿ ಪ್ರಕಾಶಪಡಿಸಬೇಕೆಂದು ಕುತೂಹಲಪಡುತ್ತಿದ್ದ ಮೈಸೂರು ಮಧುರವಾಣೀ ಸಂಪಾದಕರಾದ ಶ್ರೀ ಹನುಮದ್ದಾಸರವರ ಅಕಾಲ ನಿಧನದಿಂದಲೂ ನನ್ನ ಸಂಕಲ್ಪವು ಪೂರ್ಣವಾಗುವುದಕ್ಕೆ ಈವರೆಗೆ ಸಾವಕಾಶವಾಯಿತು. ಪ್ರಕೃತದಲ್ಲಿ, ಇದನ್ನೂ ನನ್ನ ಇತರ ಪುಸ್ತಕಗಳನ್ನೂ ಪ್ರಕಟೀಕರಿಸುವುದಾಗಿ ಭರವಸೆಕೊಟ್ಟು ಇದರ ಪ್ರಕಟಣ ಕಾರ್ಯವನ್ನು ಕೈಗೊಂಡ ಮೆಸರ್ಸ್. ಕೆ. ಮಾಣಿಕಂ ಕಂಪೆನಿಯವರಿಗೆ ಈ ಮುದ್ರಣದ ಅಧಿಕಾರವನ್ನು ವಹಿಸಿಕೊಟ್ಟಿರುತ್ತೇನಲ್ಲದೆ ಅವರಿಗೂ ಮೂಲಗ್ರಂಥಕಾರರಿಗೂ ನಾನು ತುಂಬ ಋಣಿಯಾಗಿರುತ್ತೇನೆ. ನನಗೋಸ್ಕರ ಮೂಲಗ್ರಂಥಕಾರರಿಂದ ಅನುಜ್ಞಾಪತ್ರವನ್ನು ತರಿಸುವ ಪ್ರಯತ್ನದಲ್ಲಿ ಕೃತಕಾರ್ಯರಾದ ಉತ್ಸಾಹಿಯೂ ಶ್ರೀ ಕೃಷ್ಣಸೂಕ್ತಿ ಕರ್ತರೂ ಶ್ರೀಯುತ ಎಸ್. ರಾಜಗೋಪಾಲಕೃಷ್ಣರಾಯರಿಗೂ, ಇದನ್ನು ಆದಷ್ಟು ಬೇಗ ಮುದ್ರಿಸಿ ಕೊಟ್ಟುದಕ್ಕಾಗಿ ಬೆಂಗಳೂರು ಪ್ರೆಸ್ಸಿನವರಿಗೂ ನಾನು ಕೃತಜ್ಞನಾಗಿದ್ದೇನೆ.

ಸದಸದ್ವಿವೇಚಕರಾದ ವಾಚಕ ವಾಚಕಿಯರ ಆದರಕ್ಕೆ ಈ ಪುಸ್ತಕವೂ ಪಾತ್ರವಾಗುವುದಾದರೆ ನನ್ನ ಶ್ರಮವು ಸಾರ್ಥಕವಾದಂತೆ ಭಾವಿಸುತ್ತೇನೆ.

ಬೆಂಗಳೂರು,
ತಾ|| 23-1-28.

ಸಜ್ಜನ ವಿಧೇಯ,

**ಪರಿವರ್ತನಕಾರ.**

# ವಿಷಯಾನುಕ್ರಮಣಿಕೆ

## ಉಪಕ್ರಮಣಿಕೆ



## ೧ನೆಯ ಭಾಗ

(Detectives) ಅಲೆದಾಡುತ್ತಿದ್ದಾರೆಂಬುದು ನಿನಗೆ ಗೊತ್ತು; ನನ್ನನ್ನು ಜೀವಿತಾವಸ್ಥೆಯಲ್ಲಿಯೋ ಆಗಲಿ ಇಲ್ಲವೆ ಶವರೂಪದಲ್ಲಿಯೋ ಆಗಲಿ, ಹೇಗಾದರೂ ಸರಿ, ಹಿಡಿಯಬೇಕೆಂದು ಅವರು ಪ್ರಾಣಪಣವಾಗಿ ಅಲೆದಾಡುತ್ತಿದ್ದಾರೆ. ನಾನು ಅದರಿಂದ ಕೊಂಚವಾದರೂ ಭಯ ಪಟ್ಟಿರುವೆನೆ? ಅಥವಾ ಕೊಂಚವಾದರೂ ಆಲೋಚಿಸುವೆನೋ? ಮೇಲಾಗಿ, ನೀನೊಬ್ಬ ಹೆಂಗಸು, ನಿನ್ನನ್ನು ಕಂಡು, ಅಥವಾ ನಿನ್ನ ಕೈಯಲ್ಲಿನ ಚೂರಿಯನ್ನು ಕಂಡು ನಾನು ಭಯಗೊಂಡು ಮೈಮರೆಯುವೆನೆ? ಆದ್ದರಿಂದ ಹೇಳುತ್ತೇನೆ, ನಾನು ನಿನ್ನಲ್ಲಿ ಪ್ರೀತಿಗೊಂಡಿರುವುದರಿಂದ ಹೀಗೆ ಹೇಳುವೆನೇ ಹೊರತು ಭಯಪಟ್ಟು ಹೇಳುತ್ತಿರುವೆನೆಂದು ತಿಳಿಯಬೇಡ; ಈಗಲೂ ನಾನು ನಿನ್ನನ್ನು ಮೊದಲಿನಂತೆ ಅದೇ ಸೌಖ್ಯದಲ್ಲಿ ಇರಿಸಿರಲು ಸಿದ್ಧನಾಗಿದ್ದೇನೆ; ಅದೇ ತರದ ದೊಡ್ಡ ಮನೆಯಲ್ಲಿ ಇರುವೆಯಂತೆ; ದಾಸದಾಸಿಯರೂ ಇರುತ್ತಾರೆ; ಮತ್ತೆ ಯಾವುದನ್ನು ಅಪೇಕ್ಷಿಸುವೆಯೋ ಅದನ್ನು ಕೂಡಲೇ ಪಡೆಯುವೆ. ನೀನು ಯಾವುದರ ಅಭಾವವನ್ನೂ ಅನುಭವಮಾಡಬೇಕಾಗುವುದಿಲ್ಲ. ನಡೆ, ಹೀಗೆ ಬೀದಿ ಬೀದಿ ಅಲೆಯುತ್ತ ಎಷ್ಟು ದಿನ ಕಳೆಯಲಾದೀತು?''

ಮೋಹಿನಿಯು ವಿನೋದನ ಒಂದೊಂದು ಮಾತನ್ನೂ ಚೆನ್ನಾಗಿ ಮನಸ್ಸಿಟ್ಟು ಕೇಳುತ್ತಿದ್ದಳು; ಕೋಪದಿಂದ ಅವಳ ಆಪಾದಮಸ್ತಕವೂ ಉರಿಯಿತು. ಬರುಬರುತ್ತ ಅದೂ ಅಸಹ್ಯವಾಗಿ ತೋರಿತು; ಕ್ರೋಧ ಕಂಪಿತಸ್ವರದಿಂದ ಹೇಳಿದಳು—''ಪಿಶಾಚ, ಪುನಃ ಕಪಟಾಚರಣೆಯೇ? ಮೋಹಿನಿಯು ಪುನಃ ನಿನ್ನ ಕಾಪಟ್ಯಕ್ಕೆ ಮರುಳಾಗುವಳೆಂದು ಭಾವಿಸಿದೆಯಾ? ನಿನಗಿನ್ನೂ ತೃಪ್ತಿಯಾಗಲಿಲ್ಲವೆ? ಇನ್ನೂ ನಿನ್ನ ಮನೋಭಾವವು ಪೂರ್ಣವಾಗಲಿಲ್ಲವೇ? ಯಾವ ಸುಖವನ್ನು ಬಯಸಿ ನಾನು ಮತ್ತೆ ನಿನ್ನ ಕೃಪೆಯನ್ನು ಕೋರಲಿ? ಯಾವುದನ್ನು ಒಂದು ಬಾರಿ ಕಳೆದುಕೊಂಡುದಾದರೆ ಪುನಃ ಪಡೆಯುವುದು ಅಸಾಧ್ಯವೋ ಅಂತಹ ಧರ್ಮವು ನಿನ್ನ ಮೋಸದಿಂದ ನಷ್ಟವಾಯಿತು. ಪುನಃ ನಿನ್ನ ಮೋಹ ಮಂತ್ರಕ್ಕೆ ಮರುಳಾಗಿ ಮುಸಲಮಾನಿಯಾದೇನೆಂದು ಎಣಿಸಿದೆಯಾ?

ಎಂದಿಗೂ ಇಲ್ಲ. ನೀನು ನನ್ನ ಸರ್ವನಾಶ ಮಾಡಿದವನಲ್ಲವೆ? ಧರ್ಮಭ್ರಷ್ಟಳಾದ ರಮಣಿಯ ಪರಿಣಾಮವೇನೆಂಬುದನ್ನು ನಾನು ಈಗ ಅನುಭವ ಮಾಡುತ್ತಿದ್ದೇನೆ, ನೀನು ನೋಡುತ್ತಿದ್ದೀಯೆ, ಜಗತ್ತಿನಲ್ಲಿ ಎಲ್ಲರೂ ನೋಡುತ್ತಾರೆ; ಆದರೆ, ನೀನು ಒಬ್ಬ ವಿಧವೆಯ ಸರ್ವಸ್ವವನ್ನೂ ಅಪಹರಿಸಿ, ಅವಳನ್ನು ಒಬ್ಬ ಬೀದಿಯ ಭಿಕಾರಿಣಿಯನ್ನಾಗಿ ಮಾಡಿದ್ದೀಯೆ. ಪರಮಪಾಪಿಯಾದ ನೀನು ನಿನ್ನ ಪಾಪದ ಫಲವನ್ನು ಹೇಗೆತಾನೇ ಅನುಭವಿಸಲಿರುವೆ? ಇಂದು, ಹತ್ತು ವರ್ಷದ ಮಾತು ಹೇಳುತ್ತೇನೆ; ಆಗ ನನಗೆ ಹದಿನೆಂಟು ವರ್ಷ ವಯಸ್ಸು, ಆಗ ಯೌವನವೆಂಬುದು ಪ್ರಬಲವಾದ ಪರಾಕ್ರಮದಿಂದ ಸಹಾಯಹೀನೆಯಾಗಿದ್ದ ನನ್ನ ಈ ಹೃದಯದಲ್ಲಿ ಯಾವುದೋ ಒಂದು ಬಗೆಯ ಆತ್ಮವಿಸ್ಮೃತಿಯ ತುಮುಲತರ ವಿಪ್ಲವವನ್ನೇ ಉಂಟುಮಾಡಿತ್ತು; ಆಗ ನಾನು ಬಾಲ-ವಿಧವೆ ಎಂಬುದನ್ನು ಒಂದು ಸಲವಾದರೂ ಆಲೋಚಿಸಿದವಳಲ್ಲ; ಯಾವಾಗ ಮದುವೆ ಆಯಿತು, ಯಾರ ಸಂಗಡ? ಆತನು ಯಾರು? ಎಂಥವನು? ಈಗ ಎಲ್ಲಿದ್ದಾನೆ? ಈ ಎಲ್ಲ ವಿಚಾರಗಳ ಸ್ಮರಣೆಯೂ ಆಗ, ಆ ಉದ್ದಾಮ ಯೌವನದ ಆ ಆತ್ಮವಿಸ್ಮೃತಿಮಯವಾದ ತುಮುಲ ವಿಪ್ಲವದಲ್ಲಿ, ಕಳೆದೇ ಹೋಗಿದ್ದುವು; ಆಗ ನೀನು ಪಾಪಮಯವಾದ ಸಾವಿರಾರು ಕಪಟಾಚರಣೆಗಳೊಂದಿಗೆ, ತೃಷಿತವೂ ಲಾಲಸಾಮಯವೂ ಆದ ನನ್ನ ಕಣ್ಣೆದುರಿಗೆ ಬಂದು ನಿಂತುಕೊಂಡುದು ಜ್ಞಾಪಕವಿದೆಯೆ? ಆಗ, ಸಹಾಯಹೀನವಾದ ಹೃದಯವನ್ನು ನೀನು ಸಹಜವಾಗಿಯೇ ಕೈವಶಮಾಡಿಕೊಂಡೆ. ಕ್ರಮ ಕ್ರಮವಾಗಿ ನನ್ನನ್ನು ನರಕದ ಹಾದಿಗೆ ಎಳೆದೆ; ಆಗ, ಕೇವಲ ಮಂತ್ರಮುಗ್ಧಳಾದವಳ ಹಾಗೆ ನಾನು ನಿನ್ನನ್ನು ಅನುಸರಣಮಾಡಿದೆ. ಆ ಸಮಯದಲ್ಲಿ, ಹೆತ್ತ ತಂದೆಯ ಮುಖ ನೋಡಲಿಲ್ಲ, ಸ್ನೇಹಮಯಿಯಾದ ತಾಯಿಯ ಮುಖ ನೋಡಲಿಲ್ಲ, ಹೆಣ್ಣು ನಾಯಿಯ ಹಾಗೆ ನಿನ್ನನ್ನು ಅನುಸರಿಸಿದೆ; ಕಡೆಗೆ, ಗಂಡನ ಕಡೆಯಿಂದ ಬಂದಿದ್ದ ಸುಮಾರು ಏಳುಸಾವಿರ ರೂಪಾಯಿ ಬೆಲೆ ಬಾಳುವ ಚಿನ್ನಾಭರಣಗಳನ್ನು ತಂದುಕೊಟ್ಟು ನಿನ್ನ ಸಂಗಡ ಕುಲತ್ಯಾಗಿನಿಯಾಗಿ ಬಿಟ್ಟೆ. ನೀನು

ಎರಡು ವರ್ಷಗಳ ಒಳಗಾಗಿ ನನ್ನ ನಗಗಳನ್ನೆಲ್ಲಾ ಒಂದೊಂದಾಗಿ ಅಪಹಾರಮಾಡಿ, ನನ್ನನ್ನು ಒದ್ದು ದೂರಕ್ಕೆ ಅಟ್ಟಿದೆ. ನೀನು ಅರ್ಥ ಪಿಶಾಚ; ಕೆಲವು ದಿನಗಳನಂತರ ಹಣದಾಸೆಯಿಂದ ಮುಸಲಮಾನ ನಾಗಿ, ಒಬ್ಬ ಮುಸಲಮಾನ ರಮಣಿಯನ್ನು ಮದುವೆಯಾದೆ; ಪರ್ಯವಸಾನದಲ್ಲಿ ನನಗೆ ತಂದ ಅವಸ್ಥೆಯನ್ನೇ ಅವಳಿಗೂ ತಂದೆ. ನಾನು ಪಾಪ, ಪಾಪದ ಫಲವನ್ನು ಅನುಭವಿಸುತ್ತಿದ್ದೇನೆ; ಅವಳು ಸತ್ತು ಬದುಕಿಕೊಂಡಳು. ಆದಾದಮೇಲೆ, ನೀನು ಎಂಟು ವರ್ಷ ಗಳವರೆಗೆ ಎಲ್ಲಿ ಹೋಗಿದ್ದೆಯೋ ಗೊತ್ತಾಗಲಿಲ್ಲ. ನೀನು ಹಿಂದಿರುಗಿ ಬಂದಾಗ, ಮತ್ತೊಬ್ಬಳನ್ನು ಮದುವೆ ಮಾಡಿಕೊಂಡು ಬಂದಿರುವುದು ಗೊತ್ತಾಯಿತು. ನೀನು ಎಂಥವನೋ, ಅಂಥವಳೇ ಈ ಬಾರಿ, ನಿನಗೆ ಗಂಟುಬಿದ್ದಿದ್ದಾಳೆ; ನೀನು ಎಂತಹ ಪಿಶಾಚಿಯೋ, ಅದೇ ಮಾದರಿಯ ಪಿಶಾಚಿನಿಯೇ ನಿನಗೆ ಸಿಕ್ಕಿದ್ದಾಳೆ; ಈಗ ನೀನು ಸುಖಿಯಾದೆ; ಆದರೆ, ವಿನೋದ! ನನ್ನ ಸುಖವನ್ನು ನಷ್ಟಮಾಡಿ ನೀನು ಸುಖಿಯಾಗಿರುವೆ ಯೆಂದೂ, ನಾನು ನಿರೀಹಳಾದ ಕುಲಾಂಗನೆಯಂತೆ ದುಃಖದಿಂದುಂ ಟಾದ ವೈರಾಗ್ಯದೃಷ್ಟಿಯಿಂದ ನಿನ್ನ ಸುಖಶಾಂತಿಗಳನ್ನು ನೋಡುತ್ತಲಿ ರುವೆನೆಂದೂ ಭಾವಿಸಬೇಡ. ಪ್ರತೀಕಾರವನ್ನು, ಒಂದಲ್ಲ ಒಂದು ದಿನ, ಈ ಚಾಕುವಿನಿಂದ ಮಾಡಿಯೇ ಮಾಡುತ್ತೇನೆ. ನನ್ನನ್ನು ನೀನು ಎಷ್ಟು ಸಾಮಾನ್ಯೆ ಎಂದು ತಿಳಿದಿರುವೆಯೋ, ನಾನು ಅಷ್ಟು ಸಾಮಾನ್ಯೆ ಯಲ್ಲ; ಒಂದು ದಿನ ನಿನ್ನ ಈ ಭ್ರಮೆಯನ್ನು ತೊಲಗಿಸಿಬಿಡುತ್ತೇನೆ; ಹೆಂಗಸು ಒಮ್ಮೆ ಧರ್ಮಭ್ರಷ್ಟಳಾಗಿ ಪಾಪಿಷ್ಠಳಾದಳೆಂದರೆ ಅವಳು ಯಾವುದನ್ನೂ ಮಾಡಬಲ್ಲಳು; ಅಂತಹಳಿಗೆ ಅಸಾಧ್ಯವಾದುದು ಈ ಜಗತ್ತಿನಲ್ಲಿ ಒಂದೂ ಇರುವುದಿಲ್ಲ ಎಂಬುದು ಆಗ ನಿನಗೇ ಗೊತ್ತಾ ಗುವುದು.''

ಹೀಗೆ ಹೇಳಿ ಹುಬ್ಬುಗಂಟಿಕ್ಕಿ, ದರ್ಪದಿಂದ ಹೆಜ್ಜೆ ಹಾಕುತ್ತಾ ಮೋಹಿನಿಯು ಆಗಲೇ ಅಲ್ಲಿಂದ ಹೊರಟುಹೋದಳು. ಕೈಯ್ಯಲ್ಲಿದ್ದ ಆ ದೀರ್ಘವಾದ ಚೂರಿಯು ಅವಳಂತೆಯೇ ದರ್ಪದಿಂದ ಗಂಭೀರವಾಗಿ ತೂಗಾಡುವಂತೆ ತೋರಿತು.

ವಿನೋದಲಾಲನು ಕೇವಲ ಚಿಂತಾಪರನಾಗಿ, ಅಲ್ಲಿಯೇ ಬೆಳಕು ಹರಿಯುವವರೆಗೂ ಕುಳಿತಿದ್ದನು.

---

## ಎರಡನೆಯ ಪರಿಚ್ಛೇದ

### ರಹಸ್ಯಮಯವಾದ ಕೊಲೆ

ನಾವು ಯಾವ ಸಮಯದ ಕಥೆಯನ್ನು ಹೇಳುವೆವೋ ಆ ಸಮಯದಲ್ಲಿ ಅರಿಂದಮನೆಂಬುವನು ಒಬ್ಬ ಸುಪ್ರಖ್ಯಾತನಾದ ಪತ್ತೇದಾರನೆಂದು ಹುಗಲೀ ಜಿಲ್ಲೆಯ ಆಬಾಲವೃದ್ಧವನಿತೆಯರೆಲ್ಲರೂ ಬಲ್ಲರು. ಕಾರ್ಯಾರಂಭದ ಮೊದಲು ಕಾರ್ಯಸಿದ್ಧಿಯವರೆಗೂ ಆತನು ತೋರುತ್ತಿದ್ದ ಉತ್ಸಾಹ-ಉದ್ಯಮಗಳು, ಪ್ರಾಣಾಂತವಾದ ಪ್ರಯತ್ನ-ಪರಿಶ್ರಮಗಳು, ಹಾಗೆಯೇ ಆತನ ಅಸಾಧಾರಣವಾದ ಧೈರ್ಯ-ಸ್ಥೈರ್ಯಗಳು ಇವುಗಳಿಂದ ಆ ಕಾಲದ ದಸ್ಯುಗಳು, ದರೋಡೆಯವರು, ಘಾತಕರು, ಕೊಲೆಪಾತಕರು ಮುಂತಾದವರಲ್ಲಿ ಆತನು 'ಅರಿಂದಮ'ನೆಂದೇ ಪರಿಚಿತನಾಗಿದ್ದನು. ನಾವು ಹೇಳತೊಡಗಿರುವ ಈ ಕಥೆಯಲ್ಲಿ ಆತನು ನಿರ್ವಹಿಸಿದ ಭೀಷಣ ಘಟನೆಯೊಂದನ್ನು ಬರೆದಿದೆ.

ಹುಗಲೀ ಜಿಲ್ಲೆಗೆ ಸೇರಿದ ಕಾಮದೇವಪುರವು ಅರಿಂದಮನ ವಾಸಸ್ಥಳ. ಒಂದು ದಿನ ಬೆಳಕು ಹರಿವುದಕ್ಕೆ ಮೊದಲೇ, ಸ್ಥಳದ ಪೋಲೀಸ್ ಠಾಣೆಯ ಅಧ್ಯಕ್ಷನಾದ ಯೋಗೇಂದ್ರನಾಥನು ಅರಿಂದಮನ ಮನೆಗೆ ಬಂದನು. ಆಗ ಆತನು ತಾನು ವಾಸಮಾಡುವ ಮನೆಯ ಹೊರಭಾಗದ ಒಂದು ಕೊಠಡಿಯಲ್ಲಿ ಕುಳಿತುಕೊಂಡಿದ್ದನು. ಯೋಗೇಂದ್ರನಾಥನು ಬಂದ ಕೂಡಲೇ ಆತನು ಅವನ ಕೈಹಿಡಿದು ಮರ್ಯಾದೆಯಾಗಿ ಕುಳಿತುಕೊಳ್ಳೆಂದು ಹೇಳಿದನು.

ಯೋಗೇಂದ್ರನಾಥನು ಕುಳಿತುಕೊಳ್ಳದೆ, ಎರಡು ಕೈಗಳಿಂದಲೂ ಅರಿಂದಮನ ಕೈಹಿಡಿದುಕೊಂಡು "ತಾವು ಬೇಗ ಬರಬೇಕು, ತಮ್ಮನ್ನು

ಕಂಡಮೇಲೆ. ಇನ್ನು ಸಾವಕಾಶ ಮಾಡುವುದಾಗುವುದಿಲ್ಲ'' ಎಂದು ಹೇಳಿದನು.

ಅರಿಂದಮನು ಅವನ ಆ ಉತ್ಕಂಠಿತ ಭಾವವನ್ನು ಕಂಡು ವಿಸ್ಮಿತನಾಗಿ, ''ಏಕೆ, ಏನಾಗಿದೆ? ಎಲ್ಲಿಗೆ ಹೋಗಬೇಕು?'' ಎಂದು ಕೇಳಿದನು.

ಯೋಗೇಂದ್ರ—ಠಾಣೆಗೆ; ತಾವು ದಯಮಾಡಿ, ಅಲ್ಲಿಗೆ ಹೋದ ನಂತರ ಎಲ್ಲವನ್ನೂ ನೋಡಬಹುದು, ಎಲ್ಲವನ್ನೂ ಕೇಳಬಹುದು, ನಾನು ಏನೊಂದನ್ನೂ ಇಲ್ಲಿ ಹೇಳುವುದಿಲ್ಲ.

ಹೀಗೆ ಹೇಳಿ ಯೋಗೇಂದ್ರನಾಥನು ಅರಿಂದಮನ ಕೈಹಿಡಿದು ಎಳೆದು ಬಲಾತ್ಕಾರವಾಗಿ ಆತನನ್ನು ಠಾಣೆಗೆ ಕರೆದುಕೊಂಡು ಹೊರಟನು.

* * * *

ಅರಿಂದಮನ ಮನೆಯಿಂದ ಠಾಣೆಗೆ ಬಹಳ ದೂರವಿಲ್ಲ. ಸ್ವಲ್ಪ ಹೊತ್ತಿನೊಳಗಾಗಿಯೇ ಅರಿಂದಮನನ್ನು ಕರೆದುಕೊಂಡು ಯೋಗೇಂದ್ರನಾಥನು ಠಾಣೆಗೆ ಬಂದನು. ಅಲ್ಲಿಯ ಒಂದು ಕೊಠಡಿಗೆ ಬೀಗ ಹಾಕಿತ್ತು; ಅದರ ಬೀಗದ ಕೈ ಯೋಗೇಂದ್ರನಾಥನಲ್ಲಿಯೇ ಇದ್ದಿತು; ಅವನು ಬೀಗವನ್ನು ತೆರೆದು ಅರಿಂದಮನನ್ನು ಕೊಠಡಿಯೊಳಕ್ಕೆ ಕರೆದುಕೊಂಡುಹೋಗಿ ಬಾಗಿಲನ್ನು ಮುಚ್ಚಿ ಒಳಗಿನ ಅಗಣಿ ಹಾಕಿದನು. ಆ ಕೊಠಡಿಯ ಒಂದು ಮೂಲೆಯಲ್ಲಿ ದೊಡ್ಡದೊಂದು ಮರದ ಪೆಟ್ಟಿಗೆ ಇದ್ದಿತು. ಪೆಟ್ಟಿಗೆ ಇನ್ನೂ ಹೊಸದು; ಆ ಕೊಠಡಿಯಲ್ಲಿ ಕುಳಿತುಕೊಳ್ಳುವುದಕ್ಕೆ ಸರಿಯಾದುದು ಯಾವುದೂ ಇರಲಿಲ್ಲವಾದ್ದರಿಂದ ಅರಿಂದಮನು ಆ ಪೆಟ್ಟಿಗೆಯಮೇಲೆ ಕುಳಿತುಕೊಳ್ಳಲು ಹೋದನು; ಯೋಗೇಂದ್ರನಾಥನು ಅದನ್ನು ನಿಷೇಧಿಸಿದನು; ಹಾಗೆಯೇ ಆ ಪೆಟ್ಟಿಗೆಯನ್ನು ಬಹು ಬೇಗನೆ ತೆರೆದು ಅರಿಂದಮನಿಗೆ ತೋರಿಸಿದನು. ನೋಡಿದುದೇ, ಅರಿಂದಮನಿಗೆ ನಡುಕವುಂಟಾಯಿತು; ವಿಸ್ಮಯ ವಿಸ್ಫಾರಿತವಾದ ಆತನ ಕಣ್ಣುಗಳು ಎವೆಯಿಕ್ಕದೆ ಬಹಳ ಹೊತ್ತಿನವರೆಗೆ ಆ ಪೆಟ್ಟಿಗೆಯನ್ನೇ ನೋಡುತ್ತಿದ್ದುವು; ಅರಿಂದಮನು ಶಿಲಾಪ್ರತಿಮೆಯ ಹಾಗೆ,

ರುದ್ಧಶ್ವಾಸನಾಗಿ, ಪ್ರಜ್ಞೆಯಿಲ್ಲದವನಂತೆ, ಮೌನವಾಗಿ ಅಲುಗದೆ ಇದ್ದನು.

ಆ ಪೆಟ್ಟಿಗೆಯೊಳಗೆ ಹನ್ನೆರಡು ವರ್ಷಗಳಿಗೆ ಕಡಿಮೆ ಇಲ್ಲದ ಹುಡುಗಿಯೊಬ್ಬಳ ಮೃತದೇಹ. ಆ ಮೃತದೇಹದಲ್ಲಿ ನೂರಾರು ಕಡೆ ಶಸ್ತ್ರದ ಗಾಯಗಳು ; ಶರೀರವು ರಕ್ತದಿಂದ ತೊಯ್ದಿದೆ, ಅಲ್ಲದೆ ಅನೇಕ ಕಡೆಗಳಲ್ಲಿ ಮೂಳೆ ಕಾಣುತ್ತಿದೆ; ಬಲಗೈ ಪೂರ್ಣವಾಗಿ ಕತ್ತರಿಸಿ ಹೋಗಿದೆ. ಎಷ್ಟು ಭಯಂಕರ! ಈ ಬಾಲಿಕೆಯು ಎಂತಹ ಭಯಂಕರವಾದ ಪೈಶಾಚಿಕ ಕಠೋರತೆಯಿಂದ ಕೊಲೆಮಾಡಲ್ಪಟ್ಟಿರುವಳೆಂಬುದನ್ನು ಆಲೋಚಿಸಿದರೂ ಕೂಡ ಎದೆ ನಡುಕವುಂಟಾಗುತ್ತದೆ! ಆ ಮೃತದೇಹದಕಡೆ ನೋಡಿದರೆ ಈ ಕಾರ್ಯವು ಮನುಷ್ಯಮಾತ್ರನಿಂದ ನಡೆದುದೆಂದು ತೋರುವುದಿಲ್ಲ. ಈ ಸಣ್ಣ ಹುಡುಗಿಯ ಕಮಲಕೋಮಲ ದೇಹದಲ್ಲಿ ಹರಿತವಾದ ಚೂರಿಯಿಂದ ನೂರಾರು ಗಾಯಮಾಡುವುದಕ್ಕೂ ಹೇಸದಂತಹ ನೃಶಂಸ ನರಪ್ರೇತನು ಯಾವನಾಗಿರಬಹುದು?

---

## ಮೂರನೆಯ ಪರಿಚ್ಛೇದ

### ಕೊಲೆಪಾತಕನು ಯಾರು?

ಅರಿಂದಮನು ಎರಡು ಕೈಗಳಿಂದಲೂ ತನ್ನ ಆ ಮೃತದೇಹವನ್ನೆತ್ತಿ ಪೆಟ್ಟಿಗೆಯಿಂದ ಹೊರಕ್ಕೆ ತೆಗೆದನು. ಪಕ್ಕದಲ್ಲಿಯೇ, ತೆರೆದಿದ್ದ ಕಿಟಕಿಯಿಂದ ಬಾಲಸೂರ್ಯನ ರಕ್ತಕಿರಣಗಳು ಆ ರಕ್ತಾಕ್ತವಾದ ಮೃತದೇಹದ ಮೇಲೆ ಬಿದ್ದು, ಆ ಭಯಾನಕ ದೃಶ್ಯವನ್ನು ಮತ್ತೂ ಭಯಂಕರವಾಗಿ ಮಾಡಿತು. ಅರಿಂದಮನು ಯೋಗೇಂದ್ರನಾಥನನ್ನು ಕುರಿತು ''ಯೋಗೇಂದ್ರಬಾಬು, ಸಮಾಚಾರವೇನು?'' ಎಂದನು.

ಯೋಗೇಂದ್ರ—ವ್ಯಾಪಾರವೇನು! ನಾನು ಏನು ಹೇಳಲಿ? ಯಾವುದನ್ನು ನೋಡುತ್ತಿರುವಿರೋ, ಅದೇಯೆ ; ಈ ವ್ಯಾಪಾರವೇನೆಂಬುದನ್ನು ತಾವು ತಿಳಿದು ಹೇಳಬಲ್ಲಿರಿ. ಅದಕ್ಕಾಗಿಯೇ ತಮ್ಮನ್ನು ಕರೆತಂದಿದ್ದೇನೆ.

ಅರಿಂದಮನು ಮಂದಹಾಸದೊಡನೆ—"ಯಥಾ ಸಮಯದಲ್ಲಿ ನಾನೇ ಇದನ್ನು ತಿಳುಹಿಸುತ್ತೇನೆ. ಈ ಕೊಲೆಮಾಡಿದವರು ಯಾರು?" ಎಂದು ಕೇಳಿದನು.

ಯೋಗೇಂದ್ರ—ತಮಗೆ ಗೊತ್ತು, ತಾವು ಅದನ್ನು ಹೇಳಬೇಕು.

ಅರಿಂದಮ—ಒಳ್ಳೆಯದು, ನಾನೇ ಒಂದು ದಿನ ಹೇಳುತ್ತೇನೆ. ಈ ಶವವು ನಿಮಗೆ ಯಾವಲ್ಲಿ, ಯಾವ ರೀತಿಯಾಗಿ ದೊರಕಿತೋ ಹೇಳಿ, ನೋಡುವ ?

ಯೋಗೇಂದ್ರ—ಇಲ್ಲಿಯೇ-ಠಾಣೆಯಲ್ಲಿ. ನಿನ್ನೆಯ ರಾತ್ರಿ, ಎರಡು ಗಂಟೆಯಮೇಲೆ, ಕೂಲಿ ಆಳಿನಂತೆ ಒಬ್ಬ ಹಿಂದುಸ್ಥಾನಿಯವನು ಈ ಪೆಟ್ಟಿಗೆಯನ್ನು ತಲೆಯಮೇಲೆ ಹೊತ್ತುಕೊಂಡು ನಮ್ಮ ಈ ಠಾಣೆಯ ಮಾರ್ಗವಾಗಿಯೇ ಹೋಗುತ್ತಿದ್ದನು. ಅಂತಹ ಅವೇಳೆಯಲ್ಲಿ ಇಷ್ಟು ದೊಡ್ಡ ಪೆಟ್ಟಿಗೆ ಹೊತ್ತುಕೊಂಡು ಅವನು ಹೋಗುತ್ತಿರುವುದನ್ನು ನಮ್ಮ ಪೋಲೀಸ್ ಕಾನ್‌ಸ್ಟೇಬಲ್ ರಾಮದೀನನು ನೋಡಿ ಸಂದೇಹಿಸಿ, ಕೂಡಲೇ ನನಗೆ ವರ್ತಮಾನಕೊಟ್ಟನು. ನಾನು ಆ ಮನುಷ್ಯನನ್ನು ಒಡನೆ ಹಿಡಿದುತರುವಂತೆ ರಾಮದೀನನಿಗೆ ಹೇಳಿದೆನು. ರಾಮದೀನನು ಆ ಮನುಷ್ಯನನ್ನು ಹಿಡಿದು ತಂದಾಗ ಅವನ ಹತ್ತಿರ ಆ ಪೆಟ್ಟಿಗೆಯ ಬೀಗದಕ್ಕೈ ಇರುವುದೇ ಎಂದು ಹಿಂದುಸ್ಥಾನಿಯವನನ್ನು ಕೇಳಿದೆ. ಅದಕ್ಕೆ ಅವನು ಬೀಗದಕ್ಕೈ ಇಲ್ಲ ಎಂದು ಹೇಳಿದ. ಅವನು ಕಳ್ಳನಾಗಿರಬೇಕೆಂದು ಆಗ ನನಗೂ ಸಂದೇಹವಾಯಿತು; ಅವನು ಬಂದುದೆಲ್ಲಿಂದ, ಹೋಗುವುದೆಲ್ಲಿಗೆ, ಪೆಟ್ಟಿಗೆ ಯಾರದು? ಎಂದು ಮುಂತಾಗಿ ಅವನನ್ನು ಅನೇಕವಾಗಿ ಪ್ರಶ್ನೆಮಾಡಿದೆನು. ಅದಕ್ಕೆ ಅವನು ತಮ್ಮ ಹೆಸರು ಹೇಳಿದ; ಅವನು ಈ ಪೆಟ್ಟಿಗೆ ತೆಗೆದುಕೊಂಡು ಹೋಗುತ್ತಿದ್ದುದು ತಮ್ಮಲ್ಲಿಗೇ ಎಂದು.

ಅರಿಂದಮ—(ವಿಸ್ಮಯದಿಂದ) ನನ್ನಲ್ಲಿಗೆ !

ಯೋಗೇಂದ್ರ—ಕಲಿಕತ್ತೆಯಲ್ಲಿ ಯಾರೋ ತಮ್ಮ ಸ್ನೇಹಿತರೊಬ್ಬರು ಇರುವಂತೆ, ಅವರು ಈ ಪೆಟ್ಟಿಗೆಯನ್ನು ತಮಗೆ ಕಳುಹಿಸಿ

ಕೊಟ್ಟಂತೆ ಅವನು ಹೇಳಿದ. ಮನುಷ್ಯನ ಲಕ್ಷಣ ನೋಡಿ ನನಗೆ ಬಹಳ ಸಂಶಯವಾದ್ದರಿಂದಲೇ ಅವನನ್ನು ಹಾಗೆಯೇ ಹೋಗಗೊಡಲಿಲ್ಲ—ಅವನನ್ನು ಅಡ್ಡಿಮಾಡಿ ನಿಲ್ಲಿಸಿದ್ದೇನೋ ನಿಜ, ಆದರೆ ತಮ್ಮ ಕಡೆಯವನೆಂದು ಹೇಳಿದ ಕಾರಣ ಅವನ ವಿಷಯದಲ್ಲಿ ಅಷ್ಟು ಎಚ್ಚರದಿಂದ ಇರಬೇಕಾದ ಆವಶ್ಯಕ ನನಗೆ ತೋರಲಿಲ್ಲ. ಈ ಪೆಟ್ಟಿಗೆಯನ್ನು ಮಾತ್ರ ಈ ಕೊಠಡಿಯಲ್ಲಿ ಇರಿಸಿ ಭದ್ರಪಡಿಸಿದೆನು. ಅನಂತರ ನೋಡಿದಾಗ, ಬೆಳಗಾಗುವುದರೊಳಗಾಗಿ, ಆ ಮನುಷ್ಯನು ಪರಾರಿಯಾಗಿ ಹೋಗಿದ್ದಾನೆ. ಬೆಳಿಗ್ಗೆ ಇದ್ದ ಪೆಟ್ಟಿಗೆಯನ್ನು ನಿಮ್ಮ ಮನೆಗೆ ಕಳುಹಿಸೋಣವೆಂದು ಪೆಟ್ಟಿಗೆಯನ್ನು ಹೊರಕ್ಕೆ ತರಿಸಿ ನೋಡುವಲ್ಲಿ ತಳಭಾಗದ ಹಲಗೆಯ ಸೇರುವೆಯಲ್ಲೆಲ್ಲಾ ನಾಲ್ಕು ಕಡೆಗಳಲ್ಲಿಯೂ ರಕ್ತದ ಕಲೆಗಳು ಕಾಣಿಸಿದುವು. ಆಗ ನಾನು ಪೆಟ್ಟಿಗೆಯನ್ನು ಒಡೆದು ಹಾಕಿದೆ.

ಅರಿಂದಮ—ಈ ಪೆಟ್ಟಿಗೆಯನ್ನು ಹೊತ್ತು ತಂದಿದ್ದ ಮನುಷ್ಯನು ನೋಡುವುದಕ್ಕೆ ಹೇಗಿದ್ದನು? ವಯಸ್ಸು ಎಷ್ಟು?

ಯೋಗೇಂದ್ರ—ವಯಸ್ಸು ಮೂವತ್ತು ವರ್ಷಗಳಿರಬಹುದು. ಹಿಂದುಸ್ಥಾನಿಯವನು. ಆಕಾರವು ವಿಕಟವೆಂದೇ ಹೇಳಬೇಕು. ಮುಖವು ನೋಡುವುದಕ್ಕೆ ಮತ್ತೂ ವಿಕಟತರ; ಅವನನ್ನು ಹಠಾತ್ತಾಗಿ ನೋಡಿದರೆ ಮನುಷ್ಯನೆಂದೇ ಗೊತ್ತಾಗುವುದಿಲ್ಲ. ಮೂಗು ಪೂರಾ ಗಾತ್ರ, ಕಣ್ಣುಗಳೆರಡೂ ಸಣ್ಣ, ತುಟಿಗಳೆರಡೂ ಗಾತ್ರವಾಗಿ ಅವು ಪೂರ್ಣವಾಗಿ ತಿರುಗಿಬಿದ್ದಿವೆಯೋ ಎನ್ನುವ ಹಾಗಿರುವುದು; ಅವನ ಮೈಬಣ್ಣವೋ—ಸತ್ತನಂತರ ಅವನ ಚರ್ಮವು ಸಿಕ್ಕಿದಪಕ್ಷದಲ್ಲಿ ಒಳ್ಳೆಯ ವಾರ್ನೀಸು ಬಳಿದ ಒಂದು ಜತೆ ಬೂಟ್ಸ್ ಮಾಡಿಸಿಕೊಳ್ಳಬಹುದು; ಅಷ್ಟು ಅಚ್ಚಕಪ್ಪು. ಹಣೆಯಮೇಲೆ ಮೂರು ನಾಲ್ಕು ಕತ್ತಿಯ ಗಾಯದ ಗುರುತುಗಳು.

ಆಗ ಅರಿಂದಮನು ಆ ಬಾಲಿಕೆಯ ಮೃತದೇಹವನ್ನು ಬಹು ತೀಕ್ಷ್ಣದೃಷ್ಟಿಯಿಂದ ನೋಡತೊಡಗಿದನು. ಮೃತಳಾಗಿದ್ದ ಬಾಲಿಕೆಯ

ಸಡಿಲವಾದ ತಲೆಯ ಗಂಟಿನಲ್ಲಿ ಬೆಳ್ಳಿಯಿಂದ ಮಾಡಿದ್ದ ಎರಡು ಹೆರಳು ಸೂಜಿಗಳು (Hair-Pins) ಇದ್ದುವು; ಅವನ್ನು ಆತನು ಸಮೀಪದಲ್ಲಿ ಇಟ್ಟುಕೊಂಡನು.

---

## ನಾಲ್ಕನೆಯ ಪರಿಚ್ಛೇದ

### ಕೊಲೆಗಾರನ ವೀರತ್ವ

ಈ ಸಮಯಕ್ಕೆ ಸರಿಯಾಗಿ ಪೋಲೀಸಿನವನೊಬ್ಬನು ಮುಚ್ಚಿದ್ದ ಬಾಗಿಲನ್ನು ಹೊರಗಿನಿಂದ ತಟ್ಟಿದನು. ಯೋಗೇಂದ್ರನಾಥನು ಬಾಗಿಲನ್ನು ತೆರೆದನು. ಪೋಲೀಸಿನವನು ಒಂದು ಕಾಗದವನ್ನು ತಂದು ಯೋಗೇಂದ್ರನ ಕೈಗೆ ಕೊಟ್ಟನು. ಯೋಗೇಂದ್ರನಾಥನು ಕೂಡಲೇ ಆ ಕಾಗದವನ್ನು ಒಡೆದು ಓದತೊಡಗಿದನು. ಕಾಗದವನ್ನು ಓದುವುದರ ಒಳಗಾಗಿಯೇ ಅವನ ಮುಖಭಾವವು ಕ್ಷಣಕ್ಷಣಕ್ಕೂ ನಾನಾ ಬಗೆಯಾಗಿ ಮಾರ್ಪುಗೊಳ್ಳುತ್ತಿತ್ತು. ಓದಿ ಮುಗಿಸಿದನಂತರ ಆ ಕಾಗದವನ್ನು ಅರಿಂದಮನ ಕೈಗೆ ಕೊಟ್ಟು ಯೋಗೇಂದ್ರನಾಥನು "ಅರಿಂದಮ ಬಾಬು, ಕಾಗದದಲ್ಲಿ ಬರೆದಿರುವುದನ್ನು ನೋಡಲು ನೋಡುವುದಾಗಲಿ; ಅವನು ಯಾವನೇ ಆಗಲಿ, ಅವನು ಸಾಧಾರಣ ಮನುಷ್ಯನಲ್ಲ" ಎಂದನು.

"ಇಲ್ಲವಾಗಿದ್ದರೆ ಕೊಲೆಮಾಡಿ, ಶವವನ್ನು ಠಾಣೆಗೆ ಕಳುಹಿಸಿ ತಮಾಷೆ ನೋಡುವ ಸಾಹಸವು ಯಾರಿಗೆ ತಾನೇ ಇದ್ದೀತು?" ಎಂದು ಹೇಳಿ, ಅರಿಂದಮನು ಕಾಗದವನ್ನು ಓದಲು ಉಪಕ್ರಮಿಸಿದನು. ಕಾಗದದಲ್ಲಿ ಹೀಗೆ ಬರೆದಿತ್ತು:—

"ಯೋಗೇಂದ್ರಬಾಬು,

ನೀನು ನನ್ನನ್ನು ಬಲ್ಲೆ, ನಾನು ಕೂಡ ನಿನ್ನನ್ನು ಬಲ್ಲೆ. ಇಷ್ಟಾದರೂ ನೀನು ನನ್ನನ್ನು ಹಿಡಿವುದಕ್ಕಾಗಿ ಏನೊಂದು ತಂತ್ರವನ್ನೂ ಮಾಡಲಾರದವನಾಗಿರುವೆ. ಹಾಗಾದ ಪಕ್ಷದಲ್ಲಿ ಪೋಲೀಸಿನಲ್ಲಿ ನೌಕರಿ ಮಾಡು

ವುದು ನಿನ್ನಂತಹ ಕೇವಲ ಅರ್ವಾಚೀನ (ಪುರಾತನ ಪದ್ಧತಿಯವ)ನಿಗೆ ಯೋಗ್ಯವಲ್ಲ. ಪೆಟ್ಟಿಗೆಯ ಒಳಗೆ ಯಾವ ಹುಡುಗಿಯ ಶವವನ್ನು ನೀನು ನೋಡುವೆಯೋ ಅವಳು ನನ್ನ ಕೈಯಿಂದ ಆ ರೀತಿ ಕೊಲ್ಲಲ್ಪಟ್ಟಿರುವಳು ಎಂದು ತಿಳಿ. ಆ ಹುಡುಗಿ ಯಾರು? ಏತಕ್ಕಾಗಿ ಕೊಲ್ಲಲ್ಪಟ್ಟಳು? ನಾನು ಯಾರು, ನಾನಾದರೂ ಅವಳನ್ನು ಏಕೆ ಕೊಲ್ಲಬೇಕಾಗಿದ್ದಿತು—ಇವೇ ಮುಂತಾದವುಗಳಲ್ಲಿ ಒಂದು ವಿಷಯವನ್ನಾದರೂ ನೀನು ನಿನ್ನ ಜೀವಮಾನಕಾಲದೊಳಗಾಗಿ ಕಂಡುಹಿಡಿಯಲಾರೆ. ಇದಕ್ಕಾಗಿ ನೀನು ನಿನ್ನ ಪ್ರಿಯ ಸ್ನೇಹಿತನಾದ ಅರಿಂದಮನ ಸಹಾಯ ತೆಗೆದುಕೊಳ್ಳುವೆ; ಆದರೆ ಅಂತಹ ಹತ್ತುಮಂದಿ ಅರಿಂದಮರು ಬಂದರೂ ಏನೂ ಸಾಗದೆಂದು ಖಂಡಿತನಾಗಿ ತಿಳಿದಿರು. ಈ ಹುಡುಗಿಯ ಕೊಲೆಯ ಲೆಕ್ಕವನ್ನೂ ಸೇರಿಸಿಕೊಳ್ಳುವುದಾದರೆ ಈವರೆಗೆ ನಾನು ಮಾಡಿದ ಕೊಲೆಗಳ ಸಂಖ್ಯೆ—ಹದಿನೆಂಟು. ಯಾವ ಕಾಲದಲ್ಲಿ, ಎಲ್ಲಿ, ಯಾವ ರೂಪದಲ್ಲಿ ಇದ್ದುಕೊಂಡು ನಾನು ಈ ಎಲ್ಲ ಕೊಲೆಗಳನ್ನೂ ನಿರ್ವಿಘ್ನವಾಗಿ ನೆರವೇರಿಸಿದೆನೋ, ಆ ವಿವರವನ್ನೆಲ್ಲಾ ನಿನಗೆ ಹೇಳಬೇಕಾದ ಅವಶ್ಯಕತೆಯೇನೂ ಕಾಣುವುದಿಲ್ಲ.

ನಾನು ಮಾಡಿದ ಕೊಲೆಗಳ ಒಟ್ಟು ಸಂಖ್ಯೆಯು ಪೂರ್ತಿಯಾಗಿ ಇಪ್ಪತ್ತಾಗಲು ಏನುಮಾಡಬೇಕೋ ಅದನ್ನು ಈ ವಾರದೊಳಗಾಗಿ ಮಾಡುತ್ತೇನೆ: ಮೊದಲು ಅರಿಂದಮನನ್ನು ತೀರಿಸುತ್ತೇನೆ, ಅನಂತರ ನಿನ್ನನ್ನು ಕೊಲ್ಲುತ್ತೇನೆ. ಆತನನ್ನು ಎಚ್ಚರಿಸಿಬಿಡು, ಅಲ್ಲದೆ ನೀನೂ ಜಾಗರೂಕನಾಗಿದ್ದುಕೊ. ನಿಮ್ಮಂತಹ ಒಬ್ಬ-ಇಬ್ಬರನ್ನು ಕೊಲೆಮಾಡುವುದಕ್ಕೆ ನನ್ನಿಂದ ಸಾಧ್ಯವಿಲ್ಲವಾದರೆ ನಾನು ಇನ್ನೇನುತಾನೇ ಮಾಡುವುದು ಸಾಧ್ಯ!

ನೀನು ನನ್ನ ಈ ಕಾಗದವನ್ನು ಓದುವ ಸಮಯದಲ್ಲಿ ನಿನ್ನ ಮುಖಭಾವವು ಹೇಗಾಗುವುದೋ, ನೀನೇನು ಮಾಡುವೆಯೋ—ಅದೆಲ್ಲವನ್ನೂ ನಿನ್ನ ಇದಿರಿನಲ್ಲಿಯೇ ಇದ್ದುನೋಡಿ ಸಂತೋಷಪಡಬೇಕೆಂಬ ಆಸೆ ಇದ್ದಿತು. ಯಾವುದೋ ಕಾರಣವಿಶೇಷದಿಂದ ನಾನು ಆ ಆಸೆಯನ್ನು ಬಿಡಬೇಕಾಯಿತು.

ಇನ್ನು ಒಂದೆರಡು ದಿನಗಳ ಬಾಳಿಕೆಗಾಗಿ, ಈ ಹುಡುಗಿಯ ಕೊಲೆ ಮಾಡಿದವನನ್ನು ಹುಡುಕಿ ಹಿಡಿವುದಕ್ಕೋಸ್ಕರ ಬರೀ ಪ್ರಯಾಸಪಡುವೆ? ಒಂದೆರಡು ದಿನಗಳನಂತರ ಒಟ್ಟಿಗೆ ಅರಿಂದಮನ ಕೊಲೆಮಾಡಿದವನನ್ನೂ ಹುಡುಕುತ್ತಾ ಹೊರಡಲೇಬೇಕಾಗುವುದು.

ಇತಿ,

ನಿನ್ನ ಚಿರಪರಿಚಿತ ಶತ್ರು.''

ಅರಿಂದಮನು ಕಾಗದವನ್ನು ಓದಿ ಯೋಗೇಂದ್ರನ ಕೈಗೆ ಪುನಃ ಕೊಟ್ಟುಬಿಟ್ಟನು ; ಯಾವ ಮಾತೂ ಆಡಲಿಲ್ಲ.

ಯೋಗೇಂದ್ರ—ಅರಿಂದಮಬಾಬೂ, ನೀವು ಮತ್ತೆ ಯಾವಾಗಲಾದರೂ ಇಂತಹ ಪತ್ರವನ್ನೇ ಕಂಡಿರುವುದುಂಟೆ ?

ಅರಿಂದಮ—ಇಲ್ಲ, ಮನುಷ್ಯನು ಸಾಮಾನ್ಯನಲ್ಲ ; ಏನಾದರೂ ಆಗಲಿ, ಈಗ ಅವನನ್ನು ಸಾಮಾನ್ಯನನ್ನಾಗಿ ಮಾಡಲು ಏನೇನು ಅವಶ್ಯಕವೋ ಅವೆಲ್ಲವನ್ನೂ ಮಾಡಲೇಬೇಕು. ಕಾಗದವನ್ನು ಓದಿದುದರಲ್ಲಿ ಆಸಾಮಿಯು ನಿಮ್ಮನ್ನು ಬಲ್ಲನು. ನೀವೂ ಆಸಾಮಿಯನ್ನು ಬಲ್ಲಿರಿ ಎಂಬುದು ಗೊತ್ತಾಯಿತು. ಇಷ್ಟರ ಪರಿಚಯವಿದ್ದರೂ ಕೂಡ ಅವನು ಇಷ್ಟು ರಗಳೆಮಾಡಿದ್ದಾನೆ. ಇದೇ ಆಶ್ಚರ್ಯವಾದ ಕೆಲಸ !

ಯೋಗೇಂದ್ರ—ನನಗೆ ಪರಿಚಿತರಾಗಿರುವವರಲ್ಲಿ ಇಂತಹ ಮನುಷ್ಯನು ಯಾರೆಂಬುದನ್ನು ಸರಿಯಾಗಿ ಊಹಿಸಿ ತಿಳಿಯುವುದಕ್ಕೂ ಸಾಧ್ಯವಿಲ್ಲವಲ್ಲ. ಸಾಲದುದಕ್ಕೆ ಇನ್ನು ನಾಲ್ಕಾರು ದಿನಗಳಲ್ಲಿ ತನ್ನನ್ನೂ ಕೊಲೆಮಾಡುವುದಾಗಿ ಹೇಳುತ್ತಾನೆ; ತನಗೆ ಅಂತಹ ಶತ್ರುಗಳು ಯಾರು ?

ಅರಿಂದಮ—ಶತ್ರುಗಳು ಯಾರೆ? ಅನೇಕರು! ಯಾರು ಕಳ್ಳರೋ ಅವರು, ಯಾರು ಸ್ವಷ್ಟನೆ ಮಾಡುವರೋ ಅವರು, ಯಾರು ಕೊಲೆ ಪಾತಕರೋ ಅವರು—ಈ ಮೂವರು ಬಗೆಯ ಶತ್ರುಗಳ ದೆಸೆಯಿಂದಲೇ ನಾನು ಜೀವಯಾಪನ ಮಾಡಬೇಕಾಗಿದೆ. ಅವನು ಯಾವನಾದರೂ ಆಗಲಿ, ಈಗ ಈ ಆಸಾಮಿಯನ್ನು ಹುಡುಕಿ ಹಿಡಿಯಲೇಬೇಕು.

---

# ಐದನೆಯ ಪರಿಚ್ಛೇದ

## ಅರಿಂದಮನ ನೈಪುಣ್ಯ

ಆಗ ಅರಿಂದಮನು ಆ ಪೆಟ್ಟಿಗೆಯೊಳಗಿನಿಂದ ಕರಿಯ ಬನಾತಿನ ಒಂದು ಅಂಗಿಯನ್ನೂ, ಮುರಿದುಹೋಗಿರುವ ಒಂದು ಕರಿಯಬಣ್ಣದ ಬೆತ್ತವನ್ನೂ ಹೊರಕ್ಕೆ ತೆಗೆದನು. ರಕ್ತದಲ್ಲಿ ಸಂಪೂರ್ಣವಾಗಿ ನೆನೆದುಹೋಗಿದ್ದುದರಿಂದ ಆ ಕರಿಯಬನಾತಿನ ಅಂಗಿಯು ಶುದ್ಧ ಪಾಟಲವರ್ಣವಾಗಿ ತೋರುತ್ತಿದ್ದಿತು. ಅಂಗಿಯನ್ನು ಪರೀಕ್ಷಿಸಲಾಗಿ, ಈ ಅಂಗಿಯನ್ನು ತೊಟ್ಟುಕೊಂಡೇ ಅವನು ಕೊಲೆಯಾಗಿರಬೇಕು; ಅಂಗಿಯು ರಕ್ತದಲ್ಲಿ ತೊಯ್ದುಹೋಗಿರುವುದರಿಂದಲೂ ಬೆತ್ತವು ಹೇಗೋ ಮುರಿದುಹೋಗಿರುವುದರಿಂದಲೂ ಉಪಯೋಗವಿಲ್ಲವೆಂದು ತೋರಿದುದರಮೇಲೆ ಈ ಪೆಟ್ಟಿಗೆಯಲ್ಲಿ ಸೇರಿಸಿದ್ದಾನೆ. ಆ ಮನುಷ್ಯನ ಚಹರೆ ಹೇಗಿರಬಹುದೆಂಬುದನ್ನು ಇವೆರಡರ ಸಹಾಯದಿಂದಲೇ ನಾನು ಊಹಿಸಬಲ್ಲೆ. ಆಸಾಮಿ ಐದು ಅಡಿ, ಆರು ಅಂಗುಲಕ್ಕಿಂತ ಎತ್ತರವಾಗಿರಲಿಕ್ಕಿಲ್ಲ.

ಯೋಗೇಂದ್ರ—ಅದು ತಮಗೆ ಗೊತ್ತಾದುದು ಹೇಗೆ?

ಅರಿಂದಮನು ಆ ಮುರಿದ ಬೆತ್ತವನ್ನು ತೋರಿಸಿ, "ಯಾವನು ಕೊಲೆಯಾದನೋ, ಈ ಬೆತ್ತವು ಅವನದೇ ಆಗಿದ್ದ ಪಕ್ಷದಲ್ಲಿ, ಹಾಗೆಯೇ ಇದು ಅವನ ಆಕಾರಕ್ಕೆ ತಕ್ಕುದಾಗಿಯೂ ಇದರ ಬಳಕೆಯು ಅವನಿಗೆ ಹಿತಕರವಾಗಿಯೂ ಇದ್ದ ಪಕ್ಷದಲ್ಲಿ ನನ್ನ ಊಹೆಯು ಸುಳ್ಳಾಗುವುದಿಲ್ಲ. ಈ ಅಳತೆ ನೋಡಿದರೆ ಇದು ಐದು ಅಡಿ, ಆರು ಅಂಗುಲ ಎತ್ತರದ ಮನುಷ್ಯನಿಂದಲೇ ಉಪಯೋಗಿಸಲ್ಪಡತಕ್ಕದ್ದು. ಆಸಾಮಿಯು ಅಷ್ಟು ಗಿಡ್ಡನಾಗಿಯೂ ಇಲ್ಲ, ಅಷ್ಟು ಉದ್ದನಾಗಿಯೂ ಇಲ್ಲ; ಅವನ ಎದೆ ಪ್ರಶಸ್ತವಾದದ್ದು, ವಿಸ್ತಾರವಾದ ಭುಜಗಳು, ನಡು ಅಷ್ಟೇನೂ ದಪ್ಪವಲ್ಲ, ಎದೆಯ ಅಳತೆಗಿಂತಲೂ ಸ್ವಲ್ಪ ಕಡಿಮೆ. ಇದರಿಂದ ಗೊತ್ತಾಗುವುದೇನೆಂದರೆ, ಆಸಾಮಿ ಅಷ್ಟೇನೂ ದಪ್ಪನಲ್ಲ; ಮಾಂಸಪೂರ್ಣವಾದ

ವಕ್ಷಸ್ಥಳ ಮತ್ತೂ ಭುಜಗಳು ಉಬ್ಬಿವೆ; ಕುತ್ತಿಗೆ ಗಾತ್ರದಲ್ಲಿ ಸ್ವಲ್ಪ ಹೆಚ್ಚು.

"ನೀವು ಇದೆಲ್ಲವನ್ನೂ ಹೇಗೆ ಊಹಿಸುವಿರೋ ನನಗೆ ತಿಳಿಯುವುದೇ ಇಲ್ಲ" ಎಂದು ಯೋಗೇಂದ್ರನು ನಗುತ್ತಾ ಹೇಳಿದನು.

ಅರಿಂದಮ—ಈ ಅಂಗಿಯನ್ನು ಕತ್ತರಿಸಿ ಹೊಲಿದಿರುವುದನ್ನೂ ಗುಂಡಿ ಕೊಕ್ಕಿ ಮುಂತಾದುವುಗಳನ್ನೂ ನೋಡಿ ನಾನು ಏನು ಹೇಳಿರುವೆನೋ ಅದನ್ನು ನೀನು ಅಂಗಿಯ ಅಳತೆಮಾಡಿ ನೋಡಿದಾಗ ಸರಿಯೆಂದು ತಿಳಿಯುವೆ. ಅಸಾಮಿಯ ಕೂದಲು ಸ್ವಲ್ಪ ಬಾಗಿರುವುದು. ಅಂಗಿಯ ಗುಂಡಿಗೆ ಮೂರು ನಾಲ್ಕು ಕೂದಲು ತಗುಲಿಕೊಂಡಿವೆ. ಆ ಮನುಷ್ಯನು ಕೊಲೆಮಾಡಿದ ಕಾಲದಲ್ಲಿ ತನ್ನ ಮುಖ, ಕಣ್ಣು, ತಲೆ ಇವುಗಳಮೇಲೆ ಬಿದ್ದ ರಕ್ತವನ್ನು ಈ ಅಂಗಿಯಿಂದಲೇ ಒರಸಿಕೊಂಡಿರಬೇಕು. ಆಗಲೇ ಗುಂಡಿಯ ಸಂಗಡ ಮೂರು ನಾಲ್ಕು ಕೂದಲು ಸಿಕ್ಕಿ ಕಿತ್ತುಬಂದಿರಬೇಕು. ಎಲ್ಲವೂ ಒಂದೇ ಸಮನಾಗಿವೆ, ಕೊಂಚ ಕೊಂಚ ಡೊಂಕು.

ಯೋಗೇಂದ್ರ—ಇವು ತಲೆಯ ಕೂದಲಾಗಿರದೆ ಗಡ್ಡ ಅಥವಾ ಮೀಸೆಯ ಕೂದಲಾಗಿದ್ದರೋ? ತಲೆಯನ್ನು ಒರಸಿಕೊಳ್ಳುವಾಗ ಅವನು ಅಗತ್ಯವಾಗಿಯೂ ಒಂದುಸಲ ಇದೇ ಅಂಗಿಯಿಂದಲೇ ಮುಖವನ್ನೂ ಒರಸಿಕೊಂಡಿರಬಹುದು.

ಅರಿಂದಮ—ಅಲ್ಲ ಅಲ್ಲ; ಹಾಗಿದ್ದ ಪಕ್ಷದಲ್ಲಿ ತಿಳಿದುಹೋಗುತ್ತಿದ್ದಿತು. ಗಡ್ಡ ಅಥವಾ ಮೀಸೆಯ ಕೂದಲು ಸ್ವಭಾವವಾಗಿ ಬುಡದಿಂದಲೇ ಧನುಸ್ಸಿನ ಆಕಾರವಾಗಿ ಒಂದೇಕಡೆಗೆ ಕೊಂಚ ಬಾಗಿರುತ್ತದೆ; ಆದರೆ ತಲೆಯ ಕೂದಲು ಬುಡದಿಂದ ಸ್ವಲ್ಪ ಹೆಚ್ಚು ಕಡಿಮೆ ಅರ್ಧ ಅಂಗುಲದವರೆಗೆ ನೇರವಾಗಿರುತ್ತದೆ. ಒಂದುವೇಳೆ ಗುಂಗುರು ಕೂದಲಾಗಿದ್ದ ಪಕ್ಷದಲ್ಲಿ ಅದು ಅಗ್ರಭಾಗದ ಕಡೆಗೇ ಬಾಗಿರುತ್ತದೆ; ಆದರೆ ಕಾಫ್ರೀಯರ ಕೂದಲಿನಂತೆ ಕೇವಲ ಒರಟು ಕೂದಲಾದರೆ, ಅದರದೇ ಬೇರೆ ಮಾತು. ಅದರ ಅಗ್ರ ಮೂಲಗಳು ಪ್ರಾಯಃ ಸಮಾನವಾಗಿಯೇ

ಇರುತ್ತದೆ. ಗಡ್ಡ ಮೀಸೆಗಳ ಕೂದಲಿಗೂ ತಲೆಯ ಕೂದಲಿಗೂ ಎಷ್ಟರ ವ್ಯತ್ಯಾಸವಿರುವುದೆಂಬುದನ್ನು ಸ್ವಲ್ಪ ಪ್ರಯತ್ನಮಾಡಿ ಪರೀಕ್ಷಿಸಿದರೆ ತಿಳಿಯಬಹುದು. ಇದರಿಂದ ಈ ಆಸಾಮಿಗೆ ಗಡ್ಡ ಮೀಸೆಗಳೊಂದೂ ಇಲ್ಲವೆಂದು ತೋರುತ್ತದೆ. ಇದ್ದಿದ್ದಪಕ್ಷದಲ್ಲಿ ಗಡ್ಡ ಮೀಸೆಗಳದೂ ಒಂದೆರಡು ಕೂದಲು ಅಂಟಿಕೊಂಡೇ ಇರುತ್ತಿದ್ದಿತು. ಅವನು ಖಂಡಿತವಾಗಿಯೂ, ಇದರಿಂದಲೇ ಅವನ ತಲೆ ಮುಖ ಮುಂತಾದುವನ್ನು ಒತ್ತಿ ಒರಸಿಕೊಂಡಿರಬೇಕು—ಏತಕ್ಕೆಂದರೆ ರಕ್ತದ ಕಲೆಗಳು ಬೇಗ ಹೋಗುವುದಿಲ್ಲ; ಮತ್ತೂ ಕೊಲೆ ಮಾಡುವ ಸಮಯದಲ್ಲಿ ಮನುಷ್ಯನ ಕೈಕಾಲುಗಳಲ್ಲಿ ಅದೊಂದು ಬಗೆಯ ಪೈಶಾಚಿಕ ಶಕ್ತಿಯ ಸಂಚಾರವಾಗುತ್ತದೆ. ಆ ಸಮಯದಲ್ಲಿ ಮನುಷ್ಯನು ಯಾವ ಕೆಲಸ ಮಾಡಿದರೂ ಎಲ್ಲದರಲ್ಲಿಯೂ ಬುದ್ಧಿಶ್ಯವಿಲ್ಲದೆ ವ್ಯರ್ಥವಾಗಿಯೇ ಬಲಪ್ರಯೋಗ ಮಾಡುತ್ತಾನೆ. ಅದಕಾರಣ ಆ ಸಮಯದಲ್ಲಿ ಮೈಯೊರಸುವ ಬಟ್ಟೆಯು ಹಾಗೆ ಉಪಯೋಗಿಸಲ್ಪಟ್ಟ ಅಂಗಿಯಲ್ಲಿ ಗಡ್ಡ ಮೀಸೆಗಳಿಂದಲೂ ಒಂದೆರಡು ಕೂದಲು ಕಿತ್ತುಬಂದಿರುತ್ತಿದ್ದಿತು. ಈ ಎಲ್ಲವುಗಳ ಮೇಲೆ—ಆ ಮನುಷ್ಯನು ಗೌರವರ್ಣದವನೆಂದು ವ್ಯಕ್ತವಾಗುತ್ತಿದೆ.

ಯೋಗೇಂದ್ರನು ಅರಿಂದಮನ ಮಾತುಕೇಳಿ ವಿಸ್ಮಿತನಾದನು; ಆದರೆ, ಕಡೆಯಲ್ಲಿ ಹೇಳಿದ ಗೌರವರ್ಣದ ಮಾತುಗಳಿಂದ ಅವನನ್ನು ಹಾಸ್ಯಮಾಡುವುದಕ್ಕೆಂದು, ಒಂದು ಅವಕಾಶವನ್ನು ತಾನಾಗಿ ಕಲ್ಪಿಸಿಕೊಂಡನು. ಅವನು—"ಅರಿಂದಮಬಾಬುಗಳೇ, ಅದು ಹೇಗೆ? ಮೈಬಣ್ಣವು ಸ್ವಲ್ಪ ಅಂಗಿಯೊಂದಿಗೆ ಎದ್ದು ಬಂದಿರುತ್ತದೆಯೇನು?" ಎಂದು ಹೇಳಿ ಗಹಗಹಿಸಿ ನಕ್ಕನು.

ಅರಿಂದಮ—ಕಣ್ಣಿದ್ದರೆ ಅದನ್ನೂ ನೋಡಬಹುದು. ಕಣ್ಣಿರುವುದು ಕೇವಲ ನಿಮ್ಮನ್ನೂ ನನ್ನನ್ನೂ ಗಿಡಮರಗಳನ್ನೂ ಮನೆಮಠಗಳನ್ನೂ ನೋಡುವುದಕ್ಕಲ್ಲ—ನೋಡುವುದನ್ನು ಕಲಿತು ಇನ್ನೂ ಅನೇಕ ನೋಡತಕ್ಕ ವಿಷಯಗಳನ್ನು ನೋಡಬೇಕು. ಇದು ಹೊರಗಣ್ಣಿನ ಕೆಲಸವಲ್ಲ.

ಯೋಗೇಂದ್ರ—ಅಂಗಿಯೊಂದಿಗೆ ಶರೀರದ ಬಣ್ಣವು ಇದ್ದು ಬಾರದಿರುವುದಾದರೆ, ಅವನು ಗೌರವರ್ಣದವನೆಂದು ತಿಳಿದುಕೊಳ್ಳುವುದಕ್ಕೆ ಮತ್ತಾವ ಉಪಾಯವೂ ನನಗೆ ಕಂಡುಬರುವುದಿಲ್ಲ.

ಅರಿಂದಮ—ಕಪ್ಪಗಿರುವ ಮನುಷ್ಯನು ಕರಿಯ ಬಣ್ಣವನ್ನು ಅಷ್ಟಾಗಿ ತೋರಿಸುವುದಿಲ್ಲ; ಹಾಗಿಲ್ಲದಿದ್ದರೆ ಅಂಗಿ ಮತ್ತೂ ಚಿತ್ರ ಎರಡೂ ಕರಿಯಬಣ್ಣವಾಗಿರುತ್ತಿರಲಿಲ್ಲ. ಒಂದುವೇಳೆ ಅಂಗಿಯು ಕಪ್ಪಾಗಿದ್ದರೂ ಚಿತ್ರವು ನಿಜವಾಗಿ ಮತ್ತಾವುದಾದರೂ ಬಣ್ಣದ್ದಾಗಿ ಇರುತ್ತಿದ್ದಿತು. ಆಸಾಮಿಯ ವಯಸ್ಸು ನಾಲ್ವತ್ತಕ್ಕೆ ಕಡಿಮೆಯಿಲ್ಲ.

ಯೋಗೇಂದ್ರ—ಹಾಗಾದ ಪಕ್ಷದಲ್ಲಿ ನಿಮ್ಮ ಊಹೆಯ ಮೇರೆಗೆ ಆಸಾಮಿಯ ವಯಸ್ಸು ನಾಲ್ವತ್ತು, ಗೌರವರ್ಣ, ಮಾಂಸಪೇಶಿತ ವಕ್ಷ ಮತ್ತು ಉಬ್ಬಿದ ಕುತ್ತಿಗೆ; ಕೂದಲು ಸ್ವಲ್ಪ ಗುಂಗುರು, ಅವನು ಗಡ್ಡ ಮೀಸೆಗಳಿಲ್ಲದವನು, ಎತ್ತರದಲ್ಲಿ ೫ ಅಡಿ ಆರು ಅಂಗುಲಗಳಿಗಿಂತ ಹೆಚ್ಚಿಲ್ಲ. ಕುತ್ತಿಗೆ ಸ್ವಲ್ಪ ದಪ್ಪ, ಮಟ ಸ್ವಲ್ಪ ಚಿಕ್ಕದು. ಹತ್ಯಾಕಾರಿ ಕೈಗೆ ಸಿಕ್ಕಿದಾಗ—ಈ ನಿಮ್ಮ ಊಹೆಗಳೆಲ್ಲವೂ ಎಷ್ಟುದೂರ ನಿಜವಾಗುವವೋ ನೋಡಬೇಕು.

ಅರಿಂದಮ—ಹಾಗೆಯೇ ಆಗಬಹುದು; ಈಗ ಹೊರಟೆ.

ಯೋಗೇಂದ್ರ—ಪುನಃ ಯಾವಾಗ ನಿಮ್ಮನ್ನು ನೋಡುವುದು?

ಅರಿಂದಮ—ನೋಡುವುದರಿಂದ ಫಲವುಂಟೆಂದು ತಿಳಿದಕೂಡಲೇ. ಈ ಹುಡುಗಿಯ ಒಂದು ಭಾವಚಿತ್ರವನ್ನು ತೆಗೆಯಿಸಿ ಇಡಿ.

ಹೀಗೆಂದು ಹೇಳಿ ಅರಿಂದಮನು ಅಲ್ಲಿಂದ ಹೊರಟುಹೋದನು.

ಶ್ರೀ

# ಮಾಯಾವಿ

## ೧ನೆಯ ಭಾಗ



## ಒಂದನೆಯ ಪರಿಚ್ಛೇದ

### ಪ್ರಾಂತರದಲ್ಲಿ

ರಾತ್ರಿ ಎರಡು ಝಾಮ, ಬಿಡುವಿಲ್ಲದ ಬಿರುಸಾದ ಗಾಳಿಮಳೆಗಳಿಂದ ಆ ರಾತ್ರಿ ಮತ್ತಷ್ಟು ಭಯಂಕರವಾಗಿದೆ! ಆಕಾಶದ ಮೋರೆಗೆ ಕರಿಯ ಬಟ್ಟೆಯ ಪರದೆ ಹಾಕಿದಂತಿದೆ; ಆಕಾಶದ ಒಂದು ಕಡೆಯಿಂದ ಇನ್ನೊಂದು ಕಡೆಯವರೆಗೂ ಮೇಘ ಹರಡಿದೆ; ಆ ಮೇಘವು ದಟ್ಟವಾಗಿದೆ. ಛಿದ್ರಶೂನ್ಯವಾಗಿದೆ ಮತ್ತೂ ಅಂಧಕಾರಮಯವಾಗಿದೆ. ಭೂಮಿಯಿಂದ ಆಕಾಶದತನಕ ಕಗ್ಗತ್ತಲೆಯು ದಟ್ಟವಾಗಿ ಆವರಿಸಿಕೊಂಡಂತಿದೆ. ಅಡಿಗಡಿಗೆ ಸಿಡಿಲು ಗುಡುಗುಗಳ ಭಯಂಕರ ಗರ್ಜನೆ; ಆ ಗರ್ಜನೆಯನ್ನು ಕೇಳಿದರೆ ಎಂತಹ ಸಾಹಸಿಯ ಹೃದಯವಾದರೂ ಕಂಪಿಸುವಷ್ಟುಮಟ್ಟಿಗೆ ವಿಕಟವಾಗಿಯೂ ಭೀತಿಜನಕವಾಗಿಯೂ ಇರುತ್ತಿದೆ. ಒಂದೊಂದು ಸಲ ಮಿಂಚುವುದೇನೋ ನಿಶ್ಚಯ; ಆದರೆ, ಅದರ ಬೆಳಕಿಗಿಂತ ಕಗ್ಗತ್ತಲೆಯೇ ಎಷ್ಟೋ ಮೇಲು. ಘೋರತರವಾದ ಈ ದುರ್ಯೋಗದಲ್ಲಿ ಬಿರುಗಾಳಿಯಿಂದ ಕೂಡಿ ರುದ್ರಮಯವಾಗಿಯೂ, ಭಯಪೂರ್ಣವಾಗಿಯೂ ಇರುವ, ಮತ್ತೂ ಜನರಹಿತವಾಗಿಯೂ ತಾರಕಾಶೂನ್ಯವಾಗಿಯೂ ಇದ್ದು ದಿಗ್ದಿಗಂತಗಳನ್ನು ಗುರ್ತಿಸಲಾಗದಿರುವ ಆ ಮಹಾಂಧಕಾರ ಮಧ್ಯದಲ್ಲಿ ಹದಿನಾಲ್ಕು ವರ್ಷದ ಬಾಲಿಕೆಯೊಬ್ಬಳು ವಿಸ್ತಾರವಾದ ಒಂದು ಪ್ರಾಂತರವನ್ನು ಪಾರಾಗಿ ಹೋಗುವುದಕ್ಕೋಸ್ಕರ ಊರ್ಧ್ವಶ್ವಾಸದಿಂದ ಓಡುತ್ತಿದ್ದಾಳೆ. ಮಿಂಚಿದಾಗಲೆಲ್ಲಾ ಬಾಲಿಕೆಯು ಒಂದುಸಲ ಪ್ರಾಂತರದ ಇತ್ತಕಡೆಯನ್ನೂ ಇನ್ನೊಂದು ತನನೆ ಅತ್ತಕಡೆಯನ್ನೂ ಭಯಚಕಿತ ದೃಷ್ಟಿ

ಯಿಂದ ನೋಡುತ್ತಿದ್ದಳು. ಆ ಬೆಳಕಿನಲ್ಲಿ ಯಾರಾದರೂ ತನ್ನನ್ನು ಕಂಡಾರೆಂದು ಅವಳು ಭಯಪಟ್ಟಿದ್ದಳು. ಬೆಳಕು ಸರಿದು ಕತ್ತಲೆ ಮುಸುಕಿದಾಗ ಆ ಬಾಲಕಿಯು ಎಷ್ಟೋ ಸಮಾಧಾನದಿಂದ ನಿರ್ಭಯವಾಗಿ ಪುನಃ ಇನ್ನಷ್ಟು ದೂರ ಮುಂಬರಿಯುತ್ತಿದ್ದಳು. ಹೀಗೆ ಮಿಂಚಿನಿಂದ ಭಯಂಕರವಾದ, ಮೇಘರಾಶಿಯಿಂದ ಕಪ್ಪಾದ, ಮಳೆಯಿಂದ ಒದ್ದೆಯಾದ, ನಿರ್ಜನವಾದ ಆ ಪ್ರಾಂತರದಲ್ಲಿ, ನಿಶಾಸಮಯದಲ್ಲಿ ಓಡುತ್ತಿರುವ ಆ ಹುಡುಗಿ ಯಾರಾದೀತು?

ಈ ಹುಡುಗಿ ಎಷ್ಟು ಹೊತ್ತಿನಿಂದ ಹೀಗೆ ಕಷ್ಟಪಡುತ್ತಿರುವಳೋ ತಿಳಿಯದು; ಆದರೆ, ಅವಳು ಸಂಪೂರ್ಣವಾಗಿಯೂ ದಣಿದಿದ್ದಳು. ಅವಳ ನಾಸಾರಂಧ್ರದಿಂದಲೂ ಬಾಯಿಂದಲೂ ಬಹು ವೇಗವೇಗ ಉಸಿರಾಡುತ್ತಿದ್ದಿತು. ಪ್ರಯತ್ನಪಟ್ಟು ಸ್ವಲ್ಪದೂರ ಕೊಂಚ ವೇಗ ನಡೆಯುವಳು, ಆದರೆ ಉತ್ತರಕ್ಷಣದಲ್ಲಿಯೇ ಆ ನಡೆಯ ವೇಗವು ಪುನಃ ಕಡಿಮೆಯಾಗಿ ಹೋಗುವುದು—ಅನಂತರ ಸಾಧ್ಯವೇ ಇಲ್ಲ. ಕಾಲು ಕುಸಿದುಬಿದ್ದಿತೋ ಎನ್ನುವ ಹಾಗೆ ಕಾಲು ಮತ್ತೆ ಮುಂದಕ್ಕೇ ಹೊರಡದು. ಆ ವಿಸ್ತಾರವಾದ ವನಭೂಮಿಯಿಂದ ಪಾರಾಗುವುದರಲ್ಲಿ ಆ ಬಾಲಕಿಯು ಎಷ್ಟೋ ತಡವೆ ನೆಲಕ್ಕೆ ಬಿದ್ದು ಉರುಳಿದಳು; ಎಷ್ಟೋ ಸಲ ಎಡವಿ ಬೀಳುವುದರಲ್ಲಿದ್ದಳು. ಮಳೆಯ ನೀರಿನಿಂದ ತೊಯ್ದ ಅವಳ ಸೀರೆಯ ಸೆರಗು ಆ ಬಾಲಕಿಯ ಕಾಲಿಗೆ ತೊಡರಿಕೊಂಡು ಅವಳನ್ನು ಎಷ್ಟೋ ತಡವೆ ನೆಲಕ್ಕೆ ಕೆಡಹಿತು. ಮೇಲೆ ಮೇಘವು ಓಡುತ್ತಿದೆ; ಮೇಘದ ಹಿಂದೆ ಮೇಘವು ಓಡುತ್ತಿದೆ; ಮೇಘದೊಡನೆ ಮೇಘವು ಸೇರಿ ಮೇಘವು ಮತ್ತಷ್ಟು ದಟ್ಟವಾಗಿ ಹರಿಯುತ್ತಿದೆ; ಅದರ ಅಡಿಯಲ್ಲಿ ಬಿರುಗಾಳಿ ಬೀಸುತ್ತಿದೆ; ಬಿರುಗಾಳಿಯು ಬಿರುಗಾಳಿಯೊಡನೆ ಸೇರಿ ಇನ್ನಷ್ಟು ಭಯಂಕರ ವೇಗವಾಗಿ ಓಡುತ್ತಿದೆ. ಅವುಗಳ ಅಡಿಯಲ್ಲಿ ಸಹಾಯಹೀನೆಯಾದ ಆ ಬಾಲಕಿಯು ಪ್ರಾಣಭಯದಿಂದ ನಿರ್ವಾಹವಿಲ್ಲದೆ ಓಡುತ್ತಿದ್ದಾಳೆ!

ವನಭೂಮಿಯನ್ನು ಕಳೆದು ಬಂದಾಗ ಆ ಬಾಲಕಿಗೆ ಒಂದು ಸಣ್ಣ ಗ್ರಾಮವು ಕಾಣಿಸಿತು. ಆದರೆ ಆ ಸಮಯದಲ್ಲಿ ಆ ಗ್ರಾಮವು

ಕೂಡ ನಿರ್ಜೀವವಾಗಿ ಕಾಣಿಸಿತು. ಜನ ಜಂತುಗಳ ವಾಸಸ್ಥಾನವೆಂಬುದಕ್ಕೆ ಯಾವ ಚಿಹ್ನೆಯೂ ಇಲ್ಲ. ಬಾಲಕಿಯು ಊರೊಳಕ್ಕೆ ಬಂದು ಹತಾಶಳಾಗಿ, ನಿರ್ಜೀವವಾದ ಆ ಗ್ರಾಮದ ನಾಲ್ಕೂ ಕಡೆಗಳನ್ನು ಕಾತರದೃಷ್ಟಿಯಿಂದ ನೋಡಿದಳು. ಚಪಲಸ್ವಭಾವದ ಆ ಮಿಂಚು ಮರಣೋನ್ಮುಖಿಯಾಗಿ ಹತಾಶಳಾದ ಬಾಲಕಿಯ ದೃಷ್ಟಿಗೆ ಆ ನಿರ್ಜೀವ ಗ್ರಾಮದ ಚಿತ್ರವನ್ನು ಎತ್ತಿ ತೋರಿಸಿ ಪರಿಹಾಸ್ಯ ಮಾಡುವುದೋ ಏನೋ ಎನ್ನುವಹಾಗೆ ಇದ್ದಿತು; ಆದರೆ ಅದರಿಂದ ಬಾಲಕಿಯ ದುರ್ಬಲವಾದ ಮತ್ತೂ ಯಾತನಾಪೂರ್ಣವಾದ ಹೃದಯಕ್ಕೆ ಬಹುಮಟ್ಟಿಗೆ ಸಮಾಧಾನವೇ ಆಯಿತು. ಅವಳು ಬೇಗನೆ ಗ್ರಾಮ ಮಧ್ಯಕ್ಕೆ ಬಂದಳು.

ಬಾಲಕಿಯು ಬಹಳ ಹೊತ್ತಿನಿಂದ ಮಳೆಯಲ್ಲಿ ತೊಯ್ದಿದ್ದಾಳೆ, ಮತ್ತೂ ಸಹಿಸಲಸಾಧ್ಯವಾದ ಛಳಿಯಿಂದ ಅವಳ ಮೈಯೆಲ್ಲವೂ ನಡುಗುತ್ತಿದೆ. ಉಜ್ವಲವಾಗಿ ಗೌರವರ್ಣದಿಂದ ಇದ್ದ ಅವಳ ಶರೀರ ಮತ್ತೂ ಮುಖಕಾಂತಿ ಇವು ಈಗ ಬಿಳುಪಾಗಿವೆ; ಅಂಗಾಂಗಗಳು ದುರ್ಬಲವಾಗಿವೆ; ನನೆದು ರಾಶಿಯಾದ ಅವಳ ಕೃಷ್ಣ ಕೇಶದಾಮವು ಅವಳ ಬೆನ್ನು, ಎದೆ, ಭುಜ, ತೋಳು ಮುಂತಾದ ಕಡೆಗಳಲ್ಲಿ ಗುಚ್ಛಗುಚ್ಛವಾಗಿ ಅಂಟಿಕೊಂಡಿರುತ್ತದೆ.

ಬಾಲಕಿಯು ಗ್ರಾಮ ಮಧ್ಯಕ್ಕೆ ಬಂದು ನೋಡಿದಳು; ಹತ್ತಿರದಲ್ಲಿಯೇ ಒಂದು ಮನೆಯಲ್ಲಿ ಈಗಲೂ ದೀಪ ಉರಿಯುತ್ತಿದ್ದಿತು. ಏಕಮಾತ್ರವಾದ ಆ ದೀಪದ ಬೆಳಕನ್ನೇ ಲಕ್ಷ್ಯವಾಗಿಟ್ಟುಕೊಂಡು ಆ ಬಾಲಕಿಯು ನೂತನ ಬಲದಿಂದ ಮತ್ತಷ್ಟು ವೇಗವಾಗಿ ನಡೆದಳು. ಹತ್ತಿರ ಹೋಗಿ ನೋಡಿದಳು, ಅದೊಂದು ಚಿಲ್ಲರೆ ಅಂಗಡಿ. ಅಲ್ಲಿ ನಾಲ್ಕೈದು ಮಂದಿ ಕುಳಿತು ಇಸ್ಪೀಟಾಡುತ್ತಲಿದ್ದರು, ಒಬ್ಬಿಬ್ಬರು ತಂಬಾಕು ಸೇದುತ್ತಿದ್ದರು. ಆ ಸಮಯದಲ್ಲಿ ಕೆಲವರು ನಗುತ್ತಿದ್ದರು, ಕೆಲವರು ಮಾತನಾಡುತ್ತಿದ್ದರು. ಒಬ್ಬನು ಅನ್ಯಮನಸ್ಕನಾಗಿ ಅನುಚ್ಚಸ್ವರದಿಂದ ಹಾಡುತ್ತಿದ್ದನು. ಅಂಗಡಿಯವನೂ ಕೂಡ ಆಟವಾಡುವವರ

ಸಂಗಡ ಸೇರಿದ್ದಾನೆ; ಅವನ ಹೆಸರು ವಲಾಯಿಮುಂಡಲ ಎಂದು. ಉಳಿದ ಮೂರುನಾಲ್ಕು ಮಂದಿಯೂ ಅದೇ ಊರಿನವರು. ಈ ದುರ್ಯೋಗ ಸಮಯದಲ್ಲಿ ಅಂಗಡಿಯವನು ಗಿರಾಕಿಗಳು ಬಂದಾರೆಂಬ ಭರವಸೆಗೆ ಜಲಾಂಜಲಿ ಕೊಟ್ಟಿದ್ದನು. ಮಿಕ್ಕವರು ಈ ಗಾಳಿ ಮಳೆಯಲ್ಲಿ ಮನೆಗೆ ಹೋಗುವುದು ಅಸಾಧ್ಯವೆಂದು ಭಾವಿಸಿ, ಮತ್ತೇನೂ ಕೆಲಸವಿಲ್ಲದ್ದರಿಂದ ಇಸ್ಪೀಟಾಟಕ್ಕೆ ಮನಗೊಟ್ಟಿದ್ದರು. ಈ ವೇಳೆಗೆ ಆಟವು ಇನ್ನೂ ನಡೆಯುತ್ತಿದ್ದಿತು ಮತ್ತೂ ಜಮಾವಣೆಯಾಗಿ ಸೇರಿಯೂ ಇದ್ದಿತು.

ಆಟವು ಚೆನ್ನಾಗಿ ಸೇರಿದ್ದ ಸಮಯದಲ್ಲಿ ಆ ಬಾಲಕಿಯು ಅಲ್ಲಿಗೆ ಬಂದು, ಇಲ್ಲಿ "ಗೋಸ್ವಾಮಿಪುರವು ಎಲ್ಲಿದೆ ಎಂಬುದನ್ನು ಯಾರಾದರೂ ಬಲ್ಲಿರಾ?" ಎಂದು ಕಂಪಿತ ಕಂಠದಿಂದ ಕೇಳಿದಳು.

ಮೊದಲು ಯಾರೂ ಮಾತನಾಡಲಿಲ್ಲ. ಯಾರು ಇಸ್ಪೀಟಾಡುತ್ತಿದ್ದರೋ ಅವರ ಆಟವು ಅಷ್ಟಕ್ಕೇ ನಿಂತಿತು; ತಂಬಾಕು ಸೇದುತ್ತಿದ್ದವನ ಕೈಯ್ಯಲ್ಲಿದ್ದ ಹುಕ್ಕೆಯು ನಡನಡುಗುತ್ತ ಅವನ ಕಯ್ಯಿಂದ ಜಾರಿ ನೆಲಕ್ಕೆ ಬಿದ್ದು ಶಬ್ದಮಾಡಿತು; ಕತೆ ಹೇಳುತಿದ್ದವನು ಆ ವೇಳೆಗೆ ಒಂದು ಭೂತದ ಕತೆ ಹೇಳುತ್ತಾ ಅರ್ಧಮಾತ್ರ ಹೇಳಿದ್ದನು; ಈಗ ಅವನಿಗೆ ಮಾತನಾಡುವ ಶಕ್ತಿಯೇ ಅಡಗಿಹೋಯಿತು; ಅಸ್ಫುಟಸ್ವರದಿಂದ ಹಾಡುತ್ತಿದ್ದವನ ಸಂಗೀತವು ಮುಕ್ತಾಯಕ್ಕೆ ಬರುವ ಮೊದಲೇ ನಿಂತುಹೋಯಿತು; ಹೀಗೆ ಎಲ್ಲರ ವಾಕ್ಶಕ್ತಿಯೂ ಅಡಗಿಹೋಗಿ ಎಲ್ಲರೂ ಆ ಬಾಲಕಿಯ ಮುಖವನ್ನೇ ನೋಡುತ್ತಲಿದ್ದರು.

ಬಾಲಕಿಯು ಪುನಃ ಕೇಳಿದಳು. ಆದರೂ ಯಾರೂ ಉತ್ತರ ಕೊಡಲಿಲ್ಲ. ಮುಖ್ಯವಾಗಿ, ಆ ಭೂತದ ಕತೆ ಹೇಳುತ್ತಿದ್ದವನು, ಕೆಲವು ದಿನಗಳ ಮುಂಚೆ, ಅಮಾವಾಸ್ಯೆಯ ರಾತ್ರಿ, ತಾನು ಕಣ್ಣಾರ ಪಿಶಾಚವನ್ನು ನೋಡಿದ್ದನಸಂತೆ ಆ ಅದ್ಭುತ ಚರಿತ್ರೆಯನ್ನು ಬಹು ಸಾಹಸದೊಡನೆ ಹೇಳುತ್ತಿದ್ದನು. ಈ ಬಾಲಕಿಯನ್ನು ಕಂಡು ಭಯದಿಂದ ಅವನಿಗೆ ಎದೆ ನಡುಕವುಂಟಾಯಿತು; ಹಾಗೆಯೇ ಅವನ ಹೃದಯ ರಕ್ತವು ಕಾದು ಕುದಿಯತೊಡಗಿತು. ಆಗ ಅವನು ಆತ್ಮಸಂರಕ್ಷಣೆ

ಗಾಗಿ ಮೆಲ್ಲಮೆಲ್ಲಗೆ, ರಕ್ಷಾಮಂತ್ರವನ್ನು ಪುನಶ್ಚರಣಮಾಡತೊಡಗಿದನು.

ಬಾಲಕಿಯು ಇನ್ನೊಂದುಸಲ "ಗೋಸ್ವಾಮಿಪುರವೆಂಬುದು ಎಲ್ಲಿದೆ?" ಎಂದು ಕೇಳಿದಳು.

ಅವರ ಮಧ್ಯೆ ವಲಾಯಿಚಾಂಡನು "ನೀನು ಯಾರು? ಎಲ್ಲಿಂದ ಬಂದೆ?" ಎಂದು ಕೇಳಿ, ತನ್ನ ಅಸಮಾನವಾದ ಸಾಹಸದ ಪರಿಚಯ ಮಾಡಿಕೊಟ್ಟನು.

ಹುಡುಗಿಯು ಆ ಮಾತಿಗೆ ಯಾವ ಉತ್ತರವನ್ನೂ ಹೇಳದೆ, "ನಾನು ತುಂಬಾ ಕಷ್ಟಕ್ಕೆ ಸಿಕ್ಕಿದ್ದೇನೆ, ನನಗೆ ನಿಲ್ಲುವುದಕ್ಕೂ ಸಾಮರ್ಥ್ಯವಿಲ್ಲ; ಗೋಸ್ವಾಮಿಪುರವು ತಿಳಿದಿರುವುದಾದರೆ ಅದು ಎತ್ತಕಡೆ ಎಂಬುದನ್ನು ನನಗೆ ಬೇಗ ಹೇಳಿಬಿಡಿ, ನಾನು ಮಹಾವಿಪತ್ತಿಗೆ ಸಿಕ್ಕಿದ್ದೇನೆ" ಎಂದು ಹೇಳಿದಳು.

ವಲಾಯಿಚಾಂಡನ ಸಾಹಸವನ್ನು ಅಲ್ಲಿಯೇ ಇದ್ದ ಹಲಧರನೆಂಬವನು ನೋಡಿದನಾಗಿ ಅವನು ತನ್ನ ಸಾಹಸವನ್ನೂ ಕೂಡ ಮೇರೆಮೀರುವಂತೆ ಮಾಡಿದನು. ಆಗ ಅವನು ಒಂದು ಸಲ ಬಾಲಿಕಾ ರೂಪದ ಆ ಪಿಶಾಚಿಯ ಸಂಗಡ "ಗೋಸ್ವಾಮಿಪುರದಲ್ಲಿ ಯಾರಲ್ಲಿಗೆ ಹೋಗುವೆ?" ಎಂದು ಮಾತನಾಡಿ ತನ್ನ ಸಾಹಸದ ಪರಿಚಯ ಮಾಡಿಕೊಟ್ಟನು.

ಬಾಲಕಿಯು ಒಂದುಸಲ ಹಿಂದು ಮುಂದು ಆಲೋಚಿಸಿದಳು; ಹೆಸರು ಹೇಳಲಿಲ್ಲ.

ಹೆಸರನ್ನು ಕೇಳಿ ತಿಳಿಯಲೇಬೇಕೆಂಬ ಸಂಕಲ್ಪವು ಹಲಧರನಿಗೇನೂ ಇರಲಿಲ್ಲ; ಅವನು ಆ ಬಾಲಕಿಯ ಸಂಗಡ ಮಾತನಾಡಿ, ತನ್ನ ಸಂಗಡಿಗರಿಗೆ ತನ್ನ ಅಸಮಾನ ಸಾಹಸ ಪರಾಕ್ರಮಗಳ ಪರಿಚಯ ಮಾಡಿಕೊಟ್ಟು, ಅವರನ್ನು ಮರುಳುಮಾಡುವುದಕ್ಕಾಗಿಯೇ ಆ ರೀತಿ ಉಪಕ್ರಮಿಸಿದ್ದು. ಬಾಲಕಿಯು ಮಾತನಾಡದಿದ್ದುದನ್ನು ಕಂಡು ಅವನು

ತನ್ನ ಅಮಾನುಷಿಕವಾದ ಸಾಹಸವನ್ನು ತೋರಿಸಿ, "ಗೋಸ್ವಾಮಿಪುರವು ಇಲ್ಲಿಗೆ ಬಹುದೂರ. ಈ ದಿಕ್ಕಿಗೆ ಹೋಗುವ ಕಾಲುವೆಯ ಕಟ್ಟೆಯ ಮೇಲೆ, ನೇರವಾಗಿ ದಕ್ಷಿಣಕ್ಕೆ ಹೋದರೆ ಸುಮಾರು ಮುಕ್ಕಾಲು ಮೈಲಿ ದೂರದಲ್ಲಿ ಗೋಸ್ವಾಮಿಪುರವಿದೆ. ಈ ಮಳೆ ಗಾಳಿಗಳಲ್ಲಿ ನೀನೊಬ್ಬಳೇ ಹೋಗಲಾರೆ; ಎಲ್ಲಿಯಾದರೂ ಹಾದಿಗೇದಿ ತಪ್ಪಿತೆಂದರೆ ಪ್ರಾಣವೇ ಹೋಗುವುದು" ಎಂದು ಹೇಳಿದನು.

ಬಾಲಕಿಯು ಮತ್ತೆ ಯಾವ ಮಾತನ್ನೂ ಆಡದೆ ಭಯಗೊಂಡು ಅಲ್ಲಿಂದ ಸರಿದುಹೋದಳು. ಆ ಮಳೆ ಗಾಳಿಗಳನ್ನು ಲಕ್ಷಿಸದೆ ನೂತನ ಶಕ್ತಿಯಿಂದ ದಕ್ಷಿಣಾಭಿಮುಖವಾಗಿ ಮತ್ತೆ ಹೊರಟಳು.

ಈ ಬಾಲಕಿ ಯಾರು?

---

## ಎರಡನೆಯ ಪರಿಚ್ಛೇದ

### ಈ ಬಾಲಕಿ ಯಾರು?

ನೋಡುತ್ತಿದ್ದ ಹಾಗೆಯೇ ಬಾಲಕಿಯು ಎವೆಯಿಕ್ಕುವುದರ ಒಳಗಾಗಿ ಹೊರಗಡೆಯ ಆ ಕಗ್ಗತ್ತಲಲ್ಲಿ ಎಲ್ಲಿಯೋ ಮರೆಯಾದುದನ್ನು ಕಂಡು, ಅಲ್ಲಿದ್ದ ಎಲ್ಲರ—ಸಾಹಸಿಯಾದ ಪಟಾಯಿಮಂಡಲ, ಅವನಿಗಿಂತಲೂ ಪ್ರಬಲ ಸಾಹಸಿಯಾದ ಹಲಧರ—ಎಲ್ಲರ ಮುಖವೂ ಬಾಡಿ ಭಯದಿಂದ ಬತ್ತಿಹೋಯಿತು. ಮುಂದೇನು ಮಾಡಬೇಕೆಂಬುದನ್ನು ಅರಿಯದೆ ಎಲ್ಲರೂ ನಿಶ್ಚೇಷ್ಟಿತರಾಗಿದ್ದರು.

ಇದಕ್ಕೆ ಮೊದಲು ಭೂತದ ಕತೆ ಹೇಳುತ್ತಿದ್ದವನ ಹೆಸರು ಹಾರಾಣಚಂದ್ರ. ಅವನು ಹೇಳಿದನು—"ಇದು ಮತ್ತೇನೂ ಅಲ್ಲವಯ್ಯ, ಹಲಧರ; ನಾನು ಈಗ ಯಾರ ಮಾತು ಹೇಳುತ್ತಿದ್ದೆನೋ ಅದೇ ಇದು; ಆ ಬಿದಿರುಮೆಳೆಯ ಹತ್ತಿರ ಯಾವುದನ್ನು ನೋಡಿದ್ದೆನೋ ನಿಶ್ಚಯವಾಗಿಯೂ ಅದೇ ಇದು. ಒಂದು ಸಲ ಎಚ್ಚರಿಕೆ ಕೊಟ್ಟು ಹೋಯಿತು. ಈಗ ನೋಡು, ಇಷ್ಟು ರಾತ್ರಿಯಲ್ಲಿ—ಇದೂ ಅಲ್ಲದೆ

ಇಂದು ಶನಿವಾರ, ಈ ಮಳೆಗಾಳಿಗಳು, ಆ ಸುದ್ದಿ ಎತ್ತಿದ್ದೇ ಒಳ್ಳೆಯದಾಗಲಿಲ್ಲ; ಹಾಗಲ್ಲವಾದರೆ ಈ ಮಳೆಗಾಳಿಯಲ್ಲಿ ಹೊರಗೆ ಹೊರಟು ಬರುವುದಕ್ಕೆ ಮನುಷ್ಯನ ಅಪ್ಪನಿಗೆ ತಾನೇ ಸಾಧ್ಯವೇನಯ್ಯ; ನನಗೆ ಚೆನ್ನಾಗಿ ಗೊತ್ತಾಯಿತು. ಕುತ್ತಿಗೆಗೆ ನೇಣುಹಾಕಿಕೊಂಡು ಹೋದಳಲ್ಲಾ ಅವಳೇ!—ಆ ಘೋಷಾಲರ ಕಿರಿಯ ಸೊಸೆ.”

ಇನ್ನೊಬ್ಬ—ಬಿಡುಬಿಡಯ್ಯ, ಅವಳು ಇಷ್ಟು ಚೆನ್ನಾಗಿದ್ದಳೇನು; ಇವಳ ಕಣ್ಣು ಮುಖಗಳನ್ನು ನೀನು ಸರಿಯಾಗಿ ನೋಡಿದ ಹಾಗಿಲ್ಲ; ಸಾಕ್ಷಾತ್ ದುರ್ಗಾಪ್ರತಿಮೆಯೇ ಸರಿ.

ಆಗ ಹಾರಾಣಚಂದ್ರನು—ನಾನು ಚೆನ್ನಾಗಿ ನೋಡಿದೆ; ಅವಳು ಇಲ್ಲಿ ನಿಂತಿರುವತನಕ ಅವಳ ನೆರಳು ಸ್ವಲ್ಪವಾದರೂ ಕಾಣಿಸಲಿಲ್ಲ. ಕುತ್ತಿಗೆಗೆ ನೇಣು ಹಾಕಿಕೊಂಡು ಸತ್ತುಹೋದ ಘೋಷರ ಚಿಕ್ಕ ಸೊಸೆಯೇ ಹೊರತು ಬೇರೆ ಅಲ್ಲ. ನಾನು ಇದಕ್ಕೆ ಮೊದಲೇ ಒಂದು ದಿನ ಇವಳನ್ನು ಕಣ್ಣಾರ ಕಂಡಿದ್ದೇನೆ; ರೂಪ-ಕುರೂಪಗಳ ಮಾತು ಕಟ್ಟಿಡು. ಅವು ಯಾವರೀತಿ ಆಗಬೇಕೆಂದರೆ ಆ ರೀತಿ ಆಗಬಲ್ಲವು; ಈ ದಿನ ನೀನು ಕಂಡೆ, ನಾನು ಆ ದಿನ ನೋಡಿದಾಗ ರೂಪವು ಮೋಹಿನಿಯ ಹಾಗಿದ್ದಿತು; ಆ ದಿನ ಮತ್ತೆ ಯಾರಾದರೂ ಆಗಿದ್ದಪಕ್ಷದಲ್ಲಿ ಅದರ ಮೋಸಕ್ಕೆ ಒಳಗಾಗುತ್ತಿದ್ದರು—ಅದರಿಂದ ಸಾಯುತ್ತಿದ್ದರು, ನಾನು ಕಾಣಯ್ಯ, ಧೀರ, ತಪ್ಪಿಸಿಕೊಂಡುಬಂದೆ;—ಎಂದು ಅನೇಕವಾಗಿ ಕಠಿಣ ಪ್ರಮಾಣಗಳನ್ನು ಮಾಡುತ್ತಾ ಹೇಳಿದನು.

ಪಲಾಯುಮಂತಲನು ಮತ್ತೊಂದು ವಾರಿ ಹಿಡಿದು “ಇದೆಲ್ಲಾ ಕೆಲಸಕ್ಕೆ ಬಂದ ಮಾತಲ್ಲ, ಗೋಸಾಯಿಪುರದಲ್ಲಿ ಯಾರ ಮಗಳೂ ಆಗಿರಬೇಕು; ನೋಡಿದರೆ ಅತ್ತೆಮನೆಯಲ್ಲಿ ತುಂಬಾ ಕಷ್ಟಪಟ್ಟಿರಬೇಕು; ಅದರಿಂದ ಈ ದಿನ ಈ ಮಳೆಗಾಳಿ ಬಂದದ್ದೇ ಅನುಕೂಲವೆಂದೆನಿಸಿತು, ತಂದೆಯ ಮನೆಗೆ ತಪ್ಪಿಸಿಕೊಂಡು ಬಂದಿರಬೇಕು” ಎಂದು ಹೇಳಿದನು.

ತಂಬಾಕು ಸೇದುವುದನ್ನು ನಿಲ್ಲಿಸಿ, ಇಸ್ಪೀಟಾಟವನ್ನು ನಿಲ್ಲಿಸಿ, ಕತೆ ಹೇಳುವುದನ್ನು ನಿಲ್ಲಿಸಿ, ಅಸ್ಫುಟಸ್ವರದಿಂದ ಹಾಡುವುದನ್ನು ನಿಲ್ಲಿಸಿ

ಸುಮಾರು ಅರ್ಧಗಂಟೆಯವರೆಗೂ ಅವರು ಈ ವಿಚಾರವನ್ನು ಕುರಿತೇ ಮಾತನಾಡುತ್ತಿದ್ದರು; ಅಷ್ಟು ಹೊತ್ತಿಗೆ ಅಲ್ಲಿಗೆ ಮತ್ತೊಂದು ಮೂರ್ತಿಯು ಓಡೋಡಿ ಬಂದು ನಿಂತಿತು.

ಆ ಆಗಂತುಕನ ರೀತಿಯನ್ನು ನೋಡಿ ಎಲ್ಲರೂ ಭಯಪಟ್ಟರು. ವಿಕಟವಾದುದಕ್ಕಿಂತಲೂ ವಿಕಟವಾದ, ಕುತ್ಸಿತರೂಪಕ್ಕೂ ಕುತ್ಸಿತ ರೂಪವಾದ ಆ ಮಾದರಿಯ ಮನುಷ್ಯನನ್ನು ಅವರೆಗೂ ಅವರು ಕಂಡು ಇಲ್ಲವೆಂದೇ ಅವರು ಭಯಪಟ್ಟದ್ದು. ಅವನ ಆಜಾನುಬಾಹುವಾದ ಬಲಿಷ್ಠ ಶರೀರ, ಉದ್ದುದ್ದವಾದ ಕೈಕಾಲುಗಳು, ಅವನ ದೇಹದ ಅಚ್ಚಕಪ್ಪು ಬಣ್ಣ,—ಅವನ ಮೈಬಣ್ಣದ ಉಜ್ವಲತೆಯು ಎಣ್ಣೆಬೆರತ ಮಸಿಯ ಉಜ್ವಲತೆಯನ್ನೂ ನಾಚಿಸುತ್ತದೆ,—ದೊಡ್ಡದಾದ ಮುಖ ಮಂಡಲ, ಆ ದೊಡ್ಡ ಮುಖಮಂಡಲದಲ್ಲಿ ಕೆಂಡಗಳಂತಿರುವ ಬಹು ಸಣ್ಣವಾದ ಎರಡು ಕಣ್ಣುಗಳು, ಪ್ರಶಸ್ತವಾದ ಮೂಗು, ವಿಕಾರವಾದ ದಂತಪಙ್ಕ್ತಿ!

ಇಷ್ಟರಮೇಲೆ ಇದಕ್ಕೆ ಸಮಾನವಾಗಿಯೇ ಇರುವ ಕರ್ಕಶ ಕಂಠದಿಂದ "ಏನಯ್ಯಾ, ಇತ್ತಕಡೆ ಒಬ್ಬ ಹುಡುಗ ಹೋಗು ತ್ತಿದ್ದವನನ್ನು ನೋಡಿದಿರಾ?" ಎಂದು ಕೇಳಿದನು.

ಯಾರೂ ಏನೊಂದು ಮಾತನ್ನೂ ಆಡಲಿಲ್ಲ.

ಆಗ, ಆ ವಿಕಟ ಆಗಂತುಕನ ವಿಕಟತರವಾದ ಕರ್ಕಶ ಸ್ವರವು ಸಪ್ತಮಕ್ಕೆ ಏರಿ ಮತ್ತಷ್ಟು ಕರ್ಕಶವಾಗಿ ಕೇಳಿಸಿತು. "ಏನ್ರೋ, ನೀವು ಯಾರೂ ಮಾತನಾಡುವುದಿಲ್ಲ? ಮೂಕರಲ್ಲವಷ್ಟೆ? ನಿಶ್ಚಯ ವನ್ನು ಹೇಳದಿರುವಿರಾದರೆ ಕಂಡಿರುವಿರೋ ಇಲ್ಲವೋ ನನ್ನ ಕೈಲಿರು ವುದನ್ನು?" ಎಂದು ಹೇಳಿ ಒಂದು ದೀರ್ಘವಾದ ಚೂರಿಯನ್ನು ಹೊರಗೆ ತೆಗೆದು ತೋರಿಸಿದನು.

ಆಗ, ಆ ಬಹು ಸಾಹಸಿಗನಾದ ಹಲಧರನು ಭಯಗೊಂಡು ನಡುಗುವ ಸ್ವರದಿಂದ "ಹ್ಞಾ, ಅರ್ಧಘಂಟೆಯಾಗಿರಬಹುದು, ಒಬ್ಬ

ಹುಡುಗಿಯು ದಕ್ಷಿಣ ಕಡೆ ಇರುವ ದೊಡ್ಡ ಕಾಲುವೆಯ ಮೇಲಿಂದ ಗೋಸ್ವಾಮಿಪುರದ ಕಡೆ ಹೋದಳು" ಎಂದು ಹೇಳಿದನು.

ಕೇಳಿದುದೇ, ಆಗಂತುಕನು ಅಲ್ಲಿ ಅರೆಗಳಿಗೆಯೂ ನಿಲ್ಲಲಿಲ್ಲ. ಬಾಲಕಿಯು ಬೆನ್ನಟ್ಟುವುದಕ್ಕಾಗಿ ಹೊರಟುಹೋದನು. ಅತಿ ಸಾಹಸಿಯಾದ ಹಲಧರನು ಆಗ ನಿರ್ಭಯ ಸೂಚಕವಾದ ದೀರ್ಘವಾದೊಂದು ನಿಟ್ಟುಸಿರಿಟ್ಟು ಬದುಕಿಕೊಂಡನು.

ಹಲಧರ—ವ್ಯಾಪಾರವೇನಿರಬಹುದು, ಹೇಳು ನೋಡೋಣ.

ಮಲಾಯಿಮಂಡಲ—ಯಾವುದೂ ಗೊತ್ತಾಗುವ ಹಾಗಿಲ್ಲ, ಇದರಲ್ಲಿ ಏನೋ ಗೂಢವಾದ ರಹಸ್ಯವಿರುತ್ತದೆ.

ಹಾರಾಣಚಂದ್ರ—ಇದು ಮತ್ತೇನೂ ಅಲ್ಲ; ಎಲ್ಲವೂ ಭೂತದ ಆಟ.

ಮಲಾಯಿಮಂಡಲ—ಅಲ್ಲ ಅಲ್ಲ; ಭೂತವಲ್ಲ. ಈ ಮನುಷ್ಯನಿಗೆ ಏನೋ ದುರುದ್ದೇಶವಿದೆ.

ಇದೇ ರೀತಿಯಾಗಿ ಕೊಂಚ ಕಾಲದವರೆಗೆ ಮಾತು ಕತೆಗಳಾಗುತ್ತಿದ್ದುವು. ಅಕಸ್ಮಾತ್ತಾಗಿ, ಯಾರೋ ದೂರದಲ್ಲಿ, ಸ್ತ್ರೀ ಕಂಠದಿಂದ, "ಅಯ್ಯೋ ಯಾರಿದ್ದೀರಪ್ಪ, ಬೇಗ ಬನ್ನಿ, ಖೂನಿ, ಖೂನಿ ಮಾಡುತ್ತಾನೆ. ಖೂನಿ—ಖೂನಿ" ಎಂದು ಆರ್ತನಾದವಾಡಿದರು.

ಮಲಾಯಿಮಂಡಲನು ಎದ್ದು ನಿಂತು:—"ಈಗಲೀಗ ಸರಿ ಹೋಯಿತು, ಆ ಮನುಷ್ಯನೇ ಇರಬೇಕು, ಆ ಹುಡುಗಿಯನ್ನು ಕೊಲೆಮಾಡಿದ್ದಾನೆ. ನಡೆಯಿರಿ, ಸುಮ್ಮನೆ ಕುಳಿತಿದ್ದರೆ ಸಾಗುವುದಿಲ್ಲ. ಬನ್ನಿ, ಎಲ್ಲರೂ ಸೇರಿ ಈಗಲಾದರೂ ಆ ಹುಡುಗಿಯನ್ನು ಬದುಕಿಸಬಹುದೋ ಏನೋ ನೋಡೋಣ" ಎಂದು ಹೇಳಿದನು.

ಆಗ ಮಂಡಲನು ದಪ್ಪದಪ್ಪನಾದ ಮೂರು ನಾಲ್ಕು ದೊಣ್ಣೆಗಳನ್ನು ಹೊರಕ್ಕೆ ತೆಗೆದನು. ಒಬ್ಬೊಬ್ಬರು ಒಂದೊಂದು ದೊಣ್ಣೆ ಹಿಡಿದರು; ಎಲ್ಲರೂ ದೊಣ್ಣೆ ಎತ್ತಿಕೊಂಡರು; ಕೇವಲ ಪೀರಕುಲ

ಚೂಪಾಮೊನೆಯಾದ ಹಾರಾಣಚಂದ್ರನು ಮಾತ್ರ ದೊಣ್ಣೆ ಹಿಡಿಯಲಿಲ್ಲ. "ನಿಮ್ಮ ಮಾತುಗಳಿಗೆ ಮರುಳಾಗಿ ನಾನು ಪ್ರಾಣ ಕಳೆದುಕೊಳ್ಳಲಾರೆ. ಹೋಗುವುದಾದರೆ, ನೀವುಗಳು ಹೋಗಿ; ನಾನಾದರೋ ಪ್ರಾಣ ವಿರುವವರೆಗೂ ಬರಲಾರೆ. ಧೂರ್ತಗಳು ಇಂತಹ ಅನೇಕ ತಂತ್ರಗಳನ್ನೂ ಬಲ್ಲುವು. ಈ ಉಪಾಯದಿಂದ ಮರುಳುಮಾಡಿ ಒಂದು ಸಲ ಕಾಲ್ವೆಯ ಕಡೆ ಕರೆದುಕೊಂಡು ಹೋದರೆ ತೀರಿತು. ಅನಂತರ ಅವರ ಜೀವಾಳ ವನ್ನು ಚೆನ್ನಾಗಿಯೂ ನೋಡಬಹುದು. ಅಲ್ಲವೇನಯ್ಯಾ ಹಲಧರ?" ಎಂದು ಹೇಳಿದನು.

ಹಲಧರನು "ಹೌದು" ಅಥವಾ "ಅಲ್ಲ" ಯಾವುದನ್ನೂ ಹೇಳಲಿಲ್ಲ.

ಹಾರಾಣಚಂದ್ರನು ಬಹುತೊಂದರೆಗೆ ಸಿಕ್ಕಿದನು. ಒಂದುವೇಳೆ ಎಲ್ಲರೂ ಹೊರಟುಹೋದರೆ, ಹಾಗಾದರೆ ಆ ಸಮಯದಲ್ಲಿ ತಾನು ಅಲ್ಲಿ ಒಬ್ಬಂಟಿಗನಾಗಿ ಇರಬೇಕಾಗುವುದು. ಅಲ್ಲದೆ ಅವರ ಸಂಗಡ ಹೋದರೆ ಉಂಟಾಗುವುದೆಂದು ಶಂಕಿಸಿರುವ ವಿಪತ್ತಾದರೂ ಸಾಮಾನ್ಯವಾದುದಲ್ಲ; ಆದಕಾರಣವೇ ಹಾರಾಣಚಂದ್ರನು ಹಲಧರನನ್ನು ತನ್ನಂತೆ ಮಾಡಿಕೊಳ್ಳಲು ಪ್ರಯತ್ನಿಸಿದನು. ಅವನ ಪ್ರಯತ್ನವು ಕೂಡ, ಇಗಲೀ ಯಾರಿಗೂ ತಿಳಿಯದ ಹಾಗೆ, ಸಫಲವಾಯಿತು. ಹಾರಾಣಚಂದ್ರನು, ಇತರರು ನೋಡದ ಹಾಗೆ, ಕಣ್ಣು ಮಿಟುಕಿಸಿ, ಒಂದೆರಡು ಸಲ ಹಲಧರನ ಮೈ ಚಿವುಟಿ, ಸನ್ನೆ ಸಂಜ್ಞೆಗಳನ್ನು ಮಾಡಿ, ಹಲಧರನ ಮೈತುಂಬ ಮಹಾಭಯವನ್ನು ತುಂಬಿದನು. ಅದರಿಂದ ಹಲಧರನು ಅವರ ಸಂಗಡ ಹೊರಡಲು ಹೇಗೂ ಸಮ್ಮತಿಸದವನಾದನು. ಆಗ ಹಲಧರ ಮತ್ತೂ ಹಾರಾಣಚಂದ್ರರ ವಿನಾ ಉಳಿದ ಮೂರುಮಂದಿ ಒಂದು ಲಾಂದ್ರವನ್ನು ಕೈಯ್ಯಲ್ಲಿ ತೂಗಾಡಿಸುತ್ತ ಹೊರಗೆ ಹೊರಟರು.

# ಮೂರನೆಯ ಪರಿಚ್ಛೇದ

## ಯದುನಾಥಗೋಸ್ವಾಮಿ

ನಿತಾಯಿಮಂಡಲನು ಮತ್ತಿಬ್ಬರನ್ನು ಸಂಗಡ ಕರೆದುಕೊಂಡು ಆಶ್ರಯರಹಿತಳಾದ ಆ ಬಾಲಕಿಯನ್ನು ಹುಡುಕುತ್ತಾ ಹೊರಡುವ ಹೊತ್ತಿಗೆ ಆಕಾಶವು ಬಹು ಪರಿಷ್ಕಾರವಾಗಿತ್ತು; ಬಿರುಗಾಳಿಯ ವೇಗವು ಎಷ್ಟೋ ಕಡಿಮೆಯಾಗಿ ಹೋಗಿತ್ತು. ಮತ್ತು ಮಳೆಹನಿಗಳು ಕೊಂಚವಾಗಿ ಮಾತ್ರ ಬೀಳುತ್ತಿದ್ದುವು. ಗೋಸ್ವಾಮಿಪುರದ ಮಾರ್ಗವೆಂದು ಹಲಧರನು ಯಾವ ಕಾಲುವೆಯ ಹಾದಿಯನ್ನು ತೋರಿಸಿದ್ದನೋ ಅದೇ ದಾರಿಯನ್ನೇ ಹಿಡಿದು ಎಲ್ಲರೂ ದಕ್ಷಿಣಾಭಿಮುಖವಾಗಿ ಹೊರಟರು. ಸ್ವಲ್ಪಹೊತ್ತಿನೊಳಗಾಗಿಯೇ ಅವರು ಆ ಕಾಲುವೆಯ ದಾರಿಗೆ ಬಂದು ಸೇರಿದರು. ಅಲ್ಲಿ ಯಾರನ್ನೂ ಕಾಣಲಿಲ್ಲ; ಅಲ್ಲೆ ನಾಲ್ಕು ಕಡೆಯೂ ಅವರು ಹುಡುಕಲು ಆರಂಭಿಸಿದರು. ಪ್ರಾಯಃ ಅರ್ಧಗಂಟೆಯ ಹೊತ್ತು ಬಿಡುವಿಲ್ಲದೆ ಕಷ್ಟಪಟ್ಟುದಕ್ಕೆ ಯಾವುದೊಂದು ಫಲವನ್ನು ಕಾಣದೆ ಹೋದರಾದರೂ ಯಾರೊಬ್ಬರೂ ಸುಮ್ಮನಾಗಲಿಲ್ಲ; ಇನ್ನೂ ಹುಡುಕುತ್ತಲೇ ಇದ್ದರು; ಸಾಧ್ಯವಾದರೆ ಆ ಬಾಲಕಿಯನ್ನು, ಇಲ್ಲವಾದರೆ ಅವಳ ಮೃತದೇಹವನ್ನು—ಈ ಎರಡರಲ್ಲಿ ಒಂದನ್ನು ಅವರು ಹೇಗಾದರೂ ಮಾಡಿ, ಕಂಡುಹಿಡಿಯಬೇಕೆಂದು ಸ್ಥಿರಮಾಡಿಕೊಂಡರು.

ಈ ರೀತಿಯಲ್ಲಿ ಇನ್ನೂ ಅರ್ಧಗಂಟೆ ಕಳೆಯಿತು. ಕಾಲುವೆಯ ಇನ್ನೊಂದು ಪಾರ್ಶ್ವದಲ್ಲಿ ಯಾವನೋ ಒಬ್ಬನು ಬೇಗಬೇಗನೆ ಹೋಗುತ್ತಿರುವುದನ್ನು ಅವರು ನೋಡಿದರು. ಆಗ ಎಲ್ಲರೂ ಸೇರಿ ಅತ್ತಕಡೆಗೆ ಓಡಿದರು. ಹತ್ತಿರಕ್ಕೆ ಹೋಗಿ ಲಾಂದ್ರದ ಬೆಳಕನ್ನು ಹಿಡಿದು ನೋಡಿದರು; ಆ ಮನುಷ್ಯನು ತಮ್ಮೆಲ್ಲರಿಗೆ ಪರಿಚಿತನಾದ ಯದುನಾಥಗೋಸ್ವಾಮಿ. ಆಗ ಅವರೆಲ್ಲರೂ ಆತನಿಗೆ ಒಂದೊಂದು ನಮಸ್ಕಾರ ಮಾಡಿ ಹತ್ತಿರದಲ್ಲಿ ನಿಂತುಕೊಂಡರು.

ಗೋಸ್ವಾಮಿ ಮಹಾಶಯನು ಅವರುಗಳ ಆ ರೀತಿಯನ್ನು ಕಂಡು ವಿಸ್ಮಯಗೊಂಡು "ಏನಯ್ಯಾ ಮಂಡಲ, ಇಂತಹ ರಾತ್ರಿಯಲ್ಲಿ ದೊಣ್ಣೆಗಳನ್ನು ಹಿಡಿದು ಇಲ್ಲಿ ತಿರುಗುತ್ತಿದ್ದೀರಿ?" ಎಂದು ಕೇಳಿದನು.

ವಿಲಾಯಮಂಡಲನು ಆಗ ಆತನಿಗೆ ಒಂದೊಂದಾಗಿ ಎಲ್ಲ ಸಂಗತಿಗಳನ್ನೂ ಹೇಳಿದನು. ಅದನ್ನು ಕೇಳಿ ಗೋಸ್ವಾಮಿಯು "ಹಾಗಾದರೆ ಸರಿಹೋಯಿತು. ನಾನೂ ಕೂಡ ಬರುತ್ತಾ ದಾರಿಯಲ್ಲಿ ಒಂದು ರಕ್ತದ ಕಲೆಯ ಬಟ್ಟೆ ಬಿದ್ದಿರುವುದನ್ನು ಕಂಡೆನು" ಎಂದು ಉತ್ತರ ಹೇಳಿದನು.

ಆಗ ವಿಲಾಯಮಂಡಲನು, "ದಯೆಮಾಡಿ, ಆ ಬಟ್ಟೆ ಎಲ್ಲಿ ಬಿದ್ದಿದ್ದಿತೋ ಅಲ್ಲಿಗೆ ನಮ್ಮನ್ನು ಕರೆದುಕೊಂಡು ನಡೆಯಿರಿ; ಆ ಬಟ್ಟೆಯನ್ನು ನೋಡಿದರೆ ನಾವು ಗುರ್ತಿಸಬಲ್ಲೆವು" ಎಂದು ಹೇಳಿದನು.

ಯದುನಾಥಗೋಸ್ವಾಮಿಯು ಮೊದಲು ಒಂದೆರಡು ಸಲ ಒಪ್ಪಿಕೊಳ್ಳಲಿಲ್ಲ; ಕಡೆಗೆ ವಿಲಾಯಮಂಡಲನ ಪ್ರಬಲವಾದ ಒತ್ತಾಯದಿಂದ ಅವರ ಸಂಗಡ ಹೊರಡಲು ಒಪ್ಪಿಕೊಂಡನು.

* * * *

ಯದುನಾಥ ಗೋಸ್ವಾಮಿಯು ವಿಲಾಯಮಂಡಲ ಮತ್ತೂ ಆತನ ಇಬ್ಬರು ಜತೆಗಾರರನ್ನೂ ಸಂಗಡ ಕರೆದುಕೊಂಡು ಹೊರಟನು. ಸ್ವಲ್ಪ ದೂರ ಬಂದು ಯದುನಾಥಗೋಸ್ವಾಮಿಯು ಎಲ್ಲರನ್ನೂ ಕರೆದುಕೊಂಡು ಹತ್ತಿರದಲ್ಲಿನ ಒಂದು ಅರಣ್ಯದೊಳಕ್ಕೆ ಪ್ರವೇಶಿಸಿದನು. ಅಲ್ಲಿಂದ ಬಹಳ ದೂರ ಹೋಗಲಿಲ್ಲ, ನಾಲ್ಕಾರು ಹೆಜ್ಜೆ ಮುಂದರಿಯುವುದರೊಳಗಾಗಿ ಅವರು ಚಾಂದ್ರದ ಬೆಳಕಿನಲ್ಲಿ ಆ ರಕ್ತದ ಕಲೆಯುಳ್ಳ ಬಟ್ಟೆಯನ್ನು ನೋಡಿದರು. ರಕ್ತದ ಕಲೆಯ ಬಟ್ಟೆಯೊಂದನ್ನೇ ಅಲ್ಲ, ಆ ಸ್ಥಳದಲ್ಲಿ ದೊಡ್ಡದಾದ ಒಂದು ಚೂರಿ, ಎರಡು ಮೂರು ಬೆಳ್ಳಿಯ ಹೇರ್ ಪಿನ್ (Hair pin) ಗಳೂ ಬಿದ್ದಿರುವುದನ್ನು ಕಂಡರು.

ವಿಲಾಯಮಂಡಲನು ಆ ಬಟ್ಟೆಯನ್ನು ನೋಡಿದವನೇ ಅದು ಆಶ್ರಯರಹಿತಳಾದ ಆ ಬಾಲೆಯದು, ಎಂದು ಗುರ್ತಿಸಿದನು. ಯದು

ನಾಥಗೋಸ್ವಾಮಿಯೊಬ್ಬನ ವಿನಾ ಉಳಿದವರೆಲ್ಲರೂ ಭಯದಿಂದ ನಡುಗಿದರು. ಭಯಂಕರವಾದ ಕೊಲೆ ನಡೆದಿರುವುದಕ್ಕೆ ಸಾಕ್ಷಿಗಳಂತೆ ಬಿದ್ದಿರುವ ಆ ರಕ್ತದಕಲೆಯ ಬಟ್ಟೆ, ಚೂರಿ ಮುಂತಾದವುಗಳನ್ನು ಸ್ಪರ್ಶಮಾಡುವುದು ಹಾಗಿರಲಿ, ಹೆಜ್ಜೆ ಹೊತ್ತು ಅಲ್ಲಿ ನಿಂತಿರುವುದಕ್ಕೆ ಕೂಡ ಆಗದಹಾಗೆ ಕೈಕಾಲುಗಳು ಭಯದಿಂದ ನಡುಗತೊಡಗಿದುವು; ರಕ್ತದ ಸಂಗಡ ಯಾವಾಗಲೂ ಈ ಮಾದರಿಯ ಭಯವೊಂದು ಸೇರಿಯೇ ಇರುತ್ತದೆ. ಆಗ ಅವರ ಕೈಯೊಳಗಿನ ದೊಣ್ಣೆಗಳೂ ಕೈಯನ್ನು ತಾಂದ್ರವೂ ಕೈಯಲ್ಲಿಯೇ ಇದ್ದುವು, ಅವರು ಎಷ್ಟರ ಸಾಹಸದಿಂದ ಇಷ್ಟುದೂರ ಮುಂದರಿದರೋ ಆ ಸಾಹಸವು ಮಾತ್ರ ಅವರ ಮನಸ್ಸಿನೊಳಗೇ ಇಂದ್ರಜಾಲಿಕನ ಕೈಯೊಳಗಿನ ಗೋಲಿಯಹಾಗೆ ಯಾರಿಗೂ ಕಾಣಿಸಿಕೊಳ್ಳದೆ ಎಲ್ಲಿಯೋ ಮಾಯವಾಗಿ ಹೋಯಿತು.

ಎಲ್ಲರೂ ಹಿಂದಿರುಗಿ ಬಂದರು.

---

## ನಾಲ್ಕನೆಯ ಪರಿಚ್ಛೇದ

ಬಂದಿನೀ

ಹುಗಲೀ ಜಿಲ್ಲೆಯಲ್ಲಿರುವ ಜೀವನಪಾಲನ ತೋಟದ ಖ್ಯಾತಿಯನ್ನು ಅನೇಕರು ಬಲ್ಲರು. ಒಂದಾನೊಂದು ಸಮಯದಲ್ಲಿ ದಸ್ಯುಗಳ ಭಯದಿಂದ ಹಗಲು ಹೊತ್ತಿನಲ್ಲಿ ಕೂಡ ಆ ಮಾರ್ಗವಾಗಿ ಯಾರೂ ಪ್ರಯಾಣಮಾಡುತ್ತಿರಲಿಲ್ಲ. ನಾವು ಯಾವ ಕಾಲದ ಕತೆಯನ್ನು ಹೇಳುತ್ತಿರುವೆವೋ ಆ ಕಾಲದಲ್ಲಿ ಅದು ಬಹು ದಟ್ಟವಾದ ಅರಣ್ಯವಾಗಿದ್ದಿತು. ಆಗ ಹಗಲು ಹೊತ್ತಿನಲ್ಲಿಯೂ ಅಲ್ಲಿ ದಸ್ಯುಗಳು ತಮ್ಮ ಹತ್ಯಾವ್ಯಾಪಾರಗಳನ್ನು ನಿರ್ವಿಘ್ನವಾಗಿ ನೆರವೇರಿಸುತ್ತಿದ್ದರು.

ಜೀವನಪಾಲನ ತೋಟಕ್ಕೆ ಉತ್ತರ ಕಡೆ ಜೀರ್ಣವಾಗುತ್ತಿರುವ, ಹಳೆಯದಾದ, ಬಿದ್ದು ಹೋಗುವುದೋ ಎಂಬ ಹಾಗಿರುವ ಮುರುಕು ಮನೆಯೊಂದು ಇದ್ದಿತು. ಅದರ ಕೆಲವು ಭಾಗಗಳು ಬಿಟ್ಟಿಗೆ ಮುರಿದು

ಬಿದ್ದಿವೆ. ಇನ್ನು ಕೆಲವು ಭಾಗಗಳು ಬೀಳುವುದರಲ್ಲಿವೆ. ಛಾವಣಿಯ ಮೇಲ್ಭಾಗದಲ್ಲಿ ದೊಡ್ಡ ದೊಡ್ಡ ಆಲ, ಅತ್ತಿ, ಅಶ್ವತ್ಥಮರಗಳು ಪುತ್ರ ಪೌತ್ರ ಪರಿವಾರದಿಂದ ಪರಿವೃತವಾಗಿ ಆವರಿಸಿಕೊಂಡಿವೆ. ಆ ಮನೆಯ ಕೊಠಡಿಗಳೆಲ್ಲವೂ ಬಿದ್ದುಹೋದುವು, ಮಲಿನವಾದುವು, ಜಾಡನ ಪೊರೆಯಿಂದ ತುಂಬಿದುವು ಮತ್ತೂ ಮನುಷ್ಯ ಸಂಚಾರದ ಗುರುತು ಸಹ ಇಲ್ಲದುವು.

ನಿರ್ಜನವಾದ ಆ ಮುರುಕು ಮನೆಯಲ್ಲಿ, ಸಾಧ್ಯವಾದಮಟ್ಟಿಗೂ ಪರಿಷ್ಕಾರ ಮಾಡಿದ್ದ ಒಂದು ಕೊಠಡಿಯೊಳಗೆ, ಅನಿಂದಿತ ಗೌರಕಾಂತಿಯುಳ್ಳ ಸ್ನಿಗ್ಧಜ್ಯೋತಿರ್ಮಯರೂಪಿಣಿಯಾದ ಇನ್ನೂ ಬಾಲ್ಯದ ಎಲ್ಲೆಯಲ್ಲಿಯೇ ಇರುವ ಬಾಲಕಿಯೊಬ್ಬಳು ನೀರವಭಾವದಿಂದ ಕಣ್ಣೀರು ಕರೆಯುತ್ತಿದ್ದಾಳೆ. ಹಿಮದಲ್ಲಿ ತೊಯಿದ ಕಮಲದಂತೆ ಅವಳ ಮುಖವು ಕಣ್ಣೀರಿನಿಂದ ನನೆದು ತುಂಬ ಕಾಂತಿ ಕುಗ್ಗಿದೆ; ಲಾವಣ್ಯಮಯವಾದ ಅವಳ ಶರೀರವು ಕಸ್ತ್ಯಾಗಿ ಜೀರ್ಣವಾಗಿ ಹೋಗಿದೆ; ಕೇಶರಾಶಿ ಒರಟು, ಪಿಶ್ಯಂಗಲತೆಯಿಂದ ಕೆದರಿ ಬಿದ್ದಿದೆ. ಬಾಲಕಿಯು ನುಟಿ ತಗ್ಗದವಳಾಗಿ, ಒಂದೊಂದು ನಿಶ್ವಾಸವನ್ನೂ ಬಹು ಕಷ್ಟದಿಂದ ಎರಡು ಬಾರಿ ಮೂರು ಬಾರಿಯಾಗಿ ನೀಡಿಕೊಳ್ಳುತ್ತಿದ್ದಾಳೆ. ಬಾಲಕಿಯ ಪರಮಸುಂದರವಾದ ಆ ಮುಖವು ಪ್ರಕೃತದಲ್ಲಿ ಅತ್ತು ಅತ್ತು ಕಳೆಗುಂದಿರುವುದಾದರೂ ಅವಳ ಆ ಆಕರ್ಣವಿಶ್ರಾಂತವಾದ, ಅರಳಿದ ತಾವರೆಯ ಹಾಗಿರುವ ಕಣ್ಣುಗಳೂ, ಹಾಗೆಯೇ ಆ ವಿಸ್ತಾರವಾದ ಕಣ್ಣುಗಳ ಸುಂದರವಾದ ಲೀಲಾಚಂಚಲ ದೃಷ್ಟಿಯೂ, ಆ ಮ್ಲಾನಮುಖದಲ್ಲಿ ಹಿಂದೆ ಯಾವಾಗಲೂ ಅನುಭವ ಮಾಡದಂತಹ ಸೌಂದರ್ಯವನ್ನು ವಿಕಾಸಗೊಳಿಸಿದ್ದುವು. ಆ ಕೊಠಡಿಯಲ್ಲಿ ಆ ಬಾಲಿಕೆ ಕುಳಿತಿದ್ದಳು, ಆ ಕೊಠಡಿಗೆ ಹೊರಗಡೆ ಬೀಗ ಹಾಕಿದ್ದಿತು. ಬಾಲಿಕೆಯು ಬಂದಿನೀ.

ಬಹುಕಾಲ ಅತ್ತು ಅತ್ತು ಹೃದಯದ ಆವೇಗವು ಕೊಂಚ ಕಡಮೆಯಾದನಂತರ ಬಾಲಿಕೆಯು ಪಶ್ಚಿಮ ಕಡೆಯ ಒಂದು ಕಿಡಕಿಯ ಬಳಿ ಬಂದು ನಿಂತುಕೊಂಡಳು. ಆ ಕಿಡಕಿಯಿಂದ ವಾಯು ಪ್ರವಾಹವು

ಪ್ರವೇಶಮಾಡಿ ಬರುತ್ತಾ ಸಿಕ್ಕು ಸಿಕ್ಕಾಗಿ ಒರಟಾಗಿರುವ ಬಾಲಿಕೆಯ ನೀಲಕುಂತಲವನ್ನು ಹಾರಿಸುತ್ತಾ ಒಂದೊಂದು ಸಲ ಅದನ್ನು ಅವಳ ಮುಖದ ಮೇಲಕ್ಕೆ ತಂದು ಬಿಡುವುದು; ಪುನಃ ಹಾರಿಸಿ ಸುತ್ತಿಸಿ ಸುತ್ತಿಸಿ ಪುನಃ ವಿಷಾದ ಮೇಘವು ಮುಸುಕಿ ಮಲಿನವಾಗಿರುವ, ಕಣ್ಣೀರಿನಿಂದ ತೊಯಿದು ಬಣ್ಣಗೆಟ್ಟಿರುವ ಆ ಮುಖವನ್ನೇ ಮತ್ತೆ ಮುಸುರುವಂತೆ ಮಾಡುವುದು. ಇಷ್ಟು ಸುಂದರವಾದ ಮುಖ! ಹೀಗೆ ಮ್ಲಾನವಾಗಿರುವುದೆ? ಇದನ್ನು ಯಾರಿಗೂ ಗೋಚರವಾಗದ ಹಾಗೆ ಮರೆಮಾಡಿಡುವುದೇ ಉತ್ತಮ—ಎಂಬುವುದೇ ವಾಯುವಿನ ಉದ್ದೇಶ್ಯ ವಿರಬಹುದೆಂದು ಕಾಣುತ್ತಿದ್ದಿತು; ವಾಯುವಿನ ಉದ್ದೇಶ್ಯವು ಯಾವು ದಾದರೂ ಆಗಲಿ, ಅದರಿಂದ ಬಾಲಿಕೆಯು ತುಂಬ ಬೇಸರಪಡುತ್ತಿದ್ದಳು.

ಬಾಲಿಕೆಯು ನಟ್ಟನೋಟದಿಂದ ನೋಡುತ್ತಿದ್ದಳು. ಸ್ನಿಗ್ಧೋಜ್ವಲ ವಾಗಿ ಕೆಂಬಣ್ಣಕ್ಕೆ ತಿರುಗಿರುವ ನೀಲಿಮಾಮಯವಾದ ಸಂಧ್ಯಾಗಗನ ದಲ್ಲಿ ಕೆಂಪಾಗಿರುವ ಸೂರ್ಯನು ಕ್ರಮ ಕ್ರಮವಾಗಿ, ಮೆಲ್ಲ ಮೆಲ್ಲಗೆ ಮುಳುಗುತ್ತಿದ್ದುದು ಅವಳ ದೃಷ್ಟಿವಿಷಯವಾಗಿದ್ದಿತು; ಇಷ್ಟೇ ಅಲ್ಲ, ಇನ್ನೂ ಸ್ವಲ್ಪ ದೂರದಲ್ಲಿ, ಸಂಧ್ಯಾಸಮಯದ ಹೇಮಕಿರಣದಿಂದ ತುಂಬಿರುವ ದಿಕ್ಚಕ್ರವುಳ್ಳ ಆಕಾಶದಲ್ಲಿ, ಮಧುರವಾಗಿಯೂ ಮನೋ ಹರವಾಗಿಯೂ ಇರುವ ಆ ದೃಶ್ಯವನ್ನು, ನಿಬಿಡವಾದ ಮೇಘಮಾಲೆಯು ವ್ಯಾಪಿಸಿ, ಕ್ರಮ ಕ್ರಮವಾಗಿ, ದಟ್ಟವಾಗಿ ಹಬ್ಬಿ, ಅದೊಂದು ಭಯಂಕರ ರೂಪದಿಂದ ನಾಲ್ಕು ಕಡೆಯೂ ಹರಡಿಕೊಳ್ಳುತ್ತಿದ್ದಿತು. ಬಾಲಿಕೆಯು ಇವೆಲ್ಲವನ್ನೂ ಎವೆಯಿಕ್ಕದೆ ನೋಡುತ್ತಿದ್ದಳು. ಸಮೀಪದಲ್ಲಿ ಆಗ ತಾನೇ ಅರಳುತ್ತಿರುವ ಬಗೆ ಬಗೆಯ ವನಕುಸುಮಗಳ ಮಧುರವಾದ ಪರಿಮಳಗಳು ಒಂದಾಗಿ ಸೇರಿ ಮತ್ತಷ್ಟು ಮಧುರವಾಗಿರಲು, ಬೇಸ ಗೆಯ ಸಂಧ್ಯಾಕಾಲದ ಮಂದಮಾರುತನು ಆ ಆಮೋದವನ್ನು ಹೊತ್ತು ತಂದು, ಅಳುತ್ತಲಿರುವ, ಧೂಳಿನಿಂದ ಬಣ್ಣಗೆಟ್ಟಿರುವ, ಕಣ್ಣೀರು ಸುರಿಯಿಸುತ್ತಿರುವ, ತನಗುಂಟಾದ ವಿಪತ್ತನ್ನು ಕಂಡು ಭೀತಳಾಗಿರುವ ಬಾಲಿಕೆಯು, ಶಿಲಾನಿರ್ಮಿತವಾದ ದುಃಖಮಯಪ್ರತಿಮೆಯ ಹಾಗೆ,

ಮುಖವನ್ನು ಸ್ವಲ್ಪ ಮಾತ್ರ ಎತ್ತಿಕೊಂಡು ನೀರವಭಾವದಿಂದ ಎಲ್ಲಿ ನಿಂತಿದ್ದಳೋ ಅಲ್ಲಿ, ಆ ಅಪರೂಪ ರೂಪಶಾಲಿನಿಯಾದ ಕಿಶೋರಿಯು ನಾಲ್ಕೂ ಕಡೆಗಳಲ್ಲಿ, ಅಮೂಲ್ಯವಾದ ಉಪಹಾರದಂತೆ ತುಂಬುತ್ತಿದ್ದನು. ದೂರದಲ್ಲಿನ ವನಾಂತರದಿಂದ ಮಧುರಸ್ವರವುಳ್ಳ ಹಕ್ಕಿಗಳ ಅಮೃತ ಧಾರೆಗರೆಯುವ ಕಲಕಂಠ ಗೀತವು ಆ ಬಾಲಿಕೆಗೆ ಸಮೀಪವಾಗಿರುವ ಎಲ್ಲ ಕಡೆಗಳನ್ನೂ ಮುಖರಿತವನ್ನಾಗಿ ಮಾಡುತ್ತಿದ್ದಿತು. ಬಾಲಿಕೆಯು ಇದಾವುದನ್ನೂ ಗಮನಿಸಿರಲಿಲ್ಲ. ಬಾಲಿಕೆಯು ಆ ಸ್ಥಳದಲ್ಲಿ, ಹಾಗೆಯೇ ನಿಶ್ಚಲಭಾವದಿಂದ, ಶಿಲಾಪ್ರತಿಮೆಯ ಹಾಗೆ, ಬಹಳ ಹೊತ್ತಿನಿಂದಲೂ ನಿಂತುಕೊಂಡೇ ಇದ್ದಾಳೆ.

ಶ್ರಾಂತವಾಗಿರುವ ವನಸ್ಥಳದಲ್ಲಿ ಧೂಸರವಸನೆಯಾದ ಸಂಧ್ಯೆಯ ಅಂಧಕಾರವು ಸ್ವಲ್ಪಸ್ವಲ್ಪವಾಗಿ ಪುಷ್ಟಿಗೊಳ್ಳುತ್ತಿದ್ದಿತು. ಹಾಗೆಯೇ ಆ ಸಂಧ್ಯಾಕಾಲದ ಅಲ್ಪಸ್ವಲ್ಪವಾದ ಅಂಧಕಾರದಿಂದಲೂ, ಪಶ್ಚಿಮ ಗಗನದಲ್ಲಿ ನಿಬಿಡವಾಗಿರುವ ಮೇಘದ ಕೃಷ್ಣಛಾಯೆಯಿಂದಲೂ, ಸಂಧ್ಯಾಸಮಯದ ಅಸ್ಫುಟವಾದ ಬೆಳಕು ಕಳೆಗುಂದಿ ಮಲಿನವಾಗುತ್ತ ಬಂದಿತು; ಆಗ, ಬಾಲಿಕೆಯ ಉದಾಸೀನವಾಗಿದ್ದ ದೃಷ್ಟಿಯು ಚಾಂಚಲ್ಯಗೊಂಡು ಪ್ರಕೃತಿಯ ಅಪೂರ್ವವಾದ ಆ ಪರಿವರ್ತನೆಯ ಪಾರಂಪರ್ಯದಿಂದ ವಿಸ್ಮಯದ ಕಡೆಗೆ ತಿರುಗತೊಡಗಿತು; ಸಮೀಪವಾದ ಸಂಧ್ಯಾಕಾಲದ ಅಸ್ಪಷ್ಟವಾದ ಬೆಳಕಿನಲ್ಲಿ ಹಠಾತ್ತಾಗಿ ಏನನ್ನೋ ನೋಡಿ ಬಾಲಿಕೆಯು ನಡುಗಿದಳು, ಅವಳ ಮುಖವು ಕಂಗೆಟ್ಟಿತು, ಸಿಡಿಲು ಸೋಂಕಿದವಳಂತೆ ಅವಳು ಅಲ್ಲಿಂದ ಸರಿದು ಆ ಕೊಠಡಿಯ ಒಂದು ಮೂಲೆಗೆ ಹೋಗಿ ನಿಂತುಕೊಂಡಳು; ನಿಂತುಕೊಂಡಿದ್ದ ಹಾಗೆಯೇ ಬಾಲಿಕೆಯು ನಡುಗುವುದಕ್ಕೆ ಉಪಕ್ರಮಿಸಿದಳು.

---

# ಐದನೆಯ ಪರಿಚ್ಛೇದ

## ಮರ್ಮಾಹತಳು

ಕೊಂಚ ಹೊತ್ತಿನೊಳಗಾಗಿಯೇ ಹಾಕಿದ್ದ ಬಾಗಿಲನ್ನು ತೆರೆದು ಕೊಂಡು ಒಬ್ಬ ವ್ಯಕ್ತಿಯು ಆ ಕೊಠಡಿಯೊಳಕ್ಕೆ ಪ್ರವೇಶವಾದನು. ಹುಡುಗಿಯು ಮಲಗಿಕೊಳ್ಳುವುದಕ್ಕೋಸ್ಕರವಾಗಿ, ಒಂದು ಮೂಲೆಯಲ್ಲಿ, ಒಂದು ಹಾಸುಗೆ ಇತ್ತು. ವ್ಯಕ್ತಿಯು ಅದರ ಮೇಲೆ ಕುಳಿತು ಕೊಂಡನು. ಬಾಲಿಕೆಯು ಆ ಹಾಸುಗೆಯ ಪಕ್ಕದಲ್ಲಿ ನಿಂತಿದ್ದವಳು ಅವನು ಸಮೀಪಕ್ಕೆ ಬಂದುದನ್ನು ಕಂಡು ಮತ್ತೊಂದು ಕಡೆಗೆ ಸರಿದು ನಿಂತುಕೊಂಡಳು.

ಆ ಆಗಂತುಕನ ವಯಸ್ಸು ನಾಲ್ವತ್ತು ವರ್ಷಕ್ಕೆ ಕಡಿಮೆಯಿಲ್ಲ; ಆದರೆ ಅವನನ್ನು ನೋಡಿದರೆ ಮೂವತ್ತು ವರ್ಷಕ್ಕೆ ಮೀರಿದವನೆಂದು ತೋರುವುದಿಲ್ಲ. ಅವನ ಶರೀರವು ಬಲಿಷ್ಠವಾದದ್ದು, ಕೈಕಾಲುಗಳು ಮಾಂಸಪೂರ್ಣವಾಗಿ ಉಬ್ಬಿದ್ದುವು, ಎದೆಯು ಎತ್ತರವಾಗಿಯೂ ವಿಸ್ತಾರವಾಗಿಯೂ ಇದ್ದಿತಲ್ಲದೆ ಸಂಪೂರ್ಣವಾದ ಆರೋಗ್ಯವನ್ನೂ ಅಸಮವಾದ ಶಕ್ತಿಯನ್ನೂ ಸೂಚಿಸುವಂತಿದ್ದಿತು; ಮುಖದ ಆಕಾರವು ಕೆಟ್ಟದೇನೂ ಅಲ್ಲ; ಮತ್ತೂ ಯೌವನದ ಆರಂಭದಲ್ಲಿ ಈ ಮುಖವು ನೋಡುವವರಿಗೆ ಸುಂದರವಾಗಿಯೇ ಇದ್ದಿರಬೇಕೆಂದು ಊಹಿಸುವುದಕ್ಕೆ ಈಗಲೂ ಅವಕಾಶವಿರುತ್ತದೆ; ಶರೀರದ ಕಾಂತಿಯು ಗೌರವರ್ಣ.

ಆಗಂತುಕನು ಬಾಲಿಕೆಯನ್ನು ಸಂಬೋಧಿಸಿ,—"ರೇವತಿ, ಇನ್ನೆಷ್ಟು ದಿನ ಹೀಗೆ ಯಾತನೆಯನ್ನು ಸೈರಿಸುವೆ? ಇನ್ನು ನನ್ನ ಮಾತಿಗೆ ಅಸಮ್ಮತಳಾಗಬೇಡ. ನಿನಗೋಸ್ಕರವಾಗಿ ನಾನು ಇಷ್ಟು ಮಟ್ಟಿಗೆ ಮೋಹಿತನಾಗಿರುವುದನ್ನು ನೋಡಿಯೂ ಕೂಡ, ನಿನಗೆ ಕೊಂಚವಾದರೂ ದಯೆಯುಂಟಾಗಲಿಲ್ಲವೆ?" ಎಂದನು.

ರೇವತಿಯು ಮಾತನಾಡಲಿಲ್ಲ.

ಆಗಂತುಕನು ಪುನಃ ಹೇಳಿದನು—"ರೇವತಿ ಮಾತನಾಡು, ಇಷ್ಟುದೂರ ಬಂದು ನಿನ್ನದೊಂದು ಪ್ರಿಯವಚನವನ್ನು ಕೇಳುವ ಅದೃಷ್ಟವೂ ನನಗಿಲ್ಲವೆ?"

ರೇವತಿಯು ಮೃದುಸ್ವರದಿಂದ—"ನಾನು ಈಗಲೂ ಹೇಳುತ್ತೇನೆ, ಈ ಜೀವವಿರುವವರೆಗೆ ನಾನು ಎಂದಿಗೂ ನಿನ್ನ ಪ್ರಸ್ತಾವಕ್ಕೆ ಸಮ್ಮತಿಸಲಾರೆ. ನಿನ್ನನ್ನು ಮದುವೆಯಾಗಿ, ನೂರಾರು ಮಂದಿ ದಾಸ ದಾಸಿಯರಿಂದ ಪರಿವೃತಳಾಗಿ, ಅಪರಿಮಿತವಾದ ಐಶ್ವರ್ಯವನ್ನು ಅನುಭವಿಸುವುದಕ್ಕಿಂತಲೂ ಈ ಕಾಡು ಮನೆಯಲ್ಲಿ ಎಂದೆಂದೂ ಬಂದಿನಿಯಾಗಿ ವ್ಯಥೆಪಡುವುದೇ ಪ್ರಕೃತದಲ್ಲಿ ನನಗೆ ಮಹಾಸುಖವಾಗಿದೆ" ಎಂದಳು.

ಆಗಂತುಕನು ಕೊಂಚಹೊತ್ತು ಸುಮ್ಮನಿದ್ದು ಏನನ್ನೊ ಭಾವಿಸಿಕೊಂಡು, ದೀರ್ಘಶ್ವಾಸವನ್ನು ಬಿಟ್ಟು, "ಹಾಗಾದರೆ ಈ ಅನಂತ ಸೌಖ್ಯವನ್ನೇ ಅನುಭವಿಸುತ್ತಾ ನಿನ್ನ ಜೀವಮಾನವನ್ನೆಲ್ಲಾ ಇಲ್ಲಿಯೇ ಮುಗಿಯಿಸು; ಆದರೆ, ಇದೊಂದು ಮಾತು ಚೆನ್ನಾಗಿ ಜ್ಞಾಪಕವಿರಲಿ; ನನ್ನ ಮಾತು ಕೇಳದಿರುವೆಯಾದರೆ ಇತರರಿಂದಲೂ ನಿನಗೆ ಬಿಡುಗಡೆಯಿಲ್ಲ. ನೀನು ಇಷ್ಟು ಕಠಿಣಳೇ, ನಾನೂ ಕೂಡ ಕಠಿಣಹೃದಯದಿಂದ ನಿನ್ನ ವಿಷಯದಲ್ಲಿ ಇದೇರೀತಿ ಕಠಿಣತಮವಾದ ಕಾರ್ಯಗಳನ್ನೇ ಕ್ರಮ ಕ್ರಮವಾಗಿ ಮಾಡುತ್ತೇನೆ. ರೇವತಿ! ನಾನು ನಡೆದಷ್ಟು ದಿನವೂ ನಿನ್ನಲ್ಲಿ ವಿನೀತಭಾವದಿಂದ ಇರತಕ್ಕವನಲ್ಲ. ಹೀಗೆಯೇ ನಿನ್ನ ಅನುಗ್ರಹವನ್ನು ಪ್ರಾರ್ಥಿಸುತ್ತಾ ಇರಲಾರೆ. ಯಾವ ರೀತಿಯಿಂದಲಾದರೂ ಸರಿ, ನಾನು ನನ್ನ ಕಾರ್ಯವನ್ನು ಸಾಧಿಸಿಯೇ ಸಾಧಿಸುತ್ತೇನೆ. ಈಗ ನನ್ನ ಧರ್ಮಪತ್ನಿಯಾಗಿ ಎಂತಹ ಸುಖಗಳನ್ನು ಅನುಭವಿಸುವುದಕ್ಕೆ ನೀನು ಇಚ್ಛಿಸುವುದಿಲ್ಲವೋ, ಅಂಥವುಗಳಿಗಾಗಿ ಅನಂತರ ನನ್ನ ಉಪಪತ್ನಿಯಾಗಿರಲು ನೀನು ನೀನಾಗಿಯೇ ಆಸೆಪಡುವೆ. ನೀನು ಎಂದಿನವರೆಗೆ ಆ ಅಲ್ಪ ಜೀವಿಯಾದ ದೇವೇಂದ್ರನನ್ನು ಮರೆಯಲಾರೆಯೋ ಅಂದಿನವರೆಗೆ ನನ್ನ ಪ್ರಸ್ತಾಪಕ್ಕೂ ಸಮ್ಮತಿಸಲಾರೆಯೆಂದು ಕಾಣುತ್ತದೆ; ಒಳ್ಳೆಯದು, ಅದಷ್ಟು ಬೇಗ ಅವನ ತಲೆಯು, ಇಲ್ಲಿಯೇ, ನಿನ್ನ ಪದತಲದಲ್ಲಿ ಉರುಳುವುದನ್ನು ನೀನೇ ನೋಡುವೆ" ಎಂದು ಹೇಳಿದನು.

ಹೀಗೆಂದು ಹೇಳಿ ಆಗಂತುಕನು ಹುಬ್ಬು ಗಂಟುಹಾಕಿಕೊಂಡು ಸರಳಚಿತ್ತಳಾದ ಆ ಬಾಲಿಕೆಯನ್ನು ನೋಡಿದನು; ಬಾಲಿಕೆಯು ಏನೋ ಹೇಳಬೇಕೆಂದಿದ್ದವಳು ಅವನ ಆ ನೋಟವನ್ನು ನೋಡಿ ಭಯಪಟ್ಟು ಹೇಳಲಾರದೇ ಹೋದಳು. ಅವಳಿಗೆ ಗಂಟಲು ಕಟ್ಟಿತು. ಅವಳ ಒಂದೊಂದು ನರಗಳಲ್ಲಿಯೂ ಹರಿದೋಡುವ ರಕ್ತಪ್ರವಾಹವು ಮಿಂಚಿನ ವೇಗದಿಂದ ಹರಿದು ಹೃತ್ಪಿಂಡವನ್ನು ತುಂಬುವಂತೆ ತೋರಿತು. ಬಾಲಿಕೆಯು ಅತ್ತುಬಿಟ್ಟಳು—ಕಾಂತಿರಹಿತವಾದ ಅವಳ ಕಣ್ಣುಗಳಿಂದ ಕಣ್ಣೀರು ದರದರನೆ ಧಾರೆಯಾಗಿ ಹರಿಯಿತು.

ಭೀತಿವಿಹ್ವಲಳಾದ ರೇವತಿಯು ಆಗಂತುಕನಿಗೆ ಇದಿರಾಗಿ ಬಂದು, ಮಂಡಿಯೂರಿ ಕುಳಿತು, ಗಾಳಿಯಿಂದ ಕಿತ್ತುಬಿದ್ದ ವಾಸಂತೀ ಲತೆಯಹಾಗೆ ನೆಲಕ್ಕೆ ಉರುಳಿದಳು; ಹಾಗೆಯೇ ಅಳುತ್ತಾ ಗದ್ಗದ ಕಂಠದಿಂದ, "ಕೇಶವಬಾಬೂ, ನಾನು ತಂದೆತಾಯಿಯಿಲ್ಲದವಳು, ಹತಭಾಗಿನೀ. ನನ್ನ ಮುಖವನ್ನು ನೋಡಿಯೂ ನನ್ನ ಈ ಯಾತನೆಯನ್ನು ನೋಡಿಯೂ ನಿನಗೆ ಕೊಂಚವಾದರೂ ವ್ಯಥೆಯುಂಟಾಗುವುದಿಲ್ಲವೆ? ಕರುಣೆಯುಂಟಾಗುವುದಿಲ್ಲವೆ? ನಮ್ಮ ಚಿಕ್ಕಪ್ಪನಿಗೂ ನಿನಗೂ ಅದೆಷ್ಟು ಮೈತ್ರಿ. ಚಿಕ್ಕಪ್ಪನು ನಿನ್ನನ್ನು ಎಷ್ಟೋ ಪ್ರೀತಿಸುತ್ತಾನೆ. ನಾನು ಅವನ ಅಣ್ಣನ ಮಗಳು. ಹೀಗಿದ್ದರೂ ಕೂಡ ಯಾವ ಉದ್ದೇಶದಿಂದ ನನ್ನನ್ನು ಈ ಸ್ಥಳದಲ್ಲಿ ನಿರ್ಬಂಧಿಸಿ ಹೀಗೆ ಸಹಿಸಲಾಗದ ಯಾತನೆಗಳನ್ನು ಉಂಟುಮಾಡುತ್ತಿರುವೆ? ನೀನು ಸುಮಾರು ಒಂದು ವರ್ಷದಿಂದಲೂ ನಮ್ಮ ಚಿಕ್ಕಪ್ಪನನ್ನು ನೋಡುವ ನೆಲವಾಗಿ ನಿತ್ಯವೂ ನಮ್ಮ ಮನೆಗೆ ಬರುತ್ತಲಿದ್ದೆ; ನನ್ನನ್ನೂ ನನ್ನ ತಂಗಿಯನ್ನೂ ನೀನು ಎಷ್ಟೋ ಪ್ರೀತಿಯಿಂದ ಕಾಣುತ್ತಿದ್ದೆ; ನಮ್ಮಲ್ಲಿ ಎಷ್ಟೋ ವಿಶ್ವಾಸದಿಂದಿದ್ದೆ; ಆದರೆ ಅಂದಿನ ಪ್ರೀತಿಯಲ್ಲಿ ಇಂತಹ ದುರುದ್ದೇಶಗಳು ಯಾವುವೂ ಇರಲಿಲ್ಲ. ನಮ್ಮ ಚಿಕ್ಕಪ್ಪನು ನಮ್ಮನ್ನು ಹೇಗೆ ಪ್ರೀತಿಯಿಂದ ಕಾಣುತ್ತಿದ್ದನೋ ಹಾಗೆಯೇ ನೀನೂ ನಮ್ಮನ್ನು ಪ್ರೀತಿಯಿಂದ ಕಾಣುತ್ತಿದ್ದೆ. ಆಗ ನಿನ್ನ ಕಣ್ಣುಗಳಲ್ಲಿ ಈ ದುರುದ್ದೇಶದ

ಚಿಪ್ಪನ್ನು ಒಂದು ದಿನವಾದರೂ ಕಂಡುಬರಲಿಲ್ಲ. ನಾನು ನಿನ್ನನ್ನು ಕಂಡರೆ ತಂದೆಯನ್ನು ಕಂಡಹಾಗೆ ಭಕ್ತಿಯಿಂದ ನಡೆದುಕೊಳ್ಳುತ್ತಿದ್ದೆನು; ಆ ನನ್ನ ಭಕ್ತಿಗೆ ಪ್ರತಿಯಾಗಿ ನಿನ್ನಿಂದ ಎಂತಹ ಪ್ರೀತಿಯನ್ನು ನಿರೀಕ್ಷಿಸುತ್ತಿದ್ದೆನೋ ಅಂತಹುದನ್ನು ಕೊಡದೆ ನೀನು ನನ್ನಲ್ಲಿ ಹೇಯವಾದ ಈ ಪ್ರಸ್ತಾಪ ಮಾಡಬಹುದೆ? ಕೇಶವಬಾಬೂ, ನನ್ನನ್ನು ಬಿಟ್ಟುಬಿಡು, ನನ್ನನ್ನು ನಮ್ಮ ಮನೆಗೆ ಕಳುಹಿಸಿಕೊಡು; ನಾನು ನನ್ನ ಪ್ರಾಣ ಹೋಗುವುದಾದರೂ ಈ ನಿನ್ನ ಸಮಾಚಾರಗಳೊಂದನ್ನೂ ಬಹಿರಂಗಪಡಿಸುವುದಿಲ್ಲ. ನನಗಾಗಿ ಈಗ ಅಲ್ಲಿ ಅದೆಷ್ಟು ಹಾಹಾಕಾರವುಂಟಾಗಿದೆಯೋ ನಾನು ಬೇರೆ ಕಾಣೆ'' ಎಂದು ಹೇಳಿದಳು.

---

## ಆರನೆಯ ಪರಿಚ್ಛೇದ

### ಬಿಡುಗಡೆ

ರೇವತಿಯ ಆ ಪರಿತಾಪಕರವಾದ ಕಾತರೋಕ್ತಿಗಳಿಗೆ ದುರಾಲೋಚನೆಯುಳ್ಳ ಪಾಪಿಷ್ಠ ಕೇಶವಚಂದ್ರನು ಕಿವಿಗೊಡಲಿಲ್ಲ; ಅದಕ್ಕೆ ಬದಲಾಗಿ ತನ್ನ ಅಭೀಷ್ಟಸಿದ್ಧಿಗಾಗಿ ಪ್ರಯತ್ನಮಾಡುತ್ತಲೇ ಇದ್ದನು. ಮೊದಲು ಕಣ್ಣೀರಿನಿಂದ ತೊಯಿದ ಬಾಲಿಕೆಯ ಕಣ್ಣುಗಳೆರಡನ್ನೂ ಒರಸಿದನು, ಅನಂತರ ಅವಳನ್ನು ಎಳೆದುಕೊಂಡು ತನ್ನ ಎದೆಯಮೇಲೆ ಹಾಕಿಕೊಳ್ಳಲು ಪ್ರಯತ್ನ ಮಾಡಿದನು.

ಆಗ, ಕೆದರಿದ ಕೇಶಪಾಶವುಳ್ಳ ರೇವತಿಯು, ಹೆಣ್ಣುಸಿಂಹದಹಾಗೆ, ಆತ್ಮ ಬಲದಿಂದ ಎದ್ದು ದೂರ ನಿಂತಳು. ಹಿಮದಲ್ಲಿ ತೊಯಿದ ಕಮಲದ ಹಾಗೆ ಕಂದಿಹೋಗಿರುವ ಅವಳ ಮುಖವು ಕೋಪದಿಂದ ಕೆಂಪೇರಿ ಹೋಗಿ, ಇನ್ನೊಂದು ಬಗೆಯಾದ ಅಪರೂಪ ಕಾಂತಿಯನ್ನು ಧಾರಣ ಮಾಡಿತು. ಹೆಡೆಯಮೇಲೆ ಕಾಲಿಟ್ಟ ಸರ್ಪದ ಹಾಗೆ ಬಾಲಿಕೆಯು ರೇಗಿ ರೇಗಿ, ಕೋಪ ಕರ್ಕಶ ಕಂಠದಿಂದ, ''ಪಿಶಾಚ, ನಿನ್ನನ್ನು ನುಡು! ನಿನ್ನ ಮುಖವನ್ನು ನೋಡುವುದರಿಂದಲೂ ಪಾಪವುಂಟು; ಇಲ್ಲಿಂದ

ಈಗಲೇ ತೊಲಗಿ ಹೋಗು. ಏನೇನು ಮಾಡಬೇಕೆಂದಿರುವೆಯೋ ಅವೆಲ್ಲವನ್ನೂ ಮಾಡು. ಎಂತಹ ಯಾತನೆಗಳನ್ನು ಉಂಟುಮಾಡಬೇಕೆಂದಿರುವೆಯೋ ಮಾಡು. ಇನ್ನು ಮುಂದೆ ನಾನು ನಿನಗೆ ಭಯಪಡುವುದಿಲ್ಲ. ನಿನ್ನಂತಹ ಪಾಪಿಯಲ್ಲಿ ದಯಾಭಿಕ್ಷೆ ಬೇಡುವುದಕ್ಕಿಂತ ಸಾವಿರಾರು ಬಗೆಯ ನರಕ ಬಾಧೆಗಳನ್ನುಂಟುಮಾಡಬಹುದಾದ ಮರಣವೇ ಮೇಲು" ಎಂದು ಗದ್ದರಿಸಿದಳು.

ಕೋಪವೇರಿದ ರೇವತಿಯ ಪ್ರಕಾಶಮಾನವಾದ ಕಣ್ಣುಗಳಿಂದ ಬೆಂಕಿಯ ಕಿಡಿಗಳೇ ಹೊರಹೊಮ್ಮುವಂತೆ ತೋರಿತು; ನಾಸಾರಂಧ್ರಗಳಿಂದಲೂ ಮತ್ತು ಬಾಯಿಯಿಂದಲೂ ನಿಶ್ವಾಸೋಚ್ಛ್ವಾಸಗಳು ಬೇಗ ಬೇಗ ಹೋಗಿ ಬರುತ್ತಿದ್ದುವು. ಹಾಗೆಯೇ ಆ ನಿಶ್ವಾಸೋಚ್ಛ್ವಾಸಗಳಿಂದ ಬಾಲಿಕೆಯ ವಕ್ಷಸ್ಥಲವು ಬೇಗ ಬೇಗನೆ ಉಬ್ಬುತ್ತಲೂ ಇಳಿಯುತ್ತಲೂ ಕಂಪಿಸುತ್ತಲೂ ಇದ್ದಿತು.

ಬಾಲಿಕೆಯ ಆ ಭಾವವನ್ನು ಕಂಡು ಕೇಶವಚಂದ್ರನು ಕೊಂಚ ಮಟ್ಟಿಗೆ ವಿಸ್ಮಿತನಾದನು, ಕೊಂಚ ಮಟ್ಟಿಗೆ ಸ್ತಂಭಿತನಾದನು, ಸ್ವಲ್ಪ ಮಟ್ಟಿಗೆ ಭೀತನೂ ಆದನು. ಹಾಗಿದ್ದರೂ ಆ ಪಾಪಿಯು ತನ್ನ ಸಂಕಲ್ಪವನ್ನು ಬಿಡದೆ ರೂಪವತಿಯಾದ ಬಾಲಿಕೆಯ ಕಡೆಗೆ ಮತ್ತೆ ಮುಂದರಿದನು. ಬೇಟೆಗಾರನು ಬೆನ್ನಟ್ಟಿಬಂದ ಜಿಂಕೆಯ ಮರಿಯಹಾಗೆ ಬಾಲಿಕೆಯು ಓಡಿ ಹೊರಕ್ಕೆ ಬಂದು ಬಿಟ್ಟಳು. ಕೇಶವಚಂದ್ರನೂ ಕೂಡ ಆ ಹುಡುಗಿಯನ್ನು ಹಿಡಿದುಕೊಳ್ಳುವುದಕ್ಕೋಸ್ಕರ ಹೊರಕ್ಕೆ ಬರುತ್ತಿದ್ದನು. ಹೊರಗಡೆ, ಬಾಗಿಲ ಪಕ್ಕದಲ್ಲಿಯೇ, ಒಬ್ಬ ಹೆಂಗಸು ನಿಂತುಕೊಂಡಿದ್ದಳು. ಕೇಶವಚಂದ್ರನು ಹೊರಕ್ಕೆ ಬಂದಕೂಡಲೇ, ಆ ಹೆಂಗಸು ಅವನಿಗೆ ಬಲವಾದ ಒಂದು ಪೆಟ್ಟುಕೊಟ್ಟಳು; ಅದರಿಂದ ಅವನು ಬೀಳಲಿಲ್ಲವಾದರೂ ಹತ್ತು ಹೆಜ್ಜೆ ಹಿಂದಕ್ಕೆ ಸರಿದು ನಿಂತನು. ಆ ಹೆಂಗಸನ್ನು ಕಂಡು ಅರಗಳಿಗೆಯತನಕ ಏನುಮಾಡಬೇಕೆಂಬುದನ್ನೇ ಅರಿಯದವನಾಗಿ ಇದ್ದಲ್ಲಿಯೇ ಅವನು ನಿಂದಿರಬೇಕಾಯಿತು. ಆ ಅರಗಳಿಗೆಯೊಳಗಾಗಿ ಹೆಂಗಸು ತನ್ನೆರಡು ಕೈಗಳಿಂದಲೂ ಆತುರದಿಂದ ಬಾಗಿ

ಲನ್ನೆಳದು, ಹೊರಗಡೆಯಿಂದ ಚಿಲುಕಹಾಕಿಬಿಟ್ಟಳು. ಅದಾದನಂತರ ರೇವತಿಯ ಕೈಹಿಡಿದುಕೊಂಡು ಅಲ್ಲಿಯೇ ನಿಂತುಕೊಂಡಳು. ರೇವತಿಯೂ ವಿಸ್ಮಯಗೊಂಡವಳಾಗಿ, ನಟ್ಟ ದೃಷ್ಟಿಯಿಂದ ಆ ಹೆಂಗಸಿನ ಮುಖವನ್ನೇ ನೋಡುತ್ತಾ ಇದ್ದಳು.

---

## ಏಳನೆಯ ಪರಿಚ್ಛೇದ

### ಹೆಣ್ಣುಹುಲಿ ಮತ್ತು ಸರ್ಪ

“ಮೋಹಿನಿ, ಮೋಹಿನಿ, ಏಕೆ ಸಾಯುತ್ತೀಯೆ, ತೆಗೆ, ಬಾಗಿಲನ್ನು ತೆಗೆ, ಸುಮ್ಮನೆ ಸಾಯಬೇಡ! ಎಂದು ಕೇಶವಚಂದ್ರನು ಪಂಜರದಲ್ಲಿ ನಿರ್ಬಂಧಿಸಲ್ಪಟ್ಟ ಹಸಿದ ಹುಲಿಯಹಾಗೆ ಒಳಗಿನಿಂದಲೇ ವಿಕಾರವಾಗಿ ಗರ್ಜಿಸತೊಡಗಿದನು. ಹಾಗೆಯೇ ಅಡಿಗಡಿಗೂ ಬಾಗಿಲಮೇಲೆ ಬಲವಾಗಿ ಒದೆಯುತ್ತಲೂ ಇದ್ದನು. ಮತ್ತೀಮರದ ಆ ಬಾಗಿಲು ಅವನ ನೂರಾರು ಪಾದಪ್ರಹಾರಗಳಿಂದ ಕೊಂಚವಾದರೂ ಛಿನ್ನವಾಗದೆ, ನಿರಾಶ್ರಿತಳಾದ ಆ ಬಾಲಿಕೆಯ ಮುಖವನ್ನು ನೋಡುತ್ತಾ ಮೊದಲಿನ ಹಾಗೆ ಸ್ಥಿರವಾಗಿದ್ದಿತೆಂದು ತೋರುತ್ತದೆ.

ನಾವು ಯಾವ ಹೆಂಗಸಿನ ವಿಚಾರವನ್ನು ಕುರಿತು ಹೇಳಿದೆವೋ, ಅವಳು ನಮ್ಮ ಆ ಮೋಹಿನಿ, ನಿರಾಶಾಪೀಡಿತಳಾದ ದುಃಖಿನಿ, ಬಾಲವನ್ನು ತುಳಿದು ಕೆರಳಿಸಿದ ಸರ್ಪಿಣಿ, ಮಹಾ ಉನ್ಮಾದಿನಿ ಎಂಬುದನ್ನು ಪಾಠಕರು ತಿಳಿದಿರಬಹುದು.

ಒಳಗಡೆ ಕೇಶವಚಂದ್ರನು ತನ್ನ ಶಕ್ತಿಯನ್ನೆಲ್ಲ ವಿನಿಯೋಗಿಸಿ ಮುಚ್ಚಿದ್ದ ಬಾಗಿಲನ್ನು ಒದೆಯುತ್ತಲೂ, “ಮೋಹಿನಿ, ಪಿಶಾಚಿ, ಈಗ ಬಾಗಿಲನ್ನು ತೆರೆಯೆ, ಏಕೆ ಸಾಯುತ್ತೀಯೆ?” ಎಂದು ಸಿಡಿಲನಂತೆ ಗರ್ಜಿಸುತ್ತಲೂ ಇದ್ದನು.

ಮೋಹಿನಿಯು ಕಿಟಕಿಯ ಹತ್ತಿರ ನಿಂತುಕೊಂಡು ಪರಿಹಾಸ ಮಾಡಿ ನಗುತ್ತ, “ನನ್ನ ಮರಣದ ಸಲುವಾಗಿ ಇನ್ನು ಮೇಲೆ ಆಲೋ

ಚಿಸಬಹುದು. ಅದಕ್ಕೆ ಅವಕಾಶ ಬಹಳವಿದೆ; ಈಗ ನಿನ್ನ ಮರಣದ ವಿಚಾರವಾಗಿಯೇ ಮೊದಲು ಆಲೋಚಿಸು. ಇದು ಅಂತಿಂತಹ ಮರಣವಲ್ಲ, ಇದೇ ಸ್ಥಳದಲ್ಲಿ—ಆಹಾರವಿಲ್ಲದೆ—ಹಸಿವಿನಿಂದ ಎದೆಯೊಡೆದ ಮರಣ—ನಿನಗೆ ಯೋಗ್ಯವಾದ ಮರಣ. ಕೊಂಚಕೊಂಚವಾಗಿ, ಅನೇಕ ದಿನಗಳವರೆಗೆ, ವಿಳಂಬವಾಗುವ ಬಹು ಕಷ್ಟಕರವಾದ ದೀರ್ಘಕಾಲದ ಮರಣ. ನಿನ್ನ ಮರಣವನ್ನು ಇದಿರು ನೋಡುತ್ತಾ ಇನ್ನೂ ನಾನು ಸಾಯಲಿಲ್ಲ. ಮೊದಲು, ನಿನ್ನನ್ನು ಆರಾಧಿಸಬೇಕೆಂದು ಹಗಲೂ ರಾತ್ರಿಯೂ ಹೇಗೆ ತವಕಗೊಳ್ಳುತ್ತಿದ್ದೆನೋ—ಈಗ ಹಾಗೆಯೇ ಹಗಲೂ ರಾತ್ರಿ ನಿನಗೆ ಮರಣವನ್ನು ಬಯಸಿ ತವಕಗೊಳ್ಳುತ್ತಿದ್ದೇನೆ. ಈಗ ನಿನ್ನನ್ನು ಆ ಮರಣದ ಮುಖಕ್ಕೆ ಒಯ್ದು ಇಟ್ಟುದರಿಂದ ಬಹುಮಟ್ಟಿಗೆ ನಿಶ್ಚಿಂತಳಾಗಿರಬಲ್ಲೆನು'' ಎಂದು ಹೇಳಿದಳು.

ಕೇಶವಚಂದ್ರನು ಬಳಸುತ್ತಿದ್ದ ಬೀಗ ಬೀಗದ ಕೈಗಳು ಚಿಲುಕದ ಕೊಂಡಿಗೆ ತಗಲಹಾಕಿತ್ತು; ಮೋಹಿನಿಯು ಶಬ್ದವಾಗುತ್ತಾ ಚಿಲುಕಕ್ಕೆ ಬೀಗವನ್ನು ಹಾಕಿ ಬೀಗದ ಕೈಯ್ಯನ್ನು ಪನಮುಷ್ಟೋ ದೂರವಾಗಿ ಎಸೆದು ಬಿಟ್ಟಳು.

ಕೇಶವಚಂದ್ರನು, ''ಮೋಹಿನಿ, ಈಗಲಾದರೂ ಬಾಗಿಲನ್ನು ತೆರೆ. ಸುಮ್ಮನೇ ಏಕೆ ಸಾಯುತ್ತೀಯೆ'' ಎಂದು ಪುನಃ ಹೇಳಿದನು.

ಮೋಹಿನಿಯು, ''ಯಾರನ್ನು ಭಯಪಡಿಸುತ್ತೀಯೆ? ನನಗೆ ಇನ್ನು ಮರಣದ ಭೀತಿಯಿಲ್ಲ'' ಎಂದು ನಗುತ್ತಾ ಉತ್ತರ ಹೇಳಿದಳು.

ಕೇಶವಚಂದ್ರ—ಇದರಿಂದ ನನಗೆ ಎಷ್ಟರ ನಷ್ಟವಾಗುವುದೆಂಬುದನ್ನು ನೀನು ಕಾಣೆ.

ಮೋಹಿನಿ—ನಿನ್ನ ನಷ್ಟದಿಂದ ನನಗೆ ಎಷ್ಟು ಲಾಭವೆಂಬುವನ್ನು ನೀನು ಕಾಣೆ.

ಕೇಶವಚಂದ್ರ—ಇದಕ್ಕಾಗಿ ನಾನು ನಿನ್ನನ್ನೆಂದಿಗೂ ಕ್ಷಮಿಸಲಾರೆ.

ಮೋಹಿನಿ—ಕ್ಷಮಿಸಬೇಕೆಂದು ಯಾರೂ ನಿನ್ನನ್ನು ಬೇಡುವುದಿಲ್ಲ.

## ಎಂಟನೆಯ ಪರಿಚ್ಛೇದ

### ಮೋಹಿನಿ ಮತ್ತೂ ರೇವತಿ

ಮೋಹಿನಿಯು ರೇವತಿಯನ್ನು ಜತೆಯಲ್ಲಿ ಕರೆದುಕೊಂಡು ಬೇಗ ಬೇಗ ವನಮಧ್ಯವನ್ನು ಪ್ರವೇಶಿಸಿದಳು. ಅಲ್ಲಿ, ರೇವತಿಯಿಂದಲೇ ಅವಳ ದುರವಸ್ಥೆಯ ಎಲ್ಲ ಸಮಾಚಾರಗಳನ್ನೂ ಮೋಹಿನಿ ಕೇಳಿ ತಿಳಿದುಕೊಂಡಳು. ಕೇಳಿದವಳೇ ಮೋಹಿನಿಯು, "ಈಗ ಏನ ಮಾಡುವೆ? ಯಾವ ರೀತಿಯಲ್ಲಿ ಮನೆಗೆ ಹಿಂದಿರುಗಿ ಹೋಗುವೆ? ವೇಣೀಮಾಧವ ಪುರಕ್ಕೆ ಇಲ್ಲಿಂದ ಇಪ್ಪತ್ತು ಹರದಾರಿ ದೂರವಿದೆ, ಇಷ್ಟು ದೂರ ನೀನು ಒಬ್ಬಂಟಿಗಳಾಗಿ ಹೋಗುವುದು ಈ ಸಂದರ್ಭದಲ್ಲಿ ಸಾಧ್ಯವಿಲ್ಲ; ಹಾಗೆ ಮಾಡುವುದರಲ್ಲಿ ಗಂಡಾಂತರಗಳೂ ಉಂಟು; ಪುನಃ ಸಿಕ್ಕಿ ಬಿದ್ದರೂ ಬೀಳಬಹುದು. ಕೆಲವು ದಿನಗಳ ಮಟ್ಟಿಗೆ ತಲೆಮರೆಸಿಕೊಂಡಿರುವುದಕ್ಕೆ ನಿನಗೆ ಆಶ್ರಯಕೊಡಬಲ್ಲ ಆತ್ಮೀಯರು ಈ ಹುಗಲೀ ಜಿಲ್ಲೆಯಲ್ಲಿ ಯಾರೂ ಇಲ್ಲವೆ?—ಎಂದು ಹೇಳಿದಳು.

ರೇವತಿಯು ನಿಟ್ಟುಸಿರುಬಿಟ್ಟು—ಯಾರಿದ್ದಾರೆ? ಇಲ್ಲ, ಅಂತಹ ಆತ್ಮೀಯರು ಯಾರೂ ಇಲ್ಲ. ಆದರೆ ಚಂದನ ನಗರದ ಬಳಿ ಗೋಸಾಯಿ ಪುರದಲ್ಲಿ ನಮ್ಮ ಗುರು ಒಬ್ಬನಿದ್ದಾನೆ; ಆತನನ್ನು ನೋಡುವುದು ಸಾಧ್ಯವಾದರೆ, ಆತನು ಆಶ್ರಯ ಕೊಟ್ಟರೂ ಕೊಡಬಹುದು.

ಮೋಹಿನಿ—ಚಂದನ ನಗರವು ಇಲ್ಲಿಗೆ ಎರಡು ಹರದಾರಿಗೂ ಸ್ವಲ್ಪ ಹೆಚ್ಚಾಗಿದೆ. ಘೋರ ಸ್ವರೂಪವನ್ನು ಧಾರಣಮಾಡಿರುವ ಆಕಾಶವನ್ನು ನೋಡಿದರೆ ಈಗಲೇ ಮಳೆ ಬರುವಂತೆ ಇದೆ. ದಾರಿಯಲ್ಲಿ ನಿನಗೆ ತೊಂದರೆಯಾದೀತು. ಒಂದು ವೇಳೆ ಹೊರಡುವ ಪ್ರಯತ್ನ ಮಾಡುವುದಾದರೆ ನಾನು ನಿನಗೆ ದಾರಿ ತೋರಿಸಿಕೊಡುತ್ತೇನೆ. ಆ ಮಾರ್ಗವಾಗಿ ಹೋದರೆ ನಿನಗೆ ಯಾವ ತೊಂದರೆಯೂ ಇಲ್ಲ.

ರೇವತಿ—ನೀನು ಇಲ್ಲಿ ಇರುವುದೆಲ್ಲಿ? ಈ ರಾತ್ರಿಯ ಮಟ್ಟಿಗೆ ನಿನ್ನ ಸಂಗಡ ಇಲ್ಲಿಯೇ ಇರಬಹುದಲ್ಲ?

ಮೋಹಿನಿ—ನಾನಿರುವುದಕ್ಕೆ ಗೊತ್ತಾದ ಸ್ಥಳ ಒಂದೂ ಇಲ್ಲ; ಯಾವಾಗ ಎಲ್ಲಿಗೆ ಹೋಗುವೆನೋ ಅಲ್ಲಿಯೇ ಸ್ವಲ್ಪ ವಿಶ್ರಮಿಸಿಕೊಳ್ಳುವುದಕ್ಕೆ ಅನುಕೂಲಮಾಡಿಕೊಳ್ಳುತ್ತೇನೆ. ಹೀಗೆ ಹಗಲೂ ರಾತ್ರಿ ಕಾಡು ಮೇಡುಗಳಲ್ಲಿ ಅಲೆಯುತ್ತಿದ್ದೇನೆ.

ರೇವತಿ—ನಿನಗೆ ಯಾರೂ ಇಲ್ಲವೆ?

ಮೋಹಿನಿ—ಇದ್ದಾನೆ, ಸ್ವಾಮಿ.

ರೇವತಿ—ಆತನು ನಿನ್ನ ಕ್ಷೇಮಲಾಭವನ್ನು ನೋಡುವುದಿಲ್ಲವೆ?

ಮೋಹಿನಿ—ಆತನ ಅನುಗ್ರಹ.

ರೇವತಿ—ಆತನು ಇರುವುದೆಲ್ಲಿ?

ಮೋಹಿನಿ—ಯಾವನು ನಿನ್ನನ್ನು ತನ್ನ ಸವತಿಯನ್ನಾಗಿ ಮಾಡಬೇಕೆಂದು ನಿನ್ನೊಡನೆ ಅಸಾಧ್ಯವಾದ ವರ್ತನಗಳನ್ನೆಲ್ಲಾ ನಡೆಸಿದನೋ ಅವನೇ ಅವನು.

ರೇವತಿ—(ವಿಸ್ಮಿತಳಾಗಿ) ಅವನೆ? ಅಂತಹ ಸ್ವಾಮಿ!

ಮೋಹಿನಿ— (ಚೂರಿಯನ್ನು ತೋರಿಸಿ) ಅಂತಹ ಸ್ವಾಮಿಯಾದ್ದರಿಂದಲೇ ಈ ಚೂರಿಯನ್ನು ಹಿಡಿದು ಅಲೆಯುತ್ತಿದ್ದೇನೆ. ಈ ಜನ್ಮದಲ್ಲಂತೂ ಅವನನ್ನು ಹೊಂದಲಿಲ್ಲ—ಹೊಂದಲಾಗಲಿಲ್ಲ—ಆದರೆ ಕಳಂಕವನ್ನು ಮಾತ್ರ ಹೊಂದಿದೆ. ಆತನನ್ನು ಇಹಲೋಕದಲ್ಲಿ ಹೊಂದಲು ಆಗಲಿಲ್ಲವೆಂದು ಹೇಳಿ ಪರಲೋಕದಲ್ಲಿ ಸೇರುವ ಆಸೆಯನ್ನೇಕೆ ಬಿಡಲಿ? ಒಂದು ದಿವಸ—ಯಾವ ದಿವಸ ಪರಲೋಕಯಾತ್ರೆಯ ಸಮಯವು ಸನ್ನಿಹಿತವಾಗುವುದೋ ಆ ದಿವಸ,—ಇದೇ ಚೂರಿಯು ಆತನ ಹೃದಯ ರಕ್ತಕ್ಕೂ ಹಾಗೆಯೇ ನನ್ನ ಹೃದಯರಕ್ತಕ್ಕೂ ಬೇರ್ಪಡಿಸಲಾಗದಂತಹ ಅಕ್ಷಯವಾದ ಸಂಯೋಗವನ್ನು ಮಾಡಿಬಿಡುತ್ತದೆ. ನಡೆ, ನಿನಗೆ ದಾರೀ ತೋರಿಸಿ ಬರುತ್ತೇನೆ. ನಾನು ಈಗಲೇ ಹಿಂದಿರುಗಿ ಬರಬೇಕು.

ರೇವತಿ—ನಿನ್ನ ಗತಿಯೇನು? ಅವನು ನಿನ್ನ ಮೇಲೆ ಹಾಗೆ ಕೋಪಿಸಿಕೊಂಡನಲ್ಲ, ಆದರಿಂದ ನಿನ್ನ ಪರಿಣಾಮವೇನಾಗುವುದೋ ಯಾರು ಬಲ್ಲರು? ನನಗಾಗಿ ನೀನೇಕೆ ವಿಪತ್ತಿಗೆ ಸಿಕ್ಕಬೇಕು?

ಮೋಹಿನಿ—ಇದಕ್ಕೆ ಮೊದಲೇ ಇಂತಹ ಅನೇಕ ವಿಪತ್ತುಗಳು ನನ್ನ ಜೀವನವನ್ನು ಹಾದು ಹೊರಟುಹೋಗಿವೆ. ಈಚೆಗೆ ಬಹು ದಿನಗಳಿಂದ ಯಾವುದೊಂದೂ ಇಲ್ಲ. ಆದ್ದರಿಂದ ಬೇಸರವಾಗಿದೆ. ವಿಪತ್ತುಗಳೆಂದರೆ ನಿನಗೆ ಸೇರದು; ಆದರೆ ನಾನು ನಿತ್ಯವೂ ವಿಪತ್ತುಗಳೊಡನೆ ಇರುವುದರಿಂದ ವಿಪತ್ತುಗಳನ್ನು ಸ್ವಲ್ಪ ಮಟ್ಟಿಗೆ ಪ್ರೀತಿಸುವುದನ್ನು ಕಲಿತಿದ್ದೇನೆ; ಆದ್ದರಿಂದಲೇ ನಾನು ವಿಪತ್ತುಗಳನ್ನು ಪ್ರೀತಿಸುವುದು, ನಿನ್ನ ವಿಪತ್ತನ್ನು ನಾನು ತೆಗೆದುಕೊಂಡ ಪಕ್ಷದಲ್ಲಿ ಅದರಿಂದ ನಿನಗೇನು ದುಃಖ? ಈಗ ಬಾ, ನಿನ್ನನ್ನು ಇಲ್ಲಿಂದ ಕಳುಹಿಸಿ ಬಿಡುವವರೆಗೂ ನಿನ್ನ ವಿಪತ್ತನ್ನು ನಾನು ಸಂಪೂರ್ಣವಾಗಿ ವಹಿಸಿಕೊಂಡಂತೆ ಆಗುವುದಿಲ್ಲ.

ಹೀಗೆಂದು ಹೇಳಿ ಮೋಹಿನಿಯು ರೇವತಿಯ ಕೈಗಳನ್ನು ಹಿಡಿದು ಅವಳನ್ನು ಸರಸರನೆ ಎಳೆದುಕೊಂಡು ಹೋದಳು.

---

## ಒಂಭತ್ತನೆಯ ಪರಿಚ್ಛೇದ

### ಕೇಶವಚಂದ್ರನ ಬಿಡುಗಡೆ

ಹೊರಗೆ ಬರುವುದಕ್ಕೆ ಯಾವ ಉಪಾಯವನ್ನೂ ಕಾಣದೆ ಕೇಶವಚಂದ್ರನು ತಾನು ನಿರ್ಬಂಧಿತನಾಗಿದ್ದ ಕೊಠಡಿಯಲ್ಲಿ ಸುಮ್ಮನೆ ಕುಳಿತಿದ್ದನು. ಕ್ರಮವಾಗಿ ಸಂಧ್ಯೆಯು ಕಳೆಯಿತು. ಮತ್ತೂ ಎಲ್ಲೆಲ್ಲಿಯೂ ಅಂಧಕಾರವು ನಿಬಿಡವಾಗಿ ವ್ಯಾಪಿಸಿದ್ದುದರಿಂದ ಇದಿರಾಗಿರುವ ದಟ್ಟವಾದ ವನಭೂಮಿಯು ಭೀಷಣವಾಗಿ ಕಾಣುತ್ತಿದ್ದಿತು. ಹಾಗೆಯೇ ಗರ್ಜನ ಮಾಡುತ್ತಾ ಬಿರ್ರನೆ ಬಿರುಗಾಳಿ ಬೀಸಲಾರಂಭಿಸಿತು; ಹಾಗೆಯೇ ಬಿರುಗಾಳಿಯ ದೆಸೆಯಿಂದ ತೂಗಾಡುತ್ತಿರುವ ಅಸಂಖ್ಯವಾದ ಕಾಡು ಮರ

ಗಳ ಸಂಗಡ ನಿಬಿಡತರವಾದ ಅಂಧಕಾರವು ಸಂಕ್ಷುಬ್ಧವಾದ ಸಮುದ್ರದ ಹಾಗೆ ಭಯಪಡಿಸುತ್ತಿತ್ತು. ಮೇಘಪೂರ್ಣವಾಗಿ, ಕಾಡಿಗೆಯ ಹಾಗೆ ಕಪ್ಪಾಗಿರುವ ಆಕಾಶದ ಸಂಗಡ, ಅದಕ್ಕೆ ಅನುರೂಪವಾದ ವನಸ್ಥಳವು ಒಂದಾಗಿ ಸೇರಿ, ನೀಲವರ್ಣವನ್ನು ಮುಚ್ಚಿ, ನಕ್ಷತ್ರಗಳನ್ನು ಮುಚ್ಚಿ, ಚಂದ್ರನನ್ನು ಮುಚ್ಚಿ, ಪ್ರಕೃತಿಯ ಪಕ್ಷದಲ್ಲಿ ಚಿತ್ರ ವೈಚಿತ್ರ್ಯಗಳೊಂದೂ ಇಲ್ಲದಂತೆ ಮಾಡಿವೆ; ದೃಷ್ಟಿಯು ಓಡುವವರೆಗೆ ಎತ್ತಕಡೆ ನೋಡಿದರೂ ವಿಸ್ತಾರವಾದೊಂದು ಕರಿಯ ಒಣ್ಣದ ತೆರೆ ಬಿಟ್ಟಿರುವ ಹಾಗೆ ಕಾಣುತ್ತಿದೆ.

ಸ್ವಲ್ಪ ಹೊತ್ತಿನ ಮೇಲೆ, ಆ ಅಂಧಕಾರದಲ್ಲಿ, ಮತ್ತೊಬ್ಬ ಕರಿಯನು ಬಂದು ಕೇಶವಚಂದ್ರನು ನಿರ್ಬಂಧಿಸಲ್ಪಟ್ಟಿದ್ದ ಕೊಠಡಿಯ ಮುಂದೆ ನಿಂತು "ರೇವತಿ, ರೇವತಿ!" ಎಂದು ಕೂಗಿದನು.

ಅವನ ಕಂಠಸ್ವರವನ್ನು ಕೇಳಿದುದೇ ತಡ, ಸತ್ತಹಾಗೆ ಬಿದ್ದಿದ್ದ ಕೇಶವಚಂದ್ರನಿಗೆ ಜೀವಬಂದಂತೆ ಆಯಿತು. ಕುಳಿತಿದ್ದವನು ಆತುರದಿಂದ "ಯಾರು ಗೋರಾಚಾಂದ? ಇಲ್ಲಿ ಸರ್ವನಾಶವಾಗಿ ಹೋಯಿತು." ಎಂದು ಹೇಳುತ್ತಾ ಹಾಕಿದ್ದ ಬಾಗಿಲ ಬಳಿ ಬಂದು ನಿಂತುಕೊಂಡನು.

ಗೋರಾಚಾಂದ—ನೀವು ಇಲ್ಲಿಯೇ ಇದ್ದೀರಿ; ನಿಮ್ಮನ್ನು ಹುಡುಕಿಕೊಂಡೇ ನಾನು ಇಲ್ಲಿಗೆ ಬಂದೆ. ಬಾಗಿಲು ತೆರೆಯಿರಿ, ಅನೇಕ ಸಮಾಚಾರಗಳುಂಟು.

ಕೇಶವಚಂದ್ರ—ಬಾಗಿಲು ಹೊರಗಡೆ ಬೀಗಹಾಕಿದೆ. ಬೇಗ ಬಾಗಿಲನ್ನು ತೆರೆ.

ಕತ್ತಲಿನಲ್ಲಿ ಹುಡುಕಿ ಗೋರಾಚಾಂದನು ಚಿಲುಕವಿರುವ ಸ್ಥಳವನ್ನು ಗುರ್ತಿಸಿದನು. ನೋಡಿದನು, ಅದಕ್ಕೆ ಬೀಗಹಾಕಿದೆ; ಹೇಳಿದನು, "ಡಾಕ್ಟರ ಬಾಬೂ, ಯಾವ ಬೀಗದ ಕೈಯಿಂದ ಇದನ್ನು ತೆಗೆಯಲಿ? ತಮ್ಮಲ್ಲಿ ಬೀಗದ ಕೈ ಇದೆಯೆ?

ಕೇಶವಚಂದ್ರ—ಬೀಗದ ಕೈ ಇಲ್ಲ, ಹೇಗಾದರೂ ಮಾಡು, ಈಗ ಅದನ್ನು ಒಡೆದುಬಿಡು.

ಗೋರಾಚಾಂದನು ವಿಸ್ಮಿತನಾಗಿ, ಇದೇನು ವ್ಯಾಪಾರ? ನನಗೆ ಒಂದೂ ತಿಳಿಯುವ ಹಾಗಿಲ್ಲ, ಏನು ಸಮಾಚಾರ? ಎಂದು ಕೇಳಿದನು.

ಕೇಶವಚಂದ್ರ—ಸರ್ವ ನಾಶವಾಯಿತು. ಪಕ್ಕಿ ಹಾರಿಹೋಯಿತು. ತುಂಬಿದ ಹಡಗು ಮುಳುಗಿಹೋಯಿತು. ಒಂದೇ ಗಂಟೆನಲ್ಲಿ ಇಪ್ಪತ್ತು ಸಾವಿರ ರೂಪಾಯಿ ನಷ್ಟವಾಯಿತು. ಮೊದಲು ಬಾಗಿಲನ್ನು ತೆರೆ. ಎಲ್ಲ ವಿಚಾರವನ್ನೂ ಹೇಳುತ್ತೇನೆ.

ಗೋರಾಚಾಂದನು ಬಹುವಾಗಿ ಹುಡುಕಿ, ಆ ಮುರುಕು ಮನೆಯಲ್ಲಿ ಇತ್ತಲೂ ಅತ್ತಲೂ ಸುತ್ತಿ, ಮುರಿದುಹೋದ ಕಿಟಿಕಿಯೊಂದರ ಕಬ್ಬಿಣದ ಕಂಬಿಯೊಂದನ್ನು ಎತ್ತಿಕೊಂಡು ಬಂದನು. ಅದರಿಂದಲೇ ಅವನ ಕೆಲಸವಾಯಿತು; ಆ ಕಂಬಿಯನ್ನು ಬೀಗದೊಳಕ್ಕೆ ಹಾಕಿ ಒಂದು ಸುತ್ತು ಸುತ್ತುವವೇಳೆಗೆ ಬೀಗವು ಕಿತ್ತು ಬಾಗಿಲು ತೆರೆಯಿತು. ಕೇಶವಚಂದ್ರನು ಅವಸರವಸರದಿಂದ ಹೊರಕ್ಕೆ ಬಂದನು.

---

## ಹತ್ತನೆಯ ಪರಿಚ್ಛೇದ

### ಮೋಹಿನಿಯ ಸಂಧಾನ

ಕೇಶವಚಂದ್ರನು ಹೊರಗೆ ಬಂದು ಗೋರಾಚಾಂದನನ್ನು ಕುರಿತು, "ಗೋರಾಚಾಂದ, ರೇವತಿಯು ಓಡಿಹೋಗಿದ್ದಾಳೆ" ಎಂದನು. ಗೋರಾಚಾಂದನು ವಿಸ್ಮಿತನಾಗಿ, 'ಅದೇನು! ಎಲ್ಲಿಗೆ ಹೋದಳು? ಯಾವಾಗ?' ಎಂದು ಕೇಳಿದನು.

ಕೇಶವಚಂದ್ರ—ಎಲ್ಲಿಗೆ ಹೋದಳೋ ತಿಳಿಯದು. ಸುಮಾರು ಒಂದು ಗಂಟೆಯಾಗಿರಬಹುದು, ನನ್ನ ಕಣ್ಣೆದುರಾಗಿಯೇ ಅವಳು ಓಡಿ ಹೋದಳು.

ಕೇಶವಚಂದ್ರನು ಒಂದೊಂದಾಗಿ ಎಲ್ಲ ಸಮಾಚಾರವನ್ನೂ ಗೋರಾಚಾಂದನಿಗೆ ಹೇಳಿದನು. ಅದೆಲ್ಲವನ್ನೂ ಕೇಳಿ ಗೋರಾಚಾಂದ

ನಿಗೆ ಮತ್ತಷ್ಟು ವಿಸ್ಮಯವಾಯಿತು; ಹೇಳಿದನು, "ಇಂದೆಂತಹ ಸರ್ವನಾಶ! ಈಗಲೇ ರೇವತಿಯನ್ನು ಕಂಡುಹಿಡಿಯಬೇಕು."

"ಈಗಲೇ ಏನು, ಈ ಕ್ಷಣದಲ್ಲಿಯೇ ಹೇಗಾದರೂ ಮಾಡಿ, ಅವಳನ್ನು ಹಿಡಿದು ತರಬೇಕು, ಇಲ್ಲವಾದರೆ ಎಲ್ಲವೂ ವ್ಯರ್ಥವಾಗುವುದು. ಇಷ್ಟು ತೊಂದರೆಗಳಿಗೂ ನೀನೇ ಕಾರಣ, ನೀನು ಹಿಂದಿರುಗಿ ಬರಬೇಕಾದರೆ ಇಷ್ಟು ಸಾವಕಾಶವೇಕಾಯಿತೋ ಕಾಣೆ. ಸೂಳೇ ಮಗನೆ, ಒಂದು ಗಂಟೆಗೆ ಮೊದಲು ಹಿಂದಿರುಗಿದ್ದರೆ ನಾನು ಹೀಗೆ ಮುಳುಗಿ ಹೋಗುತ್ತಿರಲಿಲ್ಲ. ಈಗ ನಿನ್ನ ತಲೆಯೊಡೆದು ಬಿಡಲೆ,—ಎನ್ನುವಷ್ಟು ಕೋಪಬಂದಿದೆ"

"ಹ್ಹಾ, ನನ್ನದೆ ದೊಡ್ಡ ತಪ್ಪಾಯಿತಲ್ಲವೆ; ನಿರ್ಬಂಧಕ್ಕೆ ಸಿಕ್ಕಿ ತೆಪ್ಪಗೆ ಕುಳಿತುಕೊಂಡಿದ್ದಿರಿ, ನಾನು ಬಂದು ನಿಮ್ಮನ್ನು ಬಿಡುಗಡೆ ಮಾಡಿದೆ; ಇದೇ ನನ್ನ ತಪ್ಪು?"

(ಕೋಪದಿಂದ) ತಪ್ಪಲ್ಲವೇನೋ, ನೀನು ಎಲ್ಲಿಗೆ ಹೋದರೆ ಅಲ್ಲಿಯೇ ನಿನಗೆ ದೊಡ್ಡಮ್ಮನ ಆವೇಶವಾಗುತ್ತದೆ. ಒಂದು ಗಂಟೆಯ ಕೆಲಸಕ್ಕೆ ಹತ್ತು ಗಂಟೆ ಕಳೆದು ಬರುತ್ತೀಯೆ, ನಿನ್ನನ್ನು ಕಟ್ಟಿಕೊಂಡು ನನ್ನ ಕೆಲಸ ನಡೆಸುವುದು ತುಂಬ ಕಷ್ಟವಾಗಿದೆ.

"ನಾನು ಸಾಯಂಕಾಲಕ್ಕೆ ಮೊದಲೇ ಹಿಂದಿರುಗಿ ಬಂದೆ, ಇಪ್ಪತ್ತು ಹರದಾರಿಯ ದೂರವೇನು ಸಾಮಾನ್ಯವಲ್ಲ; ಆಮೇಲೆ ನಿಮ್ಮ ಮನೆಗೆ ಹೋಗಿ ನೋಡಿದೆ, ನೀವು ಅಲ್ಲಿ ದೊರಿಯಲಿಲ್ಲ; ಅಲ್ಲಿಂದ ಪುನಃ ತಮಿರಾಜುದ್ದೀನನ ಮನೆಗೆ ಹೋದೆ. ಅವನ ಮಗಳನ್ನು ಕಂಡು ತಮ್ಮ ವಿಚಾರ ಕೇಳಿದೆನೋ ಇಲ್ಲವೋ, ಆ ಬಜಾರಿ 'ಇಲ್ಲ' ಎಂದು ಹೇಳಿ ಮುಖ ತಿರುಗಿಸಿಕೊಂಡು ಹೊರಟುಹೋದಳು. ಇದೆಲ್ಲವೂ ಆದ ಮೇಲೆ ಇಲ್ಲಿಗೆ ಬಂದು ಈ ಸುದ್ದಿ ಕೇಳಿದೆ. ಇದನ್ನು ಕೇಳಿದ್ದೇ ಎದೆ ಒಡೆಯಿತು."

"ನಿನ್ನನ್ನು ಎಲ್ಲಿಗೆ ಕಳುಹಿಸಿದ್ದೆನೋ ಅಲ್ಲಿ ಏನೇನು ಮಾಡಿಕೊಂಡು ಬಂದಿರುವೆಯೋ ಹೇಳು ನೋಡೋಣ. ಅವನು ಏನು ಹೇಳಿದ?"

"ನನ್ನನ್ನು ನೋಡಿದಕೂಡಲೇ ಅವಸರವಸರವಾಗಿ ನಿರ್ಜನವಾದ ಮನೆಯೊಂದಕ್ಕೆ ಕರೆದುಕೊಂಡು ಹೋಗಿ ಕುಳ್ಳಿರಿಸಿದನು. ಅಲ್ಲಿ ನಾನು ಅದನ್ನು ಅವನ ಕೈಗೆ ಕೊಟ್ಟೆ, ನೋಡಿ ತುಂಬಾ ಆನಂದಿಸಿದ"

"ರೂಪಾಯಿ ವಿಚಾರವೇನಾಯಿತು?"

"ಆ ವಿಷಯವಾಗಿಯೇ ಸ್ವಲ್ಪ ತೊಂದರೆಗಿಟ್ಟಿದೆ; ಎರಡು ಕೆಲಸಗಳನ್ನೂ ಮುಗಿಸಬೇಕಂತೆ; ಹಾಗೆ ಮಾಡದಿದ್ದರೆ ಹಣಕಾಸಿನ ವಿಷಯ ಏನೂ ಆಗುವ ಹಾಗಿಲ್ಲ. ಮೊದಲು ಒಂದು ಕೆಲಸವನ್ನು ಮುಗಿಸಿ ಕೊಟ್ಟು ಕೊಂಚ ಹಣವನ್ನು ಕೈಗೆ ಹಾಕಿಕೊಳ್ಳಬೇಕೆಂದೂ ಆನಂತರ ಅವನನ್ನು ಹೆದರಿಸಿ ಬೆದರಿಸಿದರೆ ಅವನ ಜಮೀನುದಾರಿ, ಆಸ್ತಿ ಪಾಸ್ತಿಯೆಲ್ಲವೂ ಸುಲಭವಾಗಿ ಕೈಸೇರುವುದೆಂದೂ ನೀವು ಊಹಿಸಿದ್ದಿರಿ; ಅದು ಹೇಗಾಯಿತು ನೋಡಿದಿರಾ? ಅವನು ಪೂರಾ ಘಾಟೀಕೋರ, ನಮ್ಮ ವಿಷಯದಲ್ಲಿ ಅವನ ನಡವಳಿಯೇ ಒಂದು ಮಾದರಿ; ಅವನು ಹೇಳುವುದೇನೆಂದರೆ,—"ಇಬ್ಬರ ದೆಸೆಯಿಂದ ನನಗೆ ಯಾವ ಭಯವುಂಟೋ ಒಬ್ಬರಿಂದಲೂ ಅಷ್ಟೇ; ಆದ್ದರಿಂದ ಈಗ ಕೆಲಸವಾಯಿತೆಂದು ಹೇಳುವುದು ಹೇಗೆ?" ಎಂದು.

"ಇದುವರೆಗಣ ಆಲೋಚನೆ, ಪ್ರಯತ್ನ, ಪರಿಶ್ರಮ ಎಲ್ಲವೂ ವ್ಯರ್ಥವಾದ ಹಾಗೆಯೇ ತೋರುತ್ತದೆ."

"ಆಗಲೇ ಹೇಳಿದೆ; ಇಬ್ಬರನ್ನೂ ಒಟ್ಟಿಗೆ ತೀರಿಸಿಬಿಡಿ ಎಂದೆ; ಅದನ್ನು ನೀವು ಕೇಳಲಿಲ್ಲ. ಕೇಳಿದ್ದರೆ ಈಗ ಇಪ್ಪತ್ತು ಸಾವಿರ ರೂಪಾಯಿಗಳ ಥೈಲಿ ಮನೆಗೆ ಬರುತ್ತಿದ್ದಿತು, ಬಡವನ ಮಾತು ಅನುಭವಕ್ಕೆ ಬಂದ ನಂತರವೇ ರುಚಿಸುವುದು. ನೀವು ದುರಾಶೆಗೆ ಬಿದ್ದಿರಿ; ಸಹಜವಾಗಿ ಅತಿಯಾಸೆಯಿಂದ ಪಾಪ, ಪಾಪದಿಂದ ಮರಣ."

"ಏಕೆ? ಆತನ ಸಂಗಡ ನಾವು ಮಾಡಿಕೊಂಡಿದ್ದ ಒಪ್ಪಂದವೇ ನೆಂಬುದನ್ನು ಅವನಿಗೆ ಹೇಳಲಿಲ್ಲವೆ? ಕೆಲಸವು ಒಂದೊಂದಾಗಿ ಮುಗಿಸಲ್ಪಡುತ್ತದೆ, ಒಂದೊಂದು ಕೆಲಸಕ್ಕೆ ಹತ್ತು ಹತ್ತುಸಾವಿರ ರೂಪಾಯಿ;

ಹೀಗೆಯೇ ನಾವು ಮಾತನಾಡಿದ್ದುದ್ದು; ಕೆಲಸವೊಂದಕ್ಕೆ ಹತ್ತು ಸಾವಿರ ರೂಪಾಯಿಯ ಹಾಗೆ ಎರಡು ಕೆಲಸಗಳಿಗೆ ಇಪ್ಪತ್ತು ಸಾವಿರ ರೂಪಾಯಿ ಕೊಡತಕ್ಕುದೆಂದು ಕಾಗದ ಪತ್ರಗಳಲ್ಲಿಯೂ ಬರೆದಿದೆಯಲ್ಲ?"

"ಅದು ಗೊತ್ತಾಯಿತು, ಆದರೆ ಆ ಇಪ್ಪತ್ತು ಸಾವಿರ ರೂಪಾಯಿಗಳನ್ನು ಎರಡು 'ಬಿಸ್ತು'ಗಳಲ್ಲಿ ಕೊಡುವುದೆಂದಿಲ್ಲ, ಒಂದೇ ಗಂಟಿನಲ್ಲಿ ಕೊಡುವುದೆಂದಿದೆ. ಈಗ ಇಲ್ಲಿಗೆ ಬಂದು ನೋಡುವುದರಲ್ಲಿ ನಿಮ್ಮದೃಷ್ಟಕ್ಕೆ ನೀವೇ ಇಕ್ಕಟ್ಟಿಗೆ ಸಿಕ್ಕಿಕೊಂಡಿದ್ದೀರಿ; ಇಪ್ಪತ್ತು ಸಾವಿರ ರೂಪಾಯಿ ಬರುವ ಕಡೆ ಈಗ ಇಪ್ಪತ್ತು ಕಾಸುಗಳು ಕೂಡ ಬರುವ ಹಾಗಿಲ್ಲ."

ಕೇಶವಚಂದ್ರನು ಆರೆಗಳಿಗೆ ಸುಮ್ಮನಿದ್ದು ಏನೋ ಆಲೋಚಿಸಿದನು. ಆಲೋಚಿಸಿ ಹೇಳಿದನು, "ಗೋರಾಚಾಂದ, ನೀನು ಹೊರಡು, ಹೇಗಾದರೂ ಮಾಡು, ರೇವತಿಯನ್ನು ಹಿಡಿದುಕೊಂಡು ಬಾ; ಅವಳನ್ನು ಜೀವಸಹಿತವಾಗಿ ತರಬಹುದಾದರೆ, ಮೊದಲು ಆ ಪ್ರಯತ್ನಮಾಡು. ನಾನು ಅವಳನ್ನು ನನ್ನ ಕೈಯಾರ ಕೊಲ್ಲುತ್ತೇನೆ. ಒಂದು ವೇಳೆ, ಅಂತಹ ತೊಂದರೆಗಳೇನಾದರೂ ಕಾಣಬಂದರೆ, ಆಗ ಅವಳನ್ನು ಕೊಂದು ಅವಳ ಮೃತದೇಹವನ್ನು ಎತ್ತಿಕೊಂಡು ಬಾ; ಬದುಕಿರಲಿ ಅಥವಾ ಸತ್ತಿರಲಿ, ಯಾವ ಅವಸ್ಥೆಯಲ್ಲಿಯಾದರೂ ಸರಿ ರೇವತಿಯು ನನಗೆ ಬೇಕೇ ಬೇಕು; ಇಲ್ಲವಾದರೆ ಇಪ್ಪತ್ತು ಸಾವಿರ ರೂಪಾಯಿ ಒಟ್ಟಿಗೆ ಮುಳುಗಿಹೋಗುತ್ತದೆ. ಅತಿಯಾಗಿ ಆಸೆ ಪಡುವುದು ತಪ್ಪೆಂದು ಈಗ ತಿಳಿಯಿತು. ನೀನು ರೇವತಿಯನ್ನು ಹುಡುಕಿಕೊಂಡು ಹೊರಡು; ನಾನು ಮೋಹಿನಿಯನ್ನು ಹುಡುಕಿಕೊಂಡು ಹೋಗುತ್ತೇನೆ. ಈ ಇಪ್ಪತ್ತು ಸಾವಿರ ರೂಪಾಯಿಗಳ ನಷ್ಟವನ್ನು ನಾನು ಮೋಹಿನಿಯ ಮೇಲೆ ಹೊರಿಸಿ ಬಿಡುತ್ತೇನೆ; ಈವರೆಗೆ ಅವಳು ಬಹು ಸಾಮಾನ್ಯೆಯೆಂದು ಅಲಕ್ಷ್ಯಮಾಡಿದೆ; ನಾನು ಹೇಗೆ ಭಾವಿಸಿದ್ದೆನೋ ಅವಳು ಹಾಗೆ ಇಲ್ಲ; ಅವಳೇ ನನಗೆ ಭಯಂಕರ ಶತ್ರುವಾಗಿದ್ದಾಳೆ."

ಆಗ 'ಹತ್ತಿರದಲ್ಲಿಯೇ' ವನಮಧ್ಯದಲ್ಲಿ ಸ್ತ್ರೀಕಂಠದಿಂದ, ಶತ್ರುವಂತೆ ಶತ್ರು, ಪರಮಶತ್ರು. ಆ ಶತ್ರುವನ್ನು ಹುಡುಕಿಕೊಂಡು ಎಲ್ಲಿಗೂ ಹೋಗಬೇಕಾಗಿಲ್ಲ; ಇಲ್ಲಿಯೇ ಇದ್ದಾಳೆ; ನಿನ್ನನ್ನು ಬಿಟ್ಟು ಅವಳು ಅರೆಗಳಿಗೆಯೂ ಇರಲಾರಳು. ಹಾಗೆ ಇರುತ್ತಿದ್ದ ಪಕ್ಷದಲ್ಲಿ ಅವಳು ನಿನಗೆ ಶತ್ರುವಾದಾಳೇನು? ದೂರದಲ್ಲಿಯೇ ಇದ್ದಿದ್ದಪಕ್ಷದಲ್ಲಿ, ವಿನೋದ, ಆ ಶತ್ರು ನಿನಗೆ ಅಡಿಗಡಿಗೂ ಶತ್ರುತಾಚರಣೆ ಮಾಡುವುದು ಹೇಗೆ ಸಾಧ್ಯ?—ಎಂದು ಯಾರೋ ಸ್ತ್ರೀಕಂಠದಿಂದ ಕೂಗಿದರು.

ಪಾತಕ, ವಿನೋದಲಾಲನೇ ಕೇಶವಚಂದ್ರ. ಪ್ರತ್ಯೇಕ ವ್ಯಕ್ತಿಯಲ್ಲ.

ಕೇಶವಚಂದ್ರನು, ಆ ಕಂಠಸ್ವರದಿಂದ ಅವಳು ಮೋಹಿನಿ ಎಂದು ತಿಳಿದನು; ಆದರೆ ನಾಲ್ಕು ಕಡೆಗಳಲ್ಲಿಯೂ ಭಯಂಕರವಾದ ಕತ್ತಲೆ ಕವಿದಿದೆ; ತೀಕ್ಷ್ಣದೃಷ್ಟಿಯಿಂದ ಅಂಧಕಾರವನ್ನು ಭೇದಿಸಿ ನೋಡಿದರೂ ಅವಳನ್ನು ಎಲ್ಲಿಯೂ ಕಾಣಲಿಲ್ಲ; ಅಷ್ಟು ಹೊತ್ತಿಗೆ ಮಳೆಗೆ ಆರಂಭವಾಗಿತ್ತು. ಆಗ ಬಿರುಗಾಳಿಯೂ ಕೂಡ ಪ್ರಬಲ ವೇಗದಿಂದ ಗರ್ಜಿಸಿಕೊಂಡು ಬೀಸುತ್ತಿದ್ದಿತು. ಆ ಬಿರುಗಾಳಿ ಮಳೆಗಳ ಸಂದಣಿಯಲ್ಲಿ ಕೇಶವಚಂದ್ರನು ಯಾವುದನ್ನೂ ನಿಶ್ಚಯಿಸಲಾರದವನಾದನು. ಮೋಹಿನಿಯು ಎಲ್ಲಿಯೋ ನಿಂತು ಅವನನ್ನು ಪರಿಹಾಸ್ಯ ಮಾಡಿದಳು. ಪುನಃ ತೀಕ್ಷ್ಣದೃಷ್ಟಿಯಿಂದ ನಾಲ್ಕೂ ಕಡೆ ನೋಡಿದನು, ಕಗ್ಗತ್ತಲೆ ದಟ್ಟವಾಗಿ ಕವಿದಿದ್ದುದರಿಂದ ಯಾವುದೂ ಕಾಣಿಸಲಿಲ್ಲ.

"ನನ್ನನ್ನು ನೋಡಲಾರೆಯೋ? ಇದೋ, ಇಲ್ಲಿಯೇ ಇದ್ದೇನೆ" ಎಂದು ಹೇಳುತ್ತಾ ಮೋಹಿನಿಯು ಒಂದು ದಟ್ಟವಾದ ವನದೊಳಗಿಂದ ಹೊರಕ್ಕೆ ಬಂದಳು. ಕೇಶವಚಂದ್ರನು ಕೆರಳಿದ ಹುಲಿಯ ಹಾಗೆ ಪ್ರಕಟವಾಗಿ ಗರ್ಜನೆಮಾಡುತ್ತಾ ಮೋಹಿನಿಯನ್ನು ಹಿಡಿವುದಕ್ಕೆಂದು ಓಡಿದನು. ಅದೇ ಮುಹೂರ್ತದಲ್ಲಿ ಮೋಹಿನಿಯು ಭಯಪಟ್ಟವಳಂತೆ, ಸರ್ಪಸಂಕುಲವಾದ ಆ ವನಮಧ್ಯೆ ಪುನಃ ಪ್ರವೇಶಿಸಿ ಅದೃಶ್ಯಳಾದಳು. ಒಂದು ಕಡೆ ಗಾಢತಮ ಅಂಧಕಾರ; ಇನ್ನೊಂದು ಕಡೆ ಬಿರುಗಾಳಿಯಿಂದೊಡ

ಗೂಬಿನ ಬಿರುಸಾದ ಮಳೆಯ ಹೊಡೆತ. ಅಂತಹ ಕಾಡಿನೊಳಗೆ ಕೇಶವಚಂದ್ರನೂ ಗೋರಾಚಾಂದನೂ ಮೋಹಿನಿಯನ್ನು ಬಹಳವಾಗಿ ಹುಡುಕಿದರು; ಮೋಹಿನಿ ಸಿಕ್ಕಲಿಲ್ಲ.

ಕೇಶವಚಂದ್ರ— ಒಂದು ಕೆಲಸಕ್ಕೆ ಇಬ್ಬರು ನಿಲ್ಲುವುದರಿಂದ ಫಲವಿಲ್ಲ. ಗೋರಾಚಾಂದ, ರೇವತಿಯನ್ನು ಹುಡುಕುವುದಕ್ಕೆ ಹೊರಡು, ಹೇಗಾದರೂ ಮಾಡಿ ರೇವತಿಯನ್ನು ಹಿಡಿದು ತಾ. ನಾನು ಇಲ್ಲಿಯೇ ಇರುತ್ತೇನೆ. ಮೋಹಿನಿಯನ್ನು ಕೊಂದುಹಾಕಿದಲ್ಲದೆ ಮತ್ತೊಂದು ಕೆಲಸಕ್ಕೆ ಕೈಹಾಕುವುದಿಲ್ಲ. ಈ ಪಿಶಾಚಿಯು ನನ್ನ ಆಶೋತ್ತರಗಳನ್ನೆಲ್ಲಾ ವ್ಯರ್ಥಮಾಡಿದ್ದಾಳೆ.

ಗೋರಾಚಾಂದನು ಹೊರಟುಹೋದನು.

---

## ಹನ್ನೊಂದನೆಯ ಪರಿಚ್ಛೇದ

### ವಿಚಾರಣೆ

ಪಾಠಕ, ಪ್ರಕೃತದಲ್ಲಿ ಕೇಶವಚಂದ್ರ, ಗೋರಾಚಾಂದ ಮೋಹಿನೀ ಮೊದಲಾದವರ ವೃತ್ತಾಂತವನ್ನು ಅಷ್ಟಕ್ಕೇ ಬಿಟ್ಟು, ಐದನೆಯ ಪರಿಚ್ಛೇದದಲ್ಲಿ ಯಾವ ದುರ್ಘಟನೆಯ ವಿಚಾರವನ್ನು ಕುರಿತು ಹೇಳಿದೆವೋ ಅದನ್ನೇ ಕುರಿತು ಈ ನಮ್ಮ ಕಥೆಯಲ್ಲಿ ಮುಂದರಿಸಬೇಕೆಂದಿರುವೆವು. ಆ ಕಾಲುವೆಗೆ ಸಮೀಪದ ಕಾಡಿನಲ್ಲಿ ರಕ್ತಕಲೆಯು ಬಟ್ಟೆ, ದೀರ್ಘವಾದ ಚೂರಿ ಮುಂತಾದುವು ಬಿದ್ದಿದ್ದುವಷ್ಟೆ? ಅವುಗಳ ವಿಚಾರವಾಗಿ ಮಾರನೆಯ ದಿನ ಬೆಳಿಗ್ಗೆ ಊರಿನಲ್ಲಿ ಅದೊಂದು ಬಗೆಯ ಹಾಹಾಕಾರ ಪ್ರಾರಂಭವಾಯಿತು. ಅದರ ಸುದ್ದಿಯು ಚಿತ್ರವಿಚಿತ್ರವಾಗಿ ಹೊರಟು ಆ ಗ್ರಾಮವಾಸಿಗಳಾದ ಆಬಾಲ-ವೃದ್ಧ-ವನಿತೆಯರ ಮುಖದಲ್ಲೆಲ್ಲಾ ಸುತ್ತಾಡುವಂತಾಯಿತು.

ಗೋವರ್ಧನನ ಮನೆಯ ಇದಿರಾಗಿರುವ ಆಲದ ಮರದ ತಣ್ಣನೆಯ ನೆರಳಿನಲ್ಲಿ, ಗಂಭೀರ ಮುಖದಿಂದಲೂ ಸ್ಥಿರವಾದ ನೇತ್ರಗಳಿಂದಲೂ

ಇರುವ ವೃದ್ಧರು ಹುಲ್ಲಿನ ಮೇಲೆ ಕುಳಿತು ಹುಕ್ಕೆಯನ್ನು ಕೈಯಲ್ಲಿ ಹಿಡಿದು, ಕೆಮ್ಮುತ್ತಾ ಈ ಮಾತನ್ನೇ ಕುರಿತು ಮಾತನಾಡುತ್ತಿದ್ದಾರೆ. ನದಿಯ ಘಾಟಿಯಲ್ಲಿ, ಕೊಂಕುಳಲ್ಲಿ ಕೊಡವನ್ನು ಹೊತ್ತ, ವಾಮ, ಮಸೀಮಯವಾದ ಮುಸುರೆ ಪಾತ್ರೆಗಳನ್ನು ಕೈಯಲ್ಲಿ ಹಿಡಿದಿರುವ ಶ್ಯಾಮ, ಚೌಳಿನಲ್ಲಿ ಸೀರಿನಲ್ಲಿ ತೊಯಿದ ಬಟ್ಟೆಯ ರಾಶಿಯನ್ನು ಹೆಗಲ ಮೇಲೆ ಹೇರಿಕೊಂಡಿರುವ ಛೇಮ, ಹಾಗೆಯೇ ಎಣ್ಣೆ ಹಚ್ಚಿಕೊಂಡು ಬಂದಿರುವ ಕಾಮಿನಿ, ಸಂಗಡ ಬಂದಿರುವ ಭಾಮಿನಿ ಮೊದಲಾದವರು ಇದೇ ಸುದ್ದಿಯನ್ನೇ ಕುರಿತು ಮಾತನಾಡುತ್ತಾ ಒಂದೊಂದು ರೀತಿಯಾಗಿ ತಂತಮ್ಮ ದೃಢಾಭಿಪ್ರಾಯಗಳನ್ನು ಹೇಳಿಕೊಳ್ಳುತ್ತಿದ್ದರು.

ಬೆಳಗಾಗುವ ವೇಳೆಗೆ ಯೋಗೇಂದ್ರನಾಥನೂ ಅರಿಂದಮನೂ ಕೃತ್ಯ ನಡೆದ ಸ್ಥಳಕ್ಕೆ ಬಂದು ಸೇರಿದರು. ಜತೆಯಲ್ಲಿ ಆರೇಳು ಮಂದಿ ಪೋಲೀಸಿನವರೂ ಇದ್ದರು. ಪಲಾಯಿಮಂಡಲ ಮತ್ತೂ ಅವನ ಸ್ನೇಹಿತರ ಹೇಳಿಕೆಯನ್ನು ಅರಿಂದಮನು ಒಂದೊಂದನ್ನಾಗಿ ಬರೆದು ಕೊಂಡನು. ಅವರು ತಿಳಿದಿದ್ದುದನ್ನೆಲ್ಲಾ ಸರಿಯಾಗಿ ಹೇಳಿದರು. ಸಿರ್ಜಂಥದಿಂದ ಬಾಯಿ ಬಿಡಿಸುವ ಪ್ರಯತ್ನಗಳೊಂದೂ ಅವರ ವಿಷಯದಲ್ಲಿ ಬೇಕಾಗಿಬರಲಿಲ್ಲ. ಯಾವ ಸ್ಥಳದಲ್ಲಿ ಸುಳ್ಳಿನ ಸುಳಿವು ಉಂಟೋ ಅಲ್ಲಿ ತೊಂದರೆಯ ತೊಡಕೂ ಉಂಟು. ಇಂತಹ ತೊಡಕಿಗೆ ಯದುನಾಥ ಗೋಸ್ವಾಮಿಯು ಸ್ವಲ್ಪ ಸಿಕ್ಕಿದನು. ಅರಿಂದಮನು ಆತನನ್ನು ಕುರಿತು —ತಾವು ನಿನ್ನೆ ರಾತ್ರಿ ಅಂತಹ ದುರ್ಯೋಗದಲ್ಲಿ ಎಲ್ಲಿಂದ ಬರುತ್ತಿದ್ದಿರಿ? ಎಂದು ಪ್ರಶ್ನೆಮಾಡಿದನು.

ಯದುನಾಥ—ಗೋಸ್ವಾಮಿಪುರದಲ್ಲಿ ನಮ್ಮ ಭಾವನ ಮನೆ ಇದೆ; ಅಲ್ಲಿ ನನ್ನ ತಂಗಿ ಕಾಯಿಲೆಯಾದ್ದರಿಂದ ಅವಳನ್ನು ನೋಡುವುದಕ್ಕೆ ಹೋಗಿದ್ದೆ. ಅಲ್ಲಿಂದ ಹಿಂದಿರುಗಿ ಬರುತ್ತಲಿದ್ದೆ.

ಅರಿಂದಮ—ಹಿಂದಿರುಗಿ ಬರುವಾಗ ಈ ರಕ್ತಕಲೆಯ ಬಟ್ಟೆಯನ್ನು ನೀವೇ ಮೊದಲು ನೋಡಿದಿರೋ? ಅಥವಾ ಆ ಸಮಯದಲ್ಲಿ ನಿಮ್ಮ ಸಂಗಡ ಯಾರಾದರೂ ಇದ್ದು ಅವರು ಇದನ್ನು ನಿಮಗೆ ತೋರಿಸಿದರೋ?

ಯದುನಾಥ—ಇಲ್ಲ, ನನ್ನ ಸಂಗಡ ಮತ್ತೆ ಯಾರೂ ಇರಲಿಲ್ಲ; ನಾನೇ ಅದನ್ನು ಮೊದಲು ನೋಡಿದೆ.

ಅರಿಂದಮ—ಒಳ್ಳೆಯದು, ಇದನ್ನು ನೋಡುವುದಕ್ಕೆ ಮೊದಲು ಈ ಅರಣ್ಯದೊಳಕ್ಕೆ ತಾವು ಹೋಗಬೇಕಾದ ಆವಶ್ಯಕತೆ ಏನಾದರೂ ಇತ್ತೇ?

ಯದುನಾಥ—ಇಲ್ಲ, ನಾನು ಅದರೊಳಕ್ಕೆ ಏಕೆ ಹೋಗಲಿ?

ಅರಿಂದಮ—ಹಾಗಿದ್ದ ಪಕ್ಷದಲ್ಲಿ, ಆ ಅಂಧಕಾರದಲ್ಲಿ ಅರಣ್ಯದೊಳಗಡೆ ಬಿದ್ದಿದ್ದ ಈ ಬಟ್ಟೆಯನ್ನು ತಾವು ಹೇಗೆ ನೋಡಿದಿರೋ ನನಗೆ ತಿಳಿಯಲಿಲ್ಲ.

ಯದುನಾಥ—ಯಾಕೆ? ಮಿಂಚಿನ ಬೆಳಕಿನಲ್ಲಿ ನಾನು ಅದನ್ನು ನೋಡಿದೆ.

ಅರಿಂದಮ—ಬಟ್ಟೆಯನ್ನು ನೋಡಿದ ನಂತರ, ಮಹಾಯಿನಂದಲ ನನ್ನು ನೋಡುವುದಕ್ಕೆ ಮೊದಲು ತಾವು ಈ ಕಾಡಿನೊಳಕ್ಕೆ ಹೋಗಿದ್ದಿರಾ?

ಯದುನಾಥ—(ಸ್ವಲ್ಪ ಆಲೋಚನೆ)

ಅರಿಂದಮ—ಹೇಳಬಾರದೆ, ಇದರಲ್ಲಿ ಯೋಚಿಸಿ ಹೇಳುವುದೇನಿದೆ?

ಯದುನಾಥ—ಇಲ್ಲ.

ಅರಿಂದಮ—ವಯಸ್ಸು ನಾಲ್ವತ್ತಕ್ಕೆ ಮೀರಿದ್ದರೂ ಕೂಡ ನಿಮ್ಮ ದೃಷ್ಟಿಶಕ್ತಿಯು ಇಷ್ಟು ಪ್ರಬಲವಾಗಿರುವುದನ್ನು ಕಂಡು ಆಶ್ಚರ್ಯ ಪಡುತ್ತೇನೆ. ಹಗಲುಹೊತ್ತು ಪ್ರಯತ್ನಪಟ್ಟು ನೋಡಿದರೂ ಹೊರಗಡೆ ಇರುವವರಿಗೆ ಈ ಬಟ್ಟೆ ಕಾಣುವುದು ಸಾಧ್ಯವಿಲ್ಲವೆಂದು ತೋರುತ್ತದೆ; ಅಂತಹುದನ್ನು ತಾವು ಹೊರಗಣಿಂದಲೇ ರಾತ್ರಿಯ ಮಿಂಚಿನ ಬೆಳಕಿನಲ್ಲಿ ನೋಡಿರುವಿರಿ; ಅದೂ ಅಲ್ಲದೆ ಬಟ್ಟೆಯು ರಕ್ತಕಲೆಯುಳ್ಳದೆಂಬುದನ್ನೂ ತಾವು ಹೊರಗಣಿಂದಲೇ ನಿರ್ಧರಿಸುವ ಶಕ್ತಿ ತಮಗಿದೆ.

ಏನು ಗೋಸ್ವಾಮಿ ಮಹಾಶಯರೆ, ಇವೆಲ್ಲವೂ ಕೊಂಚ ಅಸಂಭವವೆಂದು ತೋರುವುದಿಲ್ಲವೆ ?

ಯದುನಾಥ—ನಾನು ನಿಮ್ಮಲ್ಲಿ ಸುಳ್ಳು ಹೇಳುತ್ತಿರುವೆನೆಂದು ತಾವು ತಿಳಿದಿರೊ ಹೇಗೆ?

ಅರಿಂದಮ—ಹಾಗೇಕೆ ತಿಳಿಯಲಿ! ಆದರೆ ತಾವು ನಿಶ್ಚಯವನ್ನು ಹೇಳುತ್ತಿದ್ದೀರೆಂದು ಮಾತ್ರ ನಂಬಲಾರೆ. ಗೋಸ್ವಾಮಿ ಮಹಾಶಯರೇ, ಕೇಳಿ. ನೀವು ಹೇಳಿದ್ದನ್ನೆಲ್ಲಾ ನಂಬುವುದಕ್ಕೆ ಪಲಾಯಿಮುಂಡಲನಹಾಗೆ ನಾನು ಕೂಡ ಒಬ್ಬ ಸರಳ ವಿಶ್ವಾಸಿಯೆಂದು ತಿಳಿದುಕೊಳ್ಳಬೇಡಿ. ಅಲ್ಲದೆ ನಾವುಗಳು ಕಣ್ಣುಮುಚ್ಚಿ ಬರೀ ವಿಶ್ವಾಸದಿಂದಲೇ ಕೆಲಸ ಮಾಡತಕ್ಕವರಲ್ಲ. ಪ್ರತಿಯೊಬ್ಬರ ಒಂದೊಂದು ಮಾತಿನಮೇಲೂ ಊಹೆ ಕಟ್ಟುತ್ತಿದ್ದರೆ, ಒಂದಲ್ಲ ಒಂದು ದಾರಿ ಸಿಕ್ಕುವುದು. ಆ ಸೂತ್ರವನ್ನು ಅನುಸರಿಸಿಯೇ ನಮ್ಮ ಕೆಲಸವನ್ನು ಸಾಧಿಸಬೇಕಾಗುವುದು. ಜನರು ಪ್ರಕೃತದ ವರ್ತಮಾನವನ್ನು ಕುರಿತು ಎಲ್ಲಿಯವರೆಗೆ ಯಾವ ವಿಷಯವನ್ನೂ ಮರೆಮಾಚದೆ ನಿಷ್ಕಪಟಿಗಳಾಗಿ ನಮಗೆ ಹೇಳುತ್ತಾ ಬಂದರೋ ಅಲ್ಲಿಯವರೆಗೆ ನಮ್ಮ ಕಾರ್ಯಸಾಧನೆಯ ಮಾರ್ಗವು ನಮಗೆ ತಿಳಿಯುವುದೇ ಇಲ್ಲ. ಈಗೀಗ ಸ್ವಲ್ಪ ಸುಳ್ಳಿನ ಸುಳಿವನ್ನು ಕಂಡುದರಿಂದ ತುಂಬಾ ಭರವಸೆಯುಳ್ಳವನಾಗಿದ್ದೇನೆ; ತಾವು ಹೇಳಿದ ಒಂದೆರಡು ಮಾತು ಕೇಳಿದ್ದರಿಂದ ನಾನು ನಿಮ್ಮ ಸಹಾಯದಿಂದಲೇ ಬೇಗ ಕೃತಕಾರ್ಯನಾಗಬಹುದೆಂದು ನನಗೆ ತುಂಬ ಭರವಸೆಯುಂಟಾಗಿದೆ. ತಾವು ಈ ಕೊಲೆಯ ರಹಸ್ಯದಲ್ಲಿ ಒಂದಲ್ಲ ಒಂದು ಬಗೆಯಲ್ಲಿ ಸೇರಿರುವಿರೆಂಬುವುದು ನಿಮ್ಮ ಮಾತುಗಳಿಂದ ತೋರುತ್ತಲಿದೆ. ಆಗಲಿ, ಹೇಗಾಗುವುದೋ ನೋಡೋಣ.''

ಯದುನಾಥ—(ಕೋಪದಿಂದ) ಆಗಲಿ, ನಾನೇ ಕೊಲೆ ಮಾಡಿದ್ದೇನೆ, ನನ್ನನ್ನೇ ಶಿಕ್ಷೆಗೆ ಗುರಿಮಾಡಿ. ನಿಮ್ಮಲ್ಲಿ ಏಳು ಪಾಲು ಅಧರ್ಮವಿಲ್ಲದಿದ್ದರೆ ಯಾರೂ ನಿಮ್ಮ ಅತ್ಯಾಚಾರಕ್ಕೆ ಸಿಕ್ಕಲಾರರು, ನೀವು ಠಾಣೆಯ ಪೋಲೀಸಿನವರು; ಏನಬೇಕಾದರೂ ಮಾಡಬಲ್ಲಿರಿ.

ಅರಿಂದಮ—(ಮಂದಹಾಸದಿಂದ) ಆಹಾ! ತಾವು ಏಕೆ ಕೋಪಿಸಿ ಕೊಳ್ಳಬೇಕು? ತಾವು ಈಗ ಸ್ವಚ್ಛಂದವಾಗಿ ಸ್ವಸ್ಥಾನಕ್ಕೆ ಪ್ರಸ್ಥಾನ ಮಾಡಬಹುದು. ತಮ್ಮನ್ನು ನಾವು ಇನ್ನೇನೂ ಕೇಳತಕ್ಕದ್ದಿಲ್ಲ.

ಯದುನಾಥಗೋಸ್ವಾಮಿಯು ಮೂಟೆಯನ್ನು ಗಂಟುಹಾಕಿ ಕೊಂಡು ಅಲ್ಲಿಂದ ಹೊರಟುಹೋದನು. ಅವನು ಮರೆಯಾಗುವ ವರೆಗೂ ಅರಿಂದಮನು ಅವನನ್ನು ಸ್ಥಿರದೃಷ್ಟಿಯಿಂದ ನೋಡುತ್ತಲೇ ಇದ್ದನು.

---

## ಹನ್ನೆರಡನೆಯ ಪರಿಚ್ಛೇದ

### ಪದಚಿಹ್ನೆ

ಯೋಗೇಂದ್ರನಾಥನು ಅರಿಂದಮನನ್ನು ಕುರಿತು, — "ಈ ಕೊಲೆಯ ಸಂಬಂಧದಲ್ಲಿ ಯದುನಾಥಗೋಸ್ವಾಮಿಯ ಮೇಲೆ ನಿಮಗೆ ಸಂದೇಹವೆ?

ಅರಿಂದಮನು,—ಯೋಗೇಂದ್ರಬಾಬೂ, ಕೊಲೆಯೆಲ್ಲಿ ಬಂತು? ಆ ಬಾಲಿಕೆಯನ್ನು ಕೊಂದುಹಾಕಿರುವರೆಂದು ನೀವು ತಿಳಿದಿದ್ದೀರೇನು?

ಯೋಗೇಂದ್ರ—ಈ ರಕ್ತದ ಗುರ್ತುಗಳ್ಳ ಬಟ್ಟೆ ಮತ್ತೂ ಚೂರಿಗ ಳನ್ನು ನೋಡಿದರೆ ಕೊಲೆಯಲ್ಲದೆ ಮತ್ತೇನಾಗಿರಬಹುದು? ಮುಖ್ಯ ವಾಗಿ, ದಸ್ಯುವೊಬ್ಬನು ಚೂರಿಯನ್ನು ಹಿಡಿದು ಆ ಬಾಲಿಕೆಯನ್ನು ಹಿಂದಟ್ಟಿ ಬಂದನೆಂದು ಕೇಳಿದೆವಷ್ಟೆ. ತಾವು ಏನು ಹೇಳುವಿರಿ?

ಅರಿಂದಮ—ಆ ಬಾಲಿಕೆ ಮೃತಳಾಗಿಲ್ಲ, ಎಲ್ಲಿಗೂ ಹೋಗಿಯೂ ಇಲ್ಲ. ಈ ಊರಲ್ಲಿಯೇ ಇದ್ದಾಳೆ. ಇಷ್ಟುಮಾತ್ರ ನನ್ನ ಕ್ಷುದ್ರ ಬುದ್ಧಿಗೆ ತೋರಿದಂತೆ ಹೇಳುತ್ತಿದ್ದೇನೆ.

ಯೋಗೇಂದ್ರ—ಆ ಬಾಲಿಕೆಯು "ಕೊಲೆ ಮಾಡಿದರು" ಎಂದು ಬಾರಿ ಬಾರಿಗೂ ಆರ್ತನಾದ ಮಾಡಿದ್ದನ್ನು ಮಲಾಯಿಮಂಡಲನು ಕೇಳಿದ ನಷ್ಟೆ. ಅದೇನು ಅವನ ಸ್ವಪ್ನವಾಗಿರಬಹುದೆ?

ಅರಿಂದಮ—ಸ್ವಪ್ನವಲ್ಲ, ಅದೇ ಕಾರಣದಿಂದ ನನ್ನ ಮನಸ್ಸಿನಲ್ಲಿಯೂ ಸ್ವಲ್ಪ ಶಂಕೆಯುಂಟಾಗಿದ್ದಿತು. ಆದರೆ, ಇಲ್ಲಿಗೆ ಬಂದು ಏನು ಕೇಳಿದೆನೋ, ಮತ್ತೆ ಯಾವುದನ್ನು ನೋಡಿದೆನೋ ಅವುಗಳಿಂದ ಬಾಲಿಕೆಯು ಇನ್ನೂ ಮೃತಳಾಗಿಲ್ಲ ಎಂಬುವುದು ಚೆನ್ನಾಗಿ ವ್ಯಕ್ತವಾಗುತ್ತಿದೆ.

ಯೋಗೇಂದ್ರ—ಆ ಹುಡುಗಿ ಬದುಕಿರುವಳೆಂಬುದಕ್ಕೆ ನಿಮಗೆ ದೊರೆತ ಪ್ರಮಾಣವೇನು?

ಅರಿಂದಮ—ನನಗೆ ದೊರೆತಿರುವ ನಾಲ್ಕಾರು ಪ್ರಮಾಣಗಳಿಂದ ಬಹುದೂರ ಭರವಸೆಯುಳ್ಳವನಾಗಿದ್ದೇನೆ. ಮೊದಲನೆಯದು, ಈ ಅರಣ್ಯದ ಒಳಗೂ ಹೊರಗೂ ಕೆಸರಿನಲ್ಲಿ ಕಾಣುವ ಹೆಜ್ಜೆಯ ಗುರ್ತುಗಳಲ್ಲಿ ಒಂದಾದರೂ ಆ ಹುಡುಗಿಯ ಹೆಜ್ಜೆಯ ಗುರ್ತೆಂದು ತೋರುವುದಿಲ್ಲ. ಎಲ್ಲವೂ ಉದ್ದವಾಗಿಯೂ ಅಗಲವಾಗಿಯೂ ಇರುತ್ತಿವೆ.

ಯೋಗೇಂದ್ರ—ಹಾಗಿದ್ದರೂ ಇರಬಹುದು, ಆದರೆ ಕೊಲೆಮಾಡಿದವನು ಮತ್ತೆಲ್ಲಿಯೋ ಆ ಬಾಲಿಕೆಯನ್ನು ಕೊಂದು ರಕ್ತದ ಕಲೆಯುಳ್ಳ ಬಟ್ಟೆಯನ್ನೂ ಚೂರಿಯನ್ನೂ ಈ ಅಡವಿಯಲ್ಲಿ ಮರೆಮಾಡಿ ಹೋಗಿರಬಹುದು.

ಅರಿಂದಮ—ಎರಡನೆಯದಾಗಿ, ಕೊಲೆಪಾತಕಿಯ ಯಾವುದೊಂದು ಚಿಹ್ನೆಯೂ ಕಾಣಬರುವುದಿಲ್ಲ; ಈ ಅರಣ್ಯದಲ್ಲಿ ಕೇವಲ ನಾಲ್ಕು ಜನರ ಪದಚಿಹ್ನೆಗಳು ಕಾಣುತ್ತಿವೆ; ನಾಲ್ಕು ಮಂದಿಯಲ್ಲಿ ಒಬ್ಬನು ವಲಾಯಿ ಮಂಡಲ, ಒಬ್ಬನು ಸಾಧುಚರಣ, ಒಬ್ಬನು ಹರೇಕೃಷ್ಣ, ಮತ್ತೊಬ್ಬನು ನಮ್ಮ ಗೋಸ್ವಾಮಿ ಮಹಾಶಯ. ಈ ನಾಲ್ಕು ಮಂದಿಯೇ ಅರಣ್ಯದೊಳಕ್ಕೆ ಪ್ರವೇಶಮಾಡಿದ್ದವರು—ಎಂದು ಗೊತ್ತಾಗುತ್ತದೆ; ನಾಲ್ಕು ಮಂದಿಯ ಕಾಲಿನ ಗುರ್ತು ಕಾಣಿಸುತ್ತಾ ಇದೆ; ಈ ನಾಲ್ವರ ಹೊರತು ಈ ಅರಣ್ಯದೊಳಕ್ಕೆ ಯಾರೂ ಬಂದಿಲ್ಲ; ಬಂದಿದ್ದ ಪಕ್ಷದಲ್ಲಿ ಈ ನಾಲ್ಕು ಚಿಹ್ನೆಗಳ ಜತೆಗೆ, ಒಂದಲ್ಲ ಒಂದುಕಡೆ ಮತ್ತೊಂದು ಹೆಜ್ಜೆಯ ಗುರ್ತೂ ಕಾಣಿಸುತ್ತಲೇ ಇದ್ದಿತು. ಒಂದುವೇಳೆ, ಬಾಲಿಕೆಯು

ನಿಜವಾಗಿಯೂ ಕೊಲೆಯಾಗಿರುವುದಾದರೆ ಈ ನಾಲ್ವರಲ್ಲಿಯೇ ಒಬ್ಬನು ಆ ಬಾಲಿಕೆಯನ್ನು ಕೊಂದವನಾಗಿರಬೇಕು.

ಹೀಗೆ ಹೇಳುತ್ತಾ ಅರಿಂದಮನು ಎದ್ದನು; ಹೇಳಿಕೆ ಕೊಡುವುದ ಕ್ಕೋಸ್ಕರ ಬಂದಿದ್ದ ಪಳಾಯಿಮಂಡಲ, ಸಾಧುಚರಣ, ಹರೇಕೃಷ್ಣ ಮತ್ತೂ ಯದುನಾಥಗೋಸ್ವಾಮಿ ಇವರುಗಳೆಲ್ಲರ ಹಜ್ಜೆಯ ಗುರ್ತು ಗಳು ಕೆಸರಿನಲ್ಲಿರುವುದನ್ನು ಆತನು ನೋಡಿದ್ದನಷ್ಟೆ; ಅವುಗಳೊಡನೆ ಅರಣ್ಯದೊಳಗಡೆ ಇರುವ ಪದಚಿಹ್ನಗಳನ್ನು ಒಂದೊಂದನ್ನಾಗಿ ಅಳತೆಗೆ ಸರಿನೋಡಿ ಯೋಗೇಂದ್ರನಾಥನಿಗೆ ತೋರಿಸಿದನು. ಅಳತೆಯಲ್ಲಿ ಅವೆಲ್ಲವೂ ಸರಿಹೋದುವು. ಯಾವ ಯಾವುದು ಯಾರ ಯಾರ ಕಾಲಿನ ಗುರ್ತೆಂಬುದನ್ನೂ ಹೇಳಿಬಿಟ್ಟನು. ಯೋಗೇಂದ್ರನು ವಿಸ್ಮಯ ವಿಸ್ಫಾರಿತ ನೇತ್ರನಾಗಿ, ಮಾತನಾಡುವುದಕ್ಕೂ ತೋರದೆ, ಬಹಳ ಹೊತ್ತು ಅರಿಂದಮನ ಮುಖವನ್ನೇ ನೋಡುತ್ತಿದ್ದನು.

ಅರಿಂದಮ—ಇನ್ನೂ ಒಂದು ರಹಸ್ಯವಿದೆ; ಈ ಬಟ್ಟೆಗೆ ರಕ್ತ ತಗಲಿರುವ ರೀತಿಯನ್ನು ನೋಡಿದರೆ ಕೊಲೆಯಾಗಿರುವುದೆಂದು ಹೇಳು ವುದಕ್ಕೆ ಯಾವ ಪ್ರಮಾಣವೂ ಸಿಗುವ ಹಾಗಿಲ್ಲ. ನನಗೆ ತೋರು ವುದೇನೆಂದರೆ, ಯಾರೋ ಬಟ್ಟೆಗೆ ರಕ್ತವನ್ನು ಸವರಿರಬೇಕು. ಮತ್ತೂ ಈ ಚೂರಿಯಿಂದ ಅಥವಾ ಈ ಬಗೆಯ ಯಾವ ಅಸ್ತ್ರದಿಂದಲಾಗಲೀ ಆ ಬಾಲಿಕೆಯ ಕೊಲೆ ನಡೆದಿರುವ ಪಕ್ಷಕ್ಕೆ ಈ ಬಟ್ಟೆಯ ಯಾವುದಾದ ರೊಂದು ಭಾಗದಲ್ಲಿ ಸಂಪೂರ್ಣವಾಗಿ ರಕ್ತವು ತುಂಬಿರುತ್ತಿತ್ತು; ಹೀಗ ಇಲ್ಲಿ ಕೊಂಚ, ಅಲ್ಲಿ ಕೊಂಚವಾಗಿ ನಾಲ್ಕು ಕಡೆಯಲ್ಲಿಯೂ ರಕ್ತವಾಗು ವುದಕ್ಕೇನು ಕಾರಣ? ಕೊಲೆಮಾಡಿದವನ ಬಟ್ಟೆಗೆ ಈ ರೀತಿಯಾಗಿ ರಕ್ತ ತಗಲಿತೆಂದರೆ ಅಸಂಭವವೇನೂ ಅಲ್ಲ. ಮೇಲಾಗಿ ಕೊಲೆಮಾಡಿದ ನಂತರ ಮೃತದೇಹದಿಂದ ಬಟ್ಟೆಯನ್ನು ಬಿಚ್ಚಿ ತೆಗೆಯುವುದಕ್ಕೂ ಕಾರಣ ತೋರುವುದಿಲ್ಲ. ಹತ್ಯಾಕಾರಿಯು ಮೃತದೇಹದೊಡನೆ ಈ ಬಟ್ಟೆಯನ್ನು ಹೊರುವುದು ಕಷ್ಟಕರವೆಂದು ಭಾವಿಸಿದನೆಂದು ಹೇಳುವುದಕ್ಕೆ ಈ ಬಟ್ಟೆ ಅಷ್ಟು ಭಾರವಾದ ವಸ್ತುವೂ ಅಲ್ಲ.

ಯೋಗೇಂದ್ರ—(ಮುಗ್ಧಚಿತ್ತನಾಗಿ) ತಾವು ಈ ಸಾಮಾನ್ಯ ವಿಷಯಗಳಿಂದ ಇಷ್ಟುದೂರ ನಿರ್ಧರಮಾಡಿರುವಿರಲ್ಲ! ಇದೀಗ ಆಶ್ಚರ್ಯ; ನಾನು ಇವುಗಳೆಲ್ಲದರ ಬಿಂದು-ವಿಸರ್ಗಗಳನ್ನೂ ಗಮನಿಸಲಿಲ್ಲ.

ಅರಿಂದಮ—ಇದು ತಾನೇ ವಿನು, ಅನೇಕ ಸಂದರ್ಭಗಳಲ್ಲಿ ಸಾಮಾನ್ಯವಾದೊಂದು ತಲೆಗೂದಲಿನ ಮೇಲೆ ಭರವಸೆಯಿಟ್ಟು ನಾವು ಕೆಲಸ ಮಾಡಬೇಕಾಗುತ್ತದೆ. ಸಂದೇಹ ಪಡುವುದಕ್ಕೆ ಸ್ವಲ್ಪ ಅವಕಾಶ ಸಿಕ್ಕಿದರೂ ಸಾಕು, ಅದನ್ನೇ ಹಿಡಿದು ನಾವು ಸಾವಿರ ಬಾರಿ ಅಳೆದೂ ಸುರಿದೂ ಶೋಧನೆಮಾಡಿ ನೋಡಬೇಕಾಗುವುದು.

ಯೋಗೇಂದ್ರ—ಕೊಲೆಯೇ ಆಗದಿರುವ ಸಂದರ್ಭದಲ್ಲಿ, ಬಾಲಿಕೆಯು ಬದುಕಿರುವುದಾದರೆ, ಯದುನಾಥಗೋಸ್ವಾಮಿಯ ಮೇಲೆ ತಾವು ನಿರರ್ಥಕವಾಗಿ ಸಂದೇಹಪಟ್ಟುದೇಕೆ?

ಅರಿಂದಮ—ಕೊಲೆಯಾಗಿಲ್ಲ ಎಂಬ ಕಾರಣದಿಂದ ಯಾರಮೇಲೂ ಸಂದೇಹಿಸಬಾರದೆಂಬುದು ಎಂತಹ ಮಾತು? ಗೋಸ್ವಾಮಿಯು ಕೊಲೆ ಮಾಡಿರುವನೆಂದು ನಾನು ಊಹಿಸಿಲ್ಲ. ಗೋಸ್ವಾಮಿ ಈ ರಹಸ್ಯದಲ್ಲಿ ಬಂದಿಲ್ಲದಿದ್ದರೆ ಒಂದು ಅಂಶವನ್ನಾದರೂ ತಿಳಿದವನಾಗಿಯೇ ಇರಬೇಕೆಂದು ಊಹಿಸುತ್ತೇನೆ; ಇಲ್ಲವಾದರೆ ಅವನು ಯಾವ ಉದ್ದೇಶದಿಂದ ಸುಳ್ಳು ಹೇಳಿರಬೇಕು. ಆವಶ್ಯಕವಾಗಿಯೂ ಸುಳ್ಳುಹೇಳಿ ಯಾವುದೋ ವಿಷಯವನ್ನು ನಮ್ಮ ದೃಷ್ಟಿಗೆ ಬೀಳದಂತೆ ಮಾಡಬೇಕೆಂದೇ ಅವನು ಪ್ರಯತ್ನಿಸಿರಬೇಕು. ಗೋಸ್ವಾಮಿ ಮಹಾಶಯನು ತಾನು ಈ ಅರಣ್ಯದೊಳಕ್ಕೆ ಪ್ರವೇಶಮಾಡಿದ್ದು ಒಂದೇಬಾರಿ ಎಂದೂ, ಪುನಃ ಪ್ರವೇಶ ಮಾಡಲೇ ಇಲ್ಲವೆಂದೂ ಹೇಳಿದನಲ್ಲವೆ? ಆದರೆ ಆತನು ಈ ಅರಣ್ಯದೊಳಕ್ಕೆ ಎರಡುಬಾರಿ ಹೋಗಿದ್ದನೆಂಬುದಕ್ಕೆ ಪ್ರಮಾಣವು ಇಲ್ಲಿದೆ, ನೋಡಿ; ಗೋಸ್ವಾಮಿಯ ಕಾಲಿನ ಗುರ್ತು ಒಂದೇ ಕಡೆಗೆ ಎರಡುಬಾರಿ ಬಿದ್ದಿದೆ. ಇಲ್ಲಿ ನೋಡಿ, ಇದು ಗೋಸ್ವಾಮಿ ಮಹಾಶಯನ ಬಲಗಾಲ ಹೆಜ್ಜೆಯ ಗುರುತು. ಇದಕ್ಕೆ ಒಂದು ಅಂಗುಲ ದೂರದಲ್ಲಿ, ಸ್ವಲ್ಪ

ಹೆಜ್ಜೆ ಕಡಿಮೆ ಪಕ್ಕದಲ್ಲಿಯೇ ಇದೇ ರೀತಿಯಾಗಿ, ಇದೇ ಕಡೆಗೆ ತಿರುಗಿರುವ ಮತ್ತೂ ಒಂದು ಬಲಗಾಲ ಹೆಜ್ಜೆಯ ಗುರುತಿದೆ. ಈ ಚಿಹ್ನೆಗಳು ಬೇರೆ ಬೇರೆ ಕಡೆಗೆ ತಿರುಗಿಬಿದ್ದಿದ್ದ ಪಕ್ಷದಲ್ಲಿ ಈ ಬಲಗಾಲು ಗುರುತು ಹಿಂದಿರುಗುವಾಗ ಬಿದ್ದುದೆಂದು ಊಹಿಸಬಹುದಾಗಿದ್ದಿತು.

ಯೋಗೇಂದ್ರ—ಅದು ಹೀಗಿದ್ದರೂ ಇರಬಹುದು, ಇದರೊಳಕ್ಕೆ ಹೋಗುವಾಗ ಆತನು ಈ ಸ್ಥಳದಲ್ಲಿ ಸ್ವಲ್ಪಹೊತ್ತು ನಿಂತಿರಬಹುದು. ಯಾವುದೋ ಕಾರಣದಿಂದ ಪುನಃ ಸ್ವಲ್ಪ ಪಕ್ಕಕ್ಕೆ ಸರಿದು ನಿಂತಿರಬಹುದು. ಇದರಿಂದ ಒಂದೇ ಕಾಲಿನ ಗುರ್ತು ಒಂದೇ ಮುಖವಾಗಿ ಹೀಗೆ ಅಕ್ಕಪಕ್ಕದಲ್ಲಿ ಬೀಳುವುದೇನೂ ವಿಚಿತ್ರವಲ್ಲ.

ಅರಿಂದಮ—ಒಂದು ಕಡೆಯಲ್ಲಿ ಮಾತ್ರ ಹೀಗೆ ಬಿದ್ದಿದ್ದ ಪಕ್ಷದಲ್ಲಿ ನಿಮ್ಮ ಯುಕ್ತಿಯು ನ್ಯಾಯವಾಗಿಯೇ ಇರುತ್ತಿದ್ದಿತು. ನೋಡಿರಿ, ಒಂದೊಂದು ಕಡೆಯೂ ಈ ರೀತಿಯಾದ ಚಿಹ್ನೆಗಳೇ ಇವೆ; ಕೆಲವು ಕಡೆಗಳಲ್ಲಿ ಸ್ವಲ್ಪ ದೂರದಲ್ಲಿ ಬಿದ್ದಿದೆ. ಹಿಂದಿರುಗುವಾಗ ಮಾತ್ರ ಪದಚಿಹ್ನವು ಹೀಗೆ, ಒಂದೇ ಕಾಲಿನ ಗುರ್ತು ಒಂದರ ಪಕ್ಕದಲ್ಲೊಂದರ ಹಾಗೆ ಒಂದೇ ಕಡೆಗೆ ತಿರುಗಿಬಿದ್ದಿರುವಂತೆ ಕಾಣುವುದಿಲ್ಲ. ಇದಕ್ಕೆ ಕಾರಣವಿದೆ, ಆತನು ಮೊದಲನೆಯ ಸಲ ಈ ಮಾರ್ಗವಾಗಿ ಬಂದವನು ಇದೇ ದಾರಿಯಿಂದಲೇ ಹಿಂದಿರುಗಿ ಹೋಗಿಲ್ಲ. ಇಲ್ಲಿ ನೋಡಿ, ಉತ್ತರ ಕಡೆ ಎಲ್ಲರ ಪದಚಿಹ್ನಗಳು ಬೇರೆಬೇರೆ ಕಡೆಗೆ ಹೋಗಿವೆ. ಇವೂಕೂಡ ಗೋಸ್ವಾಮಿ ಮಹಾಶಯನದು. ಆತನು ಒಂದು ಸಲ ಈ ಉತ್ತರ ಕಡೆಯಲ್ಲಿ ಕಾಡಿನಿಂದ ನಡೆದುಹೋಗಿದ್ದಾನೆ. ನಾನು ಈ ಗುರುತುಗಳನ್ನು ನೋಡಿ ಗುರ್ತಿಸಿಯೂ ಇದ್ದೇನೆ; ಇವು ಗೋಸ್ವಾಮಿ ಮಹಾಶಯನವು; ಆದರೆ ನಿಮಗೆ ಅಳತೆಮಾಡಿ ತೋರಿಸದಿದ್ದರೆ ನೀವು ಗುರ್ತಿಸಲಾರಿರಿ.

ಹೀಗೆಂದು ಹೇಳಿ ಅರಿಂದಮನು ಯೋಗೇಂದ್ರನಾಥನಿಗೆ ಆ ಪದಚಿಹ್ನೆಗಳನ್ನು ಅಳತೆಮಾಡಿ ತೋರಿಸಿದನು. ಅನಂತರ ಹೇಳಿದನು. "ಗೋಸ್ವಾಮಿ ಮಹಾಶಯನು ಈ ಸ್ಥಳಕ್ಕೆ ಎರಡಾವರ್ತಿ ಬಂದಿದ್ದ

ನೆಂಬುದರ ಪ್ರಮಾಣವನ್ನು ನೀವು ಈಗ ಸ್ಪಷ್ಟವಾಗಿ ತಿಳಿದರಷ್ಟೆ; ಆದರೆ ಗೋಸ್ವಾಮಿ ಮಹಾಶಯನು ತಾನು ಇಲ್ಲಿಗೆ ಪ್ರವೇಶಮಾಡಿದ್ದು ಒಂದೇಬಾರಿ ಎಂದು ಸುಳ್ಳು ಹೇಳಿರುವುದರಲ್ಲಿ ಯಾವುದೋ ರಹಸ್ಯವಾದ ಅಭಿಪ್ರಾಯವು ಇದ್ದೇ ಇರಬೇಕು. ಇದೂ ಅಲ್ಲದೆ ಈ ಚೂರಿಯ ವಿಚಾರವಾಗಿಯೂ ಒಂದೆರಡು ಮಾತು ಹೇಳುವುದಿದೆ; ಚೂರಿಯು ಉದ್ದವಾಗಿಯೂ ಅಗಲವಾಗಿಯೂ ಇರುವುದರಿಂದ ಇದು ಕೊಲೆಗಾರನ ಚೂರಿಯಾಗಿರುವುದೇನೋ ನಿಶ್ಚಯ. ಆದರೇನು? ಚೂರಿಯಿಂದ ಬಾಲಿಕೆಗೆ ಏನೋ ವಿಪತ್ತು ಉಂಟಾಗಿದೆಯೆಂದು ತೋರುವ ಹಾಗೆ, ಏನೂ ಇರುವುದಿಲ್ಲ. ಹಾಗಿದ್ದ ಪಕ್ಷದಲ್ಲಿ ಈ ಚೂರಿಯ ಒಂದು ಕಡೆಯಲ್ಲದಿದ್ದರೆ ಇನ್ನೊಂದು ಕಡೆಯಲ್ಲಿಯಾದರೂ ರಕ್ತದ ಕಲೆಯನ್ನು ಸ್ವಲ್ಪವಾದರೂ ಕಾಣಬೇಕಾಗಿತ್ತು.

ಯೋಗೇಂದ್ರ—ಆ ರೀತಿ ಮಳೆ ಸುರಿಯಿತು, ಅದರಿಂದ ರಕ್ತದ ಕಲೆ ತೊಳೆದುಹೋಗಿರಬಹುದಲ್ಲ?

ಅರಿಂದಮ—ಚೂರಿಯ ಯಾವ ಭಾಗವು ಮೇಲಿನ ಭಾಗವಾಗಿತ್ತೋ ಆ ಭಾಗದ ರಕ್ತ ಕಲೆಯು ಮಳೆಯಿಂದ ತೊಳೆದು ಹೋಗಿರಬಹುದು; ಆದರೆ ತಳಭಾಗದಲ್ಲಿ ಕೊಂಚವಾದರೂ ರಕ್ತದ ಕಲೆ ಕಂಡುಬರುವುದಿಲ್ಲ. ಕೈ ಹಿಡಿಯ ಗೂಡಿನಲ್ಲಿಯಾದರೂ ಅಲ್ಪಸ್ವಲ್ಪ ರಕ್ತವಿದ್ದಿರಬೇಕು; ಒಟ್ಟಿನಲ್ಲಿ, ಅಂತಹ ಭಾರಿ ಮಳೆಯಾಯಿತೆಂದೂ ತೋರುವುದಿಲ್ಲ. ಅಂತಹ ಮಳೆಯಾಗಿದ್ದ ಪಕ್ಷದಲ್ಲಿ ಈ ಪದಚಿಹ್ನೆಗಳೆಲ್ಲ ಇಷ್ಟು ಸ್ಪಷ್ಟವಾಗಿ ಕಾಣುತ್ತಿರಲಿಲ್ಲ. ಅಲ್ಲದೆ ಬಟ್ಟೆಗೆ ತಗಲಿರುವ ರಕ್ತದ ಕಲೆಯೂ ಇಷ್ಟು ಗಾಢತರವಾಗಿರುತ್ತಿರಲಿಲ್ಲ. ಮಳೆಯ ನೀರಲ್ಲಿ ಹೆಚ್ಚಾಗಿ ತೊಯಿದುಹೋಗಿ ಬಹುಮಟ್ಟಿಗೆ ವಿವರ್ಣವಾಗಿ ಕಾಣಿಸುತ್ತಿದ್ದಿತು. ಇನ್ನು ಈ ಹೆರಳ ಸೂಜಿಯ ವಿಚಾರವಾಗಿ ಒಂದೆರಡು ಮಾತು ಹೇಳುವುದಿದೆ. ಈ ಎರಡು ಸೂಜಿಗಳ ದೆಸೆಯಿಂದ ನನ್ನ ಇನ್ನೊಂದು ಕೆಲಸಕ್ಕೆ ತುಂಬ ಸಹಾಯವಾಗುವ ಹಾಗಿದೆ. ಎರಡು ದಿನಗಳ ಹಿಂದೆ ಠಾಣೆಯಲ್ಲಿ, ಪೆಟ್ಟಿಗೆಯೊಳಗೆ ಯಾವ ಬಾಲಿಕೆಯ ಮೃತ

ದೇಹವನ್ನು ನೋಡಿದ್ದೆನೋ ಆ ಬಾಲಿಕೆಯ ಕೊಲೆಗೆ ಈ ದಿನದ ಘಟನೆಯು ಬಹುಮಟ್ಟಿಗೆ ಸಂಬಂಧಿಸಿರುವುದಾಗಿ ಕಾಣಿಸುತ್ತದೆ. ಅಂದು, ಪೆಟ್ಟಿಗೆಯಲ್ಲಿ ಎರಡು ಹೆರಳು ಸೂಜಿಗಳು ಸಿಕ್ಕಿದುವು; ಇಂದು ಇಲ್ಲಿ ಎರಡು ಸೂಜಿಗಳು ಸಿಕ್ಕಿದುವು; ಒಬ್ಬನೇ ಕೆಲಸಗಾರನಿಂದ ತಯಾರಾದುವು, ಒಂದೇ ಅಳತೆ, ಒಂದೇ ಮಾದರಿ.

ಹೀಗೆಂದು ಹೇಳಿ ಹಿಂದೆ ಸಿಕ್ಕಿದ್ದ ಆ ಎರಡು ಹೆರಳು ಸೂಜಿಗಳನ್ನು ಹೊರಕ್ಕೆ ತೆಗೆದು ಮತ್ತೆರಡರ ಜತೆಗೆ ಸೇರಿಸಿ ಯೋಗೇಂದ್ರನಾಥನ ಮುಂದೆ ಹಿಡಿದು,—ಈಗ ಈ ಸೂಜಿಗಳಲ್ಲಿ ಹಿಂದೆ ಸಿಕ್ಕಿದ್ದ ಆ ಎರಡು ಸೂಜಿಗಳನ್ನು ತೋರಿಸಬಲ್ಲಿರಾ?— ಎಂದು ಅರಿಂದಮನು ಪ್ರಶ್ನೆ ಮಾಡಿದನು.

ಯೋಗೇಂದ್ರನಾಥ—ಎಲ್ಲವೂ ಒಂದೇ ಮಾದರಿ. ಹೇಗೆ ಗುರ್ತಿಸಲಿ?

ಅನಂತರ ಅರಿಂದಮನು ತನ್ನ ಕಿಸೆಯ ಪುಸ್ತಕವನ್ನು ತೆಗೆದು ಕಡೆಯ ಹಾಳೆ ತೆರೆದು ಯೋಗೇಂದ್ರನಾಥನ ಕೈಗೆ ಕೊಟ್ಟನು. ಅದರಲ್ಲಿ ⁂ ಈ ಬಗೆಯಾಗಿ ಅಗಸನ ಗುರುತು ಹಾಕಿರುವ ಬಟ್ಟೆಯ ಒಂದು ತುಂಡು ಅಂಟಿಸಿತ್ತು. ಯೋಗೇಂದ್ರನಾಥನು ನೋಡಿ,—ಇದೇನು ಮತ್ತೆ—ಏನೂ ಗೊತ್ತಾಗುವುದಿಲ್ಲವಲ್ಲ. ನಿಮ್ಮ ನಡವಳಿಯೆಲ್ಲವೂ ಅದ್ಭುತವಾದುವೇ—ಎಂದು ಹೇಳಿದನು.

ಅರಿಂದಮ—ಅಂತಹ ವಿಶೇಷವೇನೂ ಇಲ್ಲ. ಆದರೆ ಇದರಿಂದ ಈಗ ತುಂಬ ಅನುಕೂಲವೇ ಆಯಿತೆಂದು ಹೇಳಬೇಕು. ಠಾಣೆಯಲ್ಲಿ ಸಿಕ್ಕಿದ ಆ ಮೃತ ಬಾಲಿಕೆಯ ಬಟ್ಟೆಯಲ್ಲಿ ಅಗಸರ ಗುರುತು ಯಾವುದಿದ್ದಿತ್ತೋ ಅದೇ ಇದು; ಇಂದು ಇಲ್ಲಿಯ ಘಟನೆಯಲ್ಲಿ ಸಿಕ್ಕಿರುವ ಈ ರಕ್ತದ ಕಲೆಯ ಬಟ್ಟೆಯಲ್ಲಿ ಇರುವ ಅಗಸರ ಗುರುತಿಗೂ ಇದಕ್ಕೂ ಏನೂ ವ್ಯತ್ಯಾಸ ಕಾಣುವುದಿಲ್ಲ; ಆದುದರಿಂದಲೇ ಅಂದಿನ ಘಟನೆಗೂ ಇಂದಿನ ಘಟನೆಗೂ ಬಹುವಾಗಿ ಸಂಬಂಧವುಂಟೆಂದು ಹೇಳುತ್ತೇನೆ. ಆ ದಿನ ಆ ಬಾಲಿಕೆಯ ಮೃತದೇಹವನ್ನು ನೋಡಿದಾಗ ಈ ಹೆರಳು ಸೂಜಿ ಮತ್ತೂ ಈ ಅಗಸರ ಗುರ್ತು ಇವುಗಳ ಹೊರತು ಮತ್ತ್ಯಾಕಾರಿಯನ್ನು

ಹಿಡಿವುದಕ್ಕೆ ಯಾವ ಸೂತ್ರವೂ ಸಿಕ್ಕಲಿಲ್ಲ. ಅಂದಿನ ದಿನ ನೀವು ಹೇಳಿದುದನ್ನು ಕೇಳಿದಾಗಲಂತೂ ಬಹು ರಹಸ್ಯಮಯವಾದುದೆಂದು ತೋರಿತು; ಹೇಗಾದರೂ ಆಗಲಿ, ಮುಂದೆ ಕೃತಕಾರ್ಯನಾಗಬಲ್ಲೆನೆಂದು ಈಗ ಭರವಸೆಯಾಯಿತು.

ಯೋಗೇಂದ್ರನಾಥನೊಡನೆ ಅರಿಂದಮನು ಮತ್ತೇನೂ ಮಾತನಾಡಲಿಲ್ಲ. ಯೋಗೇಂದ್ರನಾಥನು ಒಬ್ಬ ಪೋಲೀಸಿನವನ ಮೂಲಕ ಆ ರಕ್ತದ ಕಲೆಯ ಬಟ್ಟೆಯನ್ನೂ ಚೂರಿಯನ್ನೂ ಠಾಣೆಗೆ ತೆಗೆಯಿಸಿಕೊಂಡು ಹೋದನು. ಅರಿಂದಮನು ಮನೆಗೆ ಹಿಂದಿರುಗಿದನು.

---

## ಹದಿಮೂರನೆಯ ಪರಿಚ್ಛೇದ

### ಈ ಸುಂದರಿ ಯಾರು?

ಅದೇ ದಿವಸ, ಮಧ್ಯಾಹ್ನದ ಮೇಲೆ, ಅರಿಂದಮನು ಒಬ್ಬಂಟಿಗನಾಗಿ ಹೊರಟನು. ಯದುನಾಥಗೋಸ್ವಾಮಿಯ ಮನೆಗೆ ಇದಿರಾಗಿಯೇ ಹೋದನು. ಅಲ್ಲಿಗೆ ಹೋಗಿ ಸೇರುವ ಹೊತ್ತಿಗೆ ಹೊತ್ತು ಮುಳುಗುತ್ತ ಬಂದಿತು. ಯದುನಾಥಗೋಸ್ವಾಮಿಯ ಮನೆ ಒಂದಂತಸ್ತಿನದು; ಸಣ್ಣವೂ ದೊಡ್ಡವೂ ಸೇರಿ ಎಲ್ಲ ನಾಲ್ಕೈದು ಕೊಠಡಿಗಳಿವೆ; ಮನೆ ಹಳೆಯದು, ಹೊರಗಡೆ ನಾಲ್ಕು ಕಡೆ ಗೋಡೆಗೆ ಉಪ್ಪುಹಿಡಿದು ಮಣ್ಣು ಉದುರುತ್ತಿದೆ. ಒಂದು ಕಡೆ ಕುಂಬಳ, ಇನ್ನೊಂದು ಕಡೆ ಬೂದುಗುಂಬಳ, ಮತ್ತೊಂದು ಕಡೆ ಸೋರೆ, ಇನ್ನೊಂದು ಕಡೆ ಹೀರೆ ಮೊದಲಾದ ತರಕಾರಿಯ ಬಳ್ಳಿಗಳು ಛಾವಣಿಗೆ ಹಬ್ಬಿ ಮನೆಯ ಛಾವಣಿಯನ್ನೆಲ್ಲಾ ಆವರಿಸಿದ್ದುವು. ಕಡೆಗೆ ಸ್ಥಳವು ಸಾಲದೇ ಹೋದ್ದರಿಂದ ನಾಲ್ಕು ಕಡೆ ಮೇಲ್ಛಾವಣಿಯಿಂದಲೂ ತೂಗಾಡುತ್ತಿದ್ದುವು.

ಇವೆಲ್ಲವನ್ನೂ ನೋಡುತ್ತಿದ್ದ ಹಾಗೆಯೇ ಅರಿಂದಮನ ದೃಷ್ಟಿಯು ತೆರೆದಿದ್ದ ಕಿಟಕಿಯೊಂದರ ಮೇಲೆ ಬಿದ್ದಿತು; ಅವನು ಅತ್ತಕಡೆ ನೋಡಿದನೊ ಇಲ್ಲವೋ ಒಬ್ಬ ಹೆಂಗಸು ಭಯಚಕಿತಳಾಗಿ ಅಲ್ಲಿಂದ ಸರಿದು

ಹೋದಳು; ಇದನ್ನು ಅರಿಂದಮನು ನೋಡಿದನು. ಮಿಂಚಿಗೂ ಸಹ ಅವಳ ವೇಗವು ಇರುವುದಿಲ್ಲವೆಂದು ತೋರುತ್ತದೆ. ಎವೆಯಿಕ್ಕುವುದರೊಳಗಾಗಿ ಏನನ್ನು ನೋಡಿದನೋ ಅಷ್ಟರಿಂದಲೇ ಅರಿಂದಮನು ಆ ಹೆಂಗಸು ವಯಸ್ಸಾದವಳಲ್ಲ, ಬಹು ರೂಪವತಿ, ಬಹು ಸುಂದರವಾದ ಮುಖ; ಆದರೆ ಅದೆಷ್ಟು ಸುಂದರವಾಗಿದ್ದಿತೋ ಅದಕ್ಕೆ ತಕ್ಕಹಾಗೆ ಪ್ರಫುಲ್ಲವಾಗಿಲ್ಲ ಎಂಬಿಷ್ಟನ್ನೂ ತಿಳಿದನು. ಪುನಃ ಅವಳನ್ನು ನೋಡುವ ಸಲುವಾಗಿ ಅರಿಂದಮನು ಇನ್ನೂ ಸ್ವಲ್ಪ ಹೊತ್ತು ಎವೆಯಿಕ್ಕದೆ ಅತ್ತಕಡೆಯೇ ನೋಡುತ್ತ ನಿಂದಿದ್ದನು; ಆದರೆ ಅವಳನ್ನು ಕಾಣಲಿಲ್ಲ. ಇವಳು ಯಾರು? ಯದುನಾಥಗೋಸ್ವಾಮಿಯ ಮಗಳಾಗಿದ್ದರೂ ಇರಬಹುದು; ಆದರೆ, ಯದುನಾಥಗೋಸ್ವಾಮಿಗೆ ಮಕ್ಕಳಿಲ್ಲವೆಂದು ವಲಾಯಿಮಂಡಲನಿಂದ ಕೇಳಿದೆನು. ಹೆಂಡತಿಯೊಬ್ಬಳ ವಿನಾ ಅವನ ಕುಟುಂಬದಲ್ಲಿ ಮತ್ತಾರೂ ಇಲ್ಲವಂತೆ. ಬ್ರಾಹ್ಮಣರಲ್ಲಿ ಅನೇಕರು ತಮ್ಮ ಜೀವಮಾನದ ಚರಮಾವಸ್ಥೆಯಲ್ಲಿರುವಾಗಲೂ ಕೂಡ ಕುಲಗೌರವಗಳ ಬಲದಿಂದ ಮದುವೆಯಾಗುವುದುಂಟು; ಅದೃಷ್ಟಬಲದಿಂದ ಗೋಸ್ವಾಮಿ ಮಹಾಶಯನಿಗೆ ಇನ್ನೂ ಐವತ್ತು ವರುಷವಾಗಿಲ್ಲ. ಆದಕಾರಣ ಈಗ ನೋಡಿದವಳು ಇವನ ಮಗಳಲ್ಲ, ಈ ವೃದ್ಧನ ತರುಣೀ ಭಾರ್ಯೆಯಾಗಿದ್ದರೂ ಇರಬಹುದು—ಎಂದುಕೊಂಡನು.

ಈ ರೀತಿಯಾಗಿ ಅರಿಂದಮನು ಆಲೋಚಿಸುತ್ತಿರುವಾಗ್ಗೆ ತೆರೆದಿದ್ದ ಆ ಕಿಟಕಿಯಲ್ಲಿ ವಯಸ್ಸಾದ ಹೆಂಗಸೊಬ್ಬಳು ಕಾಣಬಂದಳು. ಅವಳು ಕೂಡ ಒಂದು ಸಲ ಅರಿಂದಮನನ್ನು ನೋಡಿ ಕೂಡಲೇ ಅಲ್ಲಿಂದ ಹೊರಟುಹೋದಳು. ಅರಿಂದಮನ ಸಂಶಯವು ಮತ್ತೂ ಹೆಚ್ಚಿತು. ಆಲೋಚಿಸಿದನು; ಇವಳು ಗೋಸ್ವಾಮಿ ಮಹಾಶಯನ ಹೆಂಡತಿಯಾಗಿರಬೇಕು; ಅದರೆ ಇವಳನ್ನು ನೋಡುವುದಕ್ಕೆ ಮೊದಲು ನೋಡಿದೆನಲ್ಲಾ ಆ ಯುವತಿ ಯಾರು? ಗೋಸ್ವಾಮಿ ಮಹಾಶಯನಿಗೂ ಅವಳಿಗೂ ಏನು ಸಂಬಂಧ?

ಆ ಸ್ಥಳದಲ್ಲಿ, ಆ ರೀತಿಯಾಗಿ ಬಹಳ ಹೊತ್ತು ನಿಂತುಕೊಂಡಿರುವುದು ಮರ್ಯಾದಸ್ಥರಿಗೆ ತಕ್ಕ ಕೆಲಸವಲ್ಲವೆಂದು ತಿಳಿದು ಅರಿಂದಮನು

ಅಲ್ಲಿಂದ ಹೊರಟುಬಂದನು. ಏತಕ್ಕೆಂದರೆ ಆ ಭಾಗವು ಯದುನಾಥಗೋಸ್ವಾಮಿಯ ಒಳ ಮನೆಯ ಹಿಂಭಾಗ. ಅರಿಂದಮನು ಆಗ ಗೋಸ್ವಾಮಿ ಮಹಾಶಯನನ್ನು ನೋಡುವ ಉದ್ದೇಶದಿಂದ ಮುಂಭಾಗದ ಮನೆಯ ಬಳಿಗೆ ಬಂದನು. ಆ ಭಾಗದ ಎಲ್ಲ ಕಿಟಕಿಗಳೂ ಬಾಗಿಲೂ ಭದ್ರವಾಗಿ ಮುಚ್ಚಿದ್ದುವು. ಅಲ್ಲಿಗೆ ಬಂದ ಕೂಡಲೇ ಒಳಗೆ ಯಾರೋ ಅಸ್ಫುಟ ಸ್ವರದಿಂದ ಮಾತನಾಡುತ್ತಿರುವುದು ಕೇಳಿಸಿತು; ಆಗ ಆತನು ಮುಚ್ಚಿದ್ದ ಒಂದು ಕಿಟಕಿಯ ಬಳಿಗೆ ಬಂದು ಕಿವಿಗೊಟ್ಟು ಆಲೈಸಿ ಕೇಳುತ್ತಾ ನಿಂತು ಕೊಂಡನು. ಒಂದೆರಡುಮಾತು ಕೇಳಿದವನೇ—ಒಳಗಡೆ ಭಯಂಕರವಾದ ಮತ್ತೊಂದು ಪಿತೂರಿಯಾಗುತ್ತಿದೆ—ಎಂದು ಊಹಿಸಿದನು. ಆಗ ಆತನ ಮನಸ್ಸಿನ ಸಂದೇಹವೆಲ್ಲವೂ ದೂರವಾಯಿತು. ಕಿಟಕಿಯ ಕಿಂಡಿಯಿಂದ ನೋಡಿದನು. ಆ ಕೊಠಡಿಯಲ್ಲಿ ಇಬ್ಬರು ಕುಳಿತಿರು ವರು. ಅವರಲ್ಲಿ ಒಬ್ಬನನ್ನು ಗುರ್ತಿಸಿದನು. ಯದುನಾಥ ಗೋಸ್ವಾಮಿ; ಇನ್ನೊಬ್ಬನು ಇನ್ನೊಂದು ಕಡೆಗೆ ತಿರುಗಿಕೊಂಡು ಕುಳಿತಿದ್ದನು. ಆತನನ್ನು ಗುರ್ತಿಸಲಾಗಲಿಲ್ಲ.

ಸುಮಾರು ಒಂದು ಗಂಟೆ ಕಳೆಯಿತು; ಇನ್ನೂ ಯದುನಾಥ ಗೋಸ್ವಾಮಿಯೊಡನೆ ಆ ಅಪರಿಚಿತ ವ್ಯಕ್ತಿಯ ಅದೇ ರೀತಿಯಾದ, ರಹಸ್ಯಮಯವಾದ ಪರಾಮರ್ಶಗಳು ನಡೆಯುತ್ತಲೇ ಇದ್ದುವು. ಅರಿಂದಮನು ಹೊರಗಡೆ ನಿಂತುಕೊಂಡು ಏಕಾಗ್ರತೆಯಿಂದ ಕೇಳುತ್ತಲೇ ಇದ್ದನು; ಅವರವರ ಆ ಸಂಭಾಷಣೆಯು ಅವನ ಮನಸ್ಸನ್ನು ಕ್ರಮಕ್ರಮ ಹೆಚ್ಚು ಹೆಚ್ಚಾಗಿ ಆಕರ್ಷಿಸುತ್ತಿದ್ದಿತು. ಒಳಗಡೆ ನಡೆಯುತ್ತಿದ್ದ ರಹಸ್ಯ ಮಯವಾದ ಮಾರಾಲೋಚನೆಯು ಮುಗಿಯುತ್ತ ಬಂದಾಗ ಅರಿಂದಮನು ಒಂದಾವರ್ತಿ ಹೊರಗಡೆ ನೋಡಿದನು. ಸಂಧ್ಯಾ ಕಾಲವು ಕಳೆದು ಬಹಳ ಹೊತ್ತಾಗಿ ಹೋಗಿದೆ; ಮತ್ತು ಶುಕ್ಲಾಷ್ಟಮಿಯ ಅರ್ಧಚಂದ್ರನು ಗಗನ ಮಧ್ಯವನ್ನು ಬಿಟ್ಟು ಪಶ್ಚಿಮಕಡೆ ಬಹುದೂರ ನಡೆದು ಹೋಗಿದ್ದಾನೆ. ಆತನಿಗೆ ಸಮೀಪದಲ್ಲಿಯೂ ದೂರದಲ್ಲಿಯೂ ಚಂದ್ರ ಕಿರಣಗಳಿಂದ ಉಜ್ವಲತರವಾಗಿ ಕಾಣುತ್ತಿದ್ದ ಚಂಚಲವಾದ

ಬಿಳಿಯ ಮೋಡಗಳು ನಿರ್ಮಲವಾದ ಆಕಾಶದಲ್ಲಿ ತೇಲಿಕೊಂಡು ಹೋಗುತ್ತಿವೆ.

ಅರಿಂದಮನು ಆ ಕಿಟಕಿಯ ಕಿಂಡಿಯಲ್ಲಿ ನೋಡಿದನು. ಆಗ ಗೋಸ್ವಾಮಿಯು ದೀಪದ ಹತ್ತಿರ ತಲೆ ತಗ್ಗಿಸಿಕೊಂಡು ಒಂದು ಕಾಗದ ಬರೆಯುತ್ತಿದ್ದಾನೆ; ಆ ಅಪರಿಚಿತ ವ್ಯಕ್ತಿಯು ಆತನಿಗೆ ಇದಿರಾಗಿ ನಿಂತುಕೊಂಡಿದ್ದಾನೆ; ದೀಪದ ಬೆಳಕಿನಿಂದ ಆತನ ಮುಖದ ಒಂದು ಭಾಗವು ಕಾಣಿಸುತ್ತಿದೆ. ನೋಡುವುದಕ್ಕೆ ಮನುಷ್ಯನು ತುಂಬ ಕುರೂಪಿ. ಮೈಕಟ್ಟು ಬಲವಾದದ್ದು ಮತ್ತೂ ನೀಳವಾದದ್ದು. ಅರಿಂದಮನು ಅವನನ್ನು ಗುರ್ತಿಸಲಾರದೇ ಹೋದನು; ಹಿಂದೆ ಯಾವಾಗಲೋ ಎಲ್ಲಿಯೋ ನೋಡಿದ್ದನೆಂಬುದು ಕೂಡ ಅವನಿಗೆ ತಿಳಿಯದೆ ಹೋಯಿತು. ಕಾಗದ ಬರೆಯುವ ಉದ್ದೇಶ್ಯವೇನಿರಬಹುದೆಂದು ಅರಿಂದಮನು ಊಹಿಸಿದನು; ಇದಕ್ಕೆ ಮೊದಲು, ಅವರು ಆಲೋಚಿಸುತ್ತಿದ್ದಾಗ, ಈ ಸಂಬಂಧವಾದ ಮಾತು ಬಂದಿತ್ತು.

ಕಾಗದವನ್ನು ಬರೆದು ಪೂರೈಸಿಕೊಟ್ಟಮೇಲೆ ಅಪರಿಚಿತನು ಅದನ್ನು ತನ್ನ ಪಕ್ಕದ ಜೇಬಿನಲ್ಲಿಟ್ಟುಕೊಂಡನು. ಅರಿಂದಮನು ಅದನ್ನೂ ನೋಡಿದನು. ನೋಡಿದವನೇ, ಈ ಮನುಷ್ಯನು ಈಗಲೇ ಹೊರಡುವನಾಗಿದ್ದಾನೆಂದು ತಿಳಿದುಕೊಂಡನು; ಆದರಿಂದ ಆ ಸ್ಥಳವನ್ನು ಬಿಟ್ಟು ಸ್ವಲ್ಪ ದೂರದಲ್ಲಿರುವ ಒಂದು ಆಲದ ಮರದ ಮರೆಯಲ್ಲಿ ಸರಿದು ನಿಂತನು. ಆಗಲೇ ಆ ಮನುಷ್ಯನು ಹೊರಕ್ಕೆ ಬಂದನು; ಸ್ವಲ್ಪ ದೂರವಾಗಿ ಬಂದು ನಿಂತುಕೊಂಡು ಒಂದಾವರ್ತಿ ಮನೆಯನ್ನು ಚೆನ್ನಾಗಿ ದೃಷ್ಟಿಸಿ ನೋಡಿದನು; ಇದಾದ ನಂತರ, ತಾನು ಹೋಗಬೇಕಾದ ಸ್ಥಳವನ್ನು ಕುರಿತು ಹೊರಟನು. ಅರಿಂದಮನೂ ಅವನ ಹಿಂದೆ ಹೊರಟನು; ಅವನಿಗಿಂತಲೂ ವೇಗವಾಗಿ ನಡೆಯಲು ಉಪಕ್ರಮಿಸಿದನು; ಬರಬರುತ್ತ ಅವನ ಹತ್ತಿರಕ್ಕೇ ಬಂದನು. ಆ ಅಪರಿಚಿತನು ಒಂದೆರಡು ಸಲ ಆತನನ್ನು ದೃಷ್ಟಿಸಿ ನೋಡಿದನು, ಯಾವ ಮಾತನ್ನೂ ಆಡಲಿಲ್ಲ; ಅರಿಂದಮನೂ ಮಾತನಾಡಲಿಲ್ಲ.

## ಹದಿನಾಲ್ಕನೆಯ ಪರಿಚ್ಛೇದ

ಹಿಂಬಾಲಿಸಿದಾಗ

ಅರಿಂದಮನು ಯದುನಾಥ ಗೋಸ್ವಾಮಿಯ ಮನೆಯಿಂದ ಹೊರಟ ಆ ಅಪರಿಚಿತ ವ್ಯಕ್ತಿಯ ಹಿಂದೆಯೇ ಬಹು ದೂರ ಹೋದಮೇಲೆ ತಾನು ಯಾಚಕನಂತೆ ತೋರ್ಪಡಿಸಿಕೊಳ್ಳುತ್ತಾ ಆ ಅಪರಿಚಿತನೊಂದಿಗೆ ಹೀಗೆ ಮಾತನಾಡಲುಪಕ್ರಮಿಸಿದನು:—“ತಮ್ಮನ್ನು ನೋಡಿದರೆ, ತಮ್ಮನ್ನು ಹಿಂದೆ ಎಂದೂ ನೋಡಿದ ಪರಿಚಯವಿಲ್ಲ; ಆದರೂ ಕೂಡ ತಾವು ಹೇಗೆ ಕಾಣುವಿರೆಂದರೆ, ಇದಿರಾಗಿ ಹೇಳಿದರೆ ಸ್ತೋತ್ರ ಮಾಡಿದ ಹಾಗಾಗಬಹುದು. ತಾವು ಬಹು—ಬಹು—”

ಆ ಅಪರಿಚಿತನು ಈ ಮಾತಿನಿಂದ ಅಷ್ಟಾಗಿ ಸಂತುಷ್ಟನಾಗದೇ ಹೋದರೂ ಬಹುಮಟ್ಟಿಗೆ ವಿಸ್ಮಿತನಾಗಿ “ಯಾರಪ್ಪಾ ನೀನು?” ಎಂದು ಕೇಳಿದನು.

ಅರಿಂದಮನು ಕಂಠಸ್ವರವನ್ನು ಮತ್ತಷ್ಟು ಮಾರ್ಪಡಿಸಿಕೊಂಡು “ಇದೋ, ಅದೇ ಆಲೋಚಿಸುತ್ತಿದ್ದೇನೆ, ತಮ್ಮ ಇದಿರಾಗಿ ಹೇಳಿದರೆ ಹೊಗಳಿಕೆಯಾಗುತ್ತದೆ—ತಾವು ಬಹು—ಬಹು—” ಎಂದನು.

ಅಪರಿಚಿತನು ಸ್ವಲ್ಪ ಬೇಸರಗೊಂಡು “ಸುಮ್ಮನೆ ‘ಬಹು ಬಹು’ ಎನ್ನುತ್ತಿರುವೆಯಲ್ಲಾ, ಅದೇನು ಹೇಳಬಾರದೆ—ಬಹುದೊಡ್ಡ ಮನುಷ್ಯನೆಂದೋ ಅಥವಾ ಬಹು ಉದಾರಿಯೆಂದೊ?” ಎಂದನು.

ಅರಿಂದಮ—“ರಾಮ ರಾಮ! ಆ ರೀತಿ ಎಂದಾದರೂ ಆದೀತೆ? ಒಬ್ಬಾನೊಬ್ಬ ‘ಬಹು ದಗಾಕೋರ’ ಮನುಷ್ಯ. ಇದಿರಾಗಿ ಹೇಳಿದರೆ ಸ್ತೋತ್ರಪಾಠವಾಗುತ್ತದೆ. ಆದ್ದರಿಂದ ಹೇಳೋಣ, ಹೇಳೋಣ— ಎಂದಿದ್ದರೂ ಹೇಳಲಾಗಲಿಲ್ಲ.” ಹೀಗೆಂದು ಹೇಳುತ್ತಾ ಅರಿಂದಮನು ಅವನಿಗೆ ಮತ್ತಷ್ಟು ಹತ್ತಿರ ಹೋದನು; ಹತ್ತಿರಕ್ಕೆ ಹೋಗಿ ಅವನನ್ನು—ಮುಖ್ಯವಾಗಿ ಅವನ ಮುಖವನ್ನು—ಒಂದಾವರ್ತಿ ಚೆನ್ನಾಗಿ ನೋಡಿದನು.

ಆ ಅಪರಿಚಿತನು ಹುಬ್ಬು ಗಂಟುಹಾಕಿಕೊಂಡು ಸ್ವಲ್ಪವಾಗಿ ನಕ್ಕನು. ಇವನ ಮುಖವನ್ನು ತಿದ್ದುವುದರಲ್ಲಿ ವಿಧಾತನು ತನ್ನ ಸೃಷ್ಟಿ ವೈಚಿತ್ರ್ಯವನ್ನು ತೋರ್ಪಡಿಸಲು ಪ್ರಯತ್ನಪಟ್ಟಿರಬೇಕೆಂದು ಅರಿಂದಮನಿಗೆ ತೋರಿತು; ಏಕೆಂದರೆ ಆ ಮುಖದಲ್ಲಿ ಒಂದಲ್ಲ ಒಂದು ಸಾವಿರ ನಗೆಯು ಒಂದೇ ತಡವೆ ಕಾಣಿಸಿಕೊಂಡರೂ ಆ ಮನುಷ್ಯನು ನಗುತ್ತಿರುವನೋ ಇಲ್ಲವೇ ಮರ್ಮಾಹತವಾದ ಅಸಹ್ಯತರ ಯಾತನೆಯಿಂದ ಮುಖವಿಕಾರ ಮಾಡುತ್ತಿರುವನೋ ಎಂಬುದು ತಿಳಿಯುವ ಹಾಗಿರಲಿಲ್ಲ. ಆ ಮನುಷ್ಯನು ನಕ್ಕು—ಅದೆಂತಹ ವಿಕಾರ ಮುಖವೋ ಹೇಳಬರುವುದಿಲ್ಲ—"ನೀನೇನು ಹುಚ್ಚನೋ?" ಎಂದನು.

ಅರಿಂದಮ—ಇದಕ್ಕೆ ಮೊದಲು ಇಂತಹ ಮಾತನ್ನು ಯಾರೂ ಆಡಿಲ್ಲ, ನಿನ್ನ ಬಾಯಲ್ಲಿಯೇ ಮೊದಲು ಕೇಳಿದ ಹಾಗಾಯಿತು. ಆ ಮಾತು ಹಾಗಿರಲಿ, ಪುನಃ, ಯಾವ ಉದ್ದೇಶದಿಂದ ಇಂದು ಈ ಸಂಧ್ಯಾಕಾಲವಾದ ಮೇಲೆ ಹೊರಗೆ ಹೊರಟೋಣಾಯಿತೋ ಹೇಳು ನೋಡೋಣ? ನಿನ್ನೆಯ ರಾತ್ರಿಯೇನೋ ಒಬ್ಬಳನ್ನು ತೀರಿಸಿದೆ, ಇಂದು ಮತ್ತೆ ಯಾರ ಹೃದಯದೊಳಗೆ ಚೂರಿ ನೆಡಬೇಕೆಂದಿರುವೆಯಪ್ಪಾ?

ಅಪರಿಚಿತ—ನನಗೆ ನಿನ್ನ ಮಾತು ತಿಳಿಯುವುದಿಲ್ಲ.

ಅರಿಂದಮ—ಮನಸ್ಸಿನೊಳಗೇನೋ ಚೆನ್ನಾಗಿ ತಿಳಿಯಬಲ್ಲೆ; ಇಷ್ಟು ದೊಡ್ಡ ಕೊಲೆ ನಡೆದಿದೆ, ಅದರ ಸುದ್ದಿಯೇ ತಿಳಿಯದೆನ್ನುವೆಯಲ್ಲಾ?

ಅಪರಿಚಿತ—ಅಲ್ಲ, ಅದಲ್ಲ, ನಾನು ಅಲ್ಲಿರುವವನಲ್ಲ. ನೀನೇನು ಪತ್ತೇದಾರನೋ?

ಅರಿಂದಮ—ಹಾಗಲ್ಲದಿದ್ದಿದ್ದರೆ ನಿನ್ನನ್ನೇಕೆ ಹಿಂಬಾಲಿಸಬೇಕಾಗಿದ್ದಿತು? ನೀನೇ ಆ ಹುಡುಗಿಯನ್ನು ಕೊಂದವನೆಂದು ಖಂಡಿತವಾಗಿ ಹೇಳುತ್ತೇನೆ.

ಅಪರಿಚಿತ—ನನಗೇನೂ ತಿಳಿಯದು.

ಅರಿಂದಮ—ನಿನ್ನೆಯ ರಾತ್ರಿ ಪಲಾಯಿಮಂಡಲನ ಅಂಗಡಿಯ ಬಳಿ ಬಂದಿದ್ದವನು ನೀನೇ ಅಲ್ಲವೆ?

ಅಪರಿಚಿತ—ಅಲ್ಲ, ಪಲಾಯಿಮಂಡಲನೆಂದು ಹೆಸರುಳ್ಳವರು ಯಾರೂ ನನಗೆ ತಿಳಿಯದು.

ಅರಿಂದಮ—ತಿಳಿಯದೇ ಏನು, ಈಗ ಮರೆವಿರಬಹುದು. ಪಲಾಯಿಮಂಡಲನು ಸುಳ್ಳು ಹೇಳುವವನಲ್ಲ; ನಿನ್ನ ವಿಚಾರವನ್ನು ನನಗೆ ಹೇಳಿದವನೇ ಅವನು.

ಅಪರಿಚಿತ—ಅವನು ನಿನಗೆ ನನ್ನ ಹೆಸರನ್ನು ಹೇಳಿದನೆ?

ಅರಿಂದಮ—ಹೆಸರು ಹೇಳದಿದ್ದರೂ ನಿನ್ನ ಮುಖವನ್ನು ನೋಡಿದ ಮಾತ್ರದಿಂದ ನೀನೇ ಆ ಮಹಾಪುರುಷನೆಂದು ತಿಳಿಯಬಲ್ಲೆ.

ಅಪರಿಚಿತ—ಸುಳ್ಳು ಮಾತು; ಆದರೆ, ಈ ಕೊಲೆಗೆ ಸಂಬಂಧಿಸಿದ ಕೆಲವು ವಿಚಾರಗಳನ್ನು ನಾನು ಬಲ್ಲೆ. ನೀನು ಈಗ ಆ ಹುಡುಗಿಯ ಶವದೇಹವನ್ನು ಹುಡುಕುತ್ತಿರುವೆಯಲ್ಲವೆ? ಹಾಗಿದ್ದ ಪಕ್ಷದಲ್ಲಿ ನಿನಗೆ ನನ್ನಿಂದ ಸ್ವಲ್ಪ ಉಪಕಾರವಾಗಬಹುದು.

ಅರಿಂದಮ—ಹಾಗಾದರೆ ನಾನು ತುಂಬ ಕೃತಜ್ಞನಾಗಿದ್ದೇನೆ.

ಅಪರಿಚಿತ—ಮೃತದೇಹವನ್ನು ಹುಡುಕಿ ತೆಗೆವುದರಿಂದ ನಿನಗೆ ಒಳ್ಳೇ ಪುರಸ್ಕಾರ ದೊರೆಯಬಹುದೆಂಬ ಆಶೋತ್ತರವಿರಬಹುದಲ್ಲವೆ?

ಅರಿಂದಮ—ಇರಬಹುದೇನು, ಹಾಗಿಲ್ಲವಾದ ಪಕ್ಷದಲ್ಲಿ ಬೆಳಗಿನಿಂದ ಈವರೆಗೂ ಸುತ್ತಿ ಸುತ್ತಿ ಅಲೆದಾಡುವುದೇಕಪ್ಪಾ, ಹೇಳು.

ಅಪರಿಚಿತ—ಒಂದುವೇಳೆ ಆ ಮೃತದೇಹವನ್ನು ನಾನು ತೋರಿಸಿ ಕೊಟ್ಟರೆ, ಆಗ ನನಗೆ ಏನಾದರೂ ಬಹುಮಾನ ಗಿಹುಮಾನ ಕೊಡುತ್ತೀಯೋ?

ಅರಿಂದಮ—ಮಹತ್ತರವಾದ ಈ ಕೆಲಸವು ನಿನ್ನ ಮೂಲಕ ಸಾಧ್ಯವಾಗುವುದಾದರೆ ಬಹುಮಾನ ಕೊಡಲಾರೆನೆ? ಒಡನೆಯೆ ಕೊಡುತ್ತೇನೆ.

ಅಪರಿಚಿತ—ನಾನು ನಿನ್ನೆಯ ರಾತ್ರಿ ಎರಡು ಗಂಟೆಯ ಮೇಲೆ ಈ ಕಾಲುವೆಯ ಮಾರ್ಗವಾಗಿ ಬಂದಾಗ, ಪಶ್ಚಿಮ ಕಡೆಯಲ್ಲಿರುವ ಒಂದು ಕಾಡಿನಲ್ಲಿ ಒಬ್ಬ ಹುಡುಗಿಯ ಮೃತದೇಹವನ್ನು ನೋಡಿದೆನು. ನನ್ನ ಸಂಗಡ ಬಂದರೆ ತೋರಿಸುತ್ತೇನೆ.

ಅರಿಂದಮ—ಈ ಮಾತನ್ನು ಈವರೆಗೂ ರಹಸ್ಯವಾಗಿಟ್ಟಿದ್ದುದೇಕೆ?

ಅಪರಿಚಿತ—ತಾವಾಗಿ ಯಾರು ತಾನೇ ಪೋಲೀಸಿನವರ ತೊಂದರೆಗೆ ಸಿಕ್ಕಿಬಿದ್ದಾರು ಹೇಳು. ಈಗ ನನ್ನ ಸಂಗಡ ಬರುವೆಯಾ?

ಅರಿಂದಮನು ಸ್ವಲ್ಪಹೊತ್ತು ಏನನ್ನೊ ಆಲೋಚನೆ ಮಾಡಿದನು. ಅನಂತರ, "ನಡೆ ಹೋಗೋಣ" ಎಂದು ಹೇಳಿದನು.

---

## ಹದಿನೈದನೆಯ ಪರಿಚ್ಛೇದ

### ಮಲ್ಲಯುದ್ಧ

ಆ ಅಪರಿಚಿತನಾದ ಮನುಷ್ಯನು ಅರಿಂದಮನನ್ನು ಸಂಗಡ ಕರೆದುಕೊಂಡು ಹೊರಟನು. ಇಬ್ಬರೂ ಮೌನವಾಗಿದ್ದರು; ನೀರು ನಿಂತಿದ್ದ ಮೂರು ನಾಲ್ಕು ಪ್ರಾಂತರಗಳನ್ನು ದಾಟಿ ಹೋದರು. ಕಟ್ಟಕಡೆಗೆ ಅವರೊಂದು ಸ್ಥಳಕ್ಕೆ ಬಂದರು; ಆ ಸ್ಥಳದಲ್ಲಿ ನಿಂತು ನೋಡಿದರೆ ಊರು-ಕೇರಿಗಳೊಂದೂ ಕಾಣಿಸುತ್ತಿರಲಿಲ್ಲ. ರಾತ್ರಿಯ ವೇಳೆಯಲ್ಲಿ—ರಾತ್ರಿಯ ಮಾತು ಹಾಗಿರಲಿ, ಯಾರು ಯಾರನ್ನಾದರೂ ಕೊಲ್ಲಲು ಮನಸ್ಸು ಮಾಡಿದರಾದರೆ, ಪ್ರಶಸ್ತವಾದ ಹಗಲು ಹೊತ್ತಿನಲ್ಲಿಯೂ ಅವರು ನಿರ್ವಿಘ್ನವಾಗಿ ಆ ಕೆಲಸವನ್ನು ಮಾಡುವುದಕ್ಕೆ ಅನುಕೂಲವಾದ ಸ್ಥಳವದು.

ಆ ಅಪರಿಚಿತ ವ್ಯಕ್ತಿಯು ಅಲ್ಲಿಗೆ ಬಂದು ಮೃತಶರೀರವನ್ನು ಹುಡುಕುವವನಹಾಗೆ ಹತ್ತಿರದಲ್ಲಿನ ಒಂದು ಪೊದೆಯನ್ನು ಹೀಗೂ ಹಾಗೂ ನೋಡಿ, "ಚೆನ್ನಾಯಿತು, ತುಂಬ ಆಶ್ಚರ್ಯವಾಯಿತಲ್ಲ!" ಎಂದನು.

ಅರಿಂದಮನು ಆ ಮಾತಿಗೆ ಏನೊಂದು ಉತ್ತರವನ್ನೂ ಕೊಡಲಿಲ್ಲ.

ಅಪರಿಚಿತನು "ಚೆನ್ನಾಯಿತು, ತುಂಬಾ ಆಶ್ಚರ್ಯವಾಗಿದೆಯಲ್ಲ!" ಎಂದು ಅರಿಂದಮನಿಗೆ ಕೇಳಿಸುವ ಹಾಗೆ ಇನ್ನೊಂದು ಸಲ ಹೇಳಿದನು.

ಅರಿಂದಮನು ಆಗಲೂ ಸುಮ್ಮನಿದ್ದನು.

ಅಪರಿಚಿತ—ಏನಯ್ಯಾ, ಮೃತದೇಹವು ಕಾಣಬರುವುದಿಲ್ಲವಲ್ಲ?

ಅರಿಂದಮ—ಎಲ್ಲಿ ಹೋಯಿತು?

ಅಪರಿಚಿತ—ಹೇಗೆ ಹೇಳಲಿ.

ಅರಿಂದಮ—ನಿನ್ನ ಮನಸ್ಸಿನಲ್ಲಿ ಏನಿದೆಯೋ ಒಡೆದು ಹೇಳು, ನೋಡೋಣ.

ಅಪರಿಚಿತ—ನೀನು ಏನೆಂದು ತಿಳಿದೆ?

ಅರಿಂದಮ—ನೀನೊಬ್ಬ ಭಯಂಕರ ದಸ್ಯುವೆಂದು ನಾನು ತಿಳಿದಿದ್ದೇನೆ. ಇದಕ್ಕೆ ಹೆಚ್ಚಾಗಿ ಏನೆಂದು ತಿಳಿಯಲಿ? ನೀನು ಏನೆಂದು ಭಾವಿಸಿ ನನ್ನನ್ನು ಇಲ್ಲಿಗೆ ಕರೆದುಕೊಂಡು ಬಂದೆಯೋ ಬಾಯಿಬಿಟ್ಟು ಹೇಳು ನೋಡೋಣ.

ಅಪರಿಚಿತ—ಇದೊ ಪ್ರಕಾಶಪಡಿಸುತ್ತೇನೆ.

ಹೀಗೆಂದು ಹೇಳಿ ಅವನು ಉದ್ದವಾದೊಂದು ಚೂರಿಯನ್ನು ಹೊರಕ್ಕೆ ತೆಗೆದು ಅರಿಂದಮನ ಕಡೆಗೆ ನುಗ್ಗಿದನು. ಅರಿಂದಮನು ಭಯಪಟ್ಟವನಂತೆ ನಟಿಸುತ್ತಾ ಎರಡು ಕೈಗಳನ್ನೂ ಮೇಲಕ್ಕೆತ್ತಿ "ಏನ ಮಾಡುವೆ-ಏನ ಮಾಡುವೆ-ನನ್ನನ್ನು ಕೊಲ್ಲಬೇಡ, ಬೇಡ-ನಿನಗೆ ದಮ್ಮಯ್ಯ-!" ಎಂದು ಮೊರೆಯಿಟ್ಟನು.

ಅಪರಿಚಿತ—ನೀನು ನನ್ನ ಮಾತುಗಳಿಗೆಲ್ಲಾ ಸರಿಯಾದ ಉತ್ತರ ಕೊಡುವುದಾದರೆ-ನಾನು ನಿನ್ನನ್ನು ಏನೂ ಮಾಡುವುದಿಲ್ಲ.

ಅರಿಂದಮ—ಹೇಳು, ಏನಹೇಳಬೇಕು?

ಅಪರಿಚಿತ—ನೀನು ಯಾರು, ನಿನ್ನ ಹೆಸರೇನು, ನೀನು ಇರವುದೆಲ್ಲಿ, ನಿನ್ನ ಕೆಲಸವೇನು, ಯಾತಕ್ಕೋಸ್ಕರವಾಗಿ ನನ್ನ ಹಿಂದೆ ಬಂದೆ? ಈ ಎಲ್ಲ ಮಾತುಗಳಿಗೂ ನೀನು ಉತ್ತರ ಕೊಡಬೇಕು.

ಅರಿಂದಮ—ನಾನು ಮತ್ತೆ ಯಾರು? ಕಾಣುವುದಿಲ್ಲವೆ, ನಾನೂ ಒಬ್ಬ ಮನುಷ್ಯ; ಹೆಸರು ಅಷ್ಟು ಚೆನ್ನಾಗಿಲ್ಲ, ಕೃತಾಂತಬಾಬು ಎಂದು. ನಾನು ಇರುವುದು ಕೊಲೆಪಾತಕರ ಸಂಗಡ; ನನ್ನ ಕೆಲಸವಾದರೋ ನಿನ್ನಂತಹ ಬದಮಾಷರನ್ನು ಹುಡುಕುತ್ತಾ ಅಲೆದಾಡುವುದು. ನಿನ್ನ ಹಿಂದೆ ಬಂದುದೇಕೆ ಎಂದಲ್ಲವೆ—ನಿನ್ನ ಹಿಂದೆ ಬಂದುದು ನಿನ್ನನ್ನು ಹಿಡಿದುಹಾಕುವುದಕ್ಕಾಗಿ.

ಅಪರಿಚಿತ—ಏಕೆ, ನಾನು ಕೊಲೆಪಾತಕಿಯೇನು?

ಅರಿಂದಮ—ಆ ವಿಷಯದಲ್ಲಿ ಇನ್ನೂ ಸಂದೇಹವಿದೆಯೆ? ಹಾಗಲ್ಲ ವಾಗಿದ್ದರೆ ಇಷ್ಟು ದೊಡ್ಡ ಚೂರಿಯನ್ನು ಹಿಡಿದುಕೊಂಡು ಹಗಲೂ ರಾತ್ರಿ ಓಡಾಡುತಿದ್ದೆಯಾ?

ಅಪರಿಚಿತನು ಆ ಚೂರಿಯನ್ನೆತ್ತಿ ಅರಿಂದಮನನ್ನು ಹೊಡೆಯು ವುದಕ್ಕೆಂದು ಪುನಃ ಮುಂದರಿದನು. ಅರಿಂದಮನು ಪುನಃ ಮೊದಲಿನ ಹಾಗೆಯೇ ಎಷ್ಟೋ ಭಯಪಟ್ಟವನಹಾಗೆ ನಟಿಸಿದನು; ಅನೇಕವಾಗಿ ವಿನಯೋಕ್ತಿಗಳನ್ನಾಡಿ ಆ ಬಾರಿಯೂ ತಪ್ಪಿಸಿಕೊಂಡನು. ಅಪರಿಚಿತನು, "ಈಗ ಹೇಳು, ನೀನು ಯಾರು, ನೀನು ಇರವುದೆಲ್ಲಿ?" ಎಂದು ಕೇಳಿದನು.

ಅರಿಂದಮ—"ಹೇಳುತ್ತೇನೆ-ಹೇಳುತ್ತೇನೆ, ಅದೋ ದೂರದಲ್ಲಿ ಒಂದು ತೆಂಗಿನಮರ ಕಾಣಿಸುತ್ತದೆ. ಅದರಿಂದಾಚೆ, ಇನ್ನೂ ದೂರದಲ್ಲಿ, ಒಂದು ಬಾಗಿನೀಮರವಿದೆ. ಅದು ಈ ಬೆಳದಿಂಗಳಲ್ಲಿ ಚೆನ್ನಾಗಿ ಕಾಣಿ ಸುತ್ತಿದೆ" ಎಂದು ಹೇಳುತ್ತಾ ಅವನ ಪಕ್ಕದಲ್ಲಿ ನಿಂತು ಅರಿಂದ ಮನು ಬೆರಳು ತೋರಿಸತೊಡಗಿದನು. ನಿಜವಾಗಿಯೂ ಅತ್ತಕಡೆ ಬಾಗಿನೀಮರವಾಗಲೀ ತೆಂಗಿನಮರವಾಗಲೀ ಇರಲಿಲ್ಲ.

ಅರಿಂದಮನು ಬೆರಳು ತೋರಿಸಿದ ಕಡೆ ದೃಷ್ಟಿಸಿ ನೋಡುತ್ತಾ ಅಪರಿಚಿತನು, "ಎಲ್ಲೋ, ನಿನ್ನ ಬಾಗಿನೀಮರ ಎಲ್ಲಿದೆಯೋ?" ಎಂದು ಕೇಳಿದನು.

ಅರಿಂದಮನು ಪಕ್ಕದಲ್ಲಿಯೇ ನಿಂತುಕೊಂಡಿದ್ದನಾದ್ದರಿಂದ ಆಗ ಅರಿಂದಮನಿಗೆ ಸ್ವಲ್ಪ ಅನುಕೂಲ ಸಿಕ್ಕಿತು. ಆತನು ಅಪರಿಚಿತನ ಕೈಯೊಳಗಿದ್ದ ಚೂರಿಯನ್ನು ಮೊದಲು ಕಸರಿಕೊಂಡು, ಕೂಡಲೆ ಅವನ ಕಾಲಿನ ಮೇಲೆ ಕಾಲಿಟ್ಟು ಅದುಮಿ ಹಿಡಿದುಕೊಂಡು ಒಂದು ಸಲ ತಳ್ಳಿದನು. ಹಾಗೆ ತಳ್ಳಿದ್ದನ್ನು ಅಪರಿಚಿತನು ತಾಳಿಕೊಳ್ಳಲಾರದೆ ಧೊಪ್ಪನೆ ನೆಲಕ್ಕೆ ಬಿದ್ದನು. ಅನಂತರ ಅರಿಂದಮನು ಅವನ ಎದೆಯ ಮೇಲೆ ಅದುಮಿಕೊಂಡು ಕುಳಿತನು. ಅಪರಿಚಿತನು ಬಿಡಿಸಿಕೊಳ್ಳುವುದಕ್ಕೆ ತುಂಬ ಸಾಹಸ ಮಾಡಿದನು. ಅರಿಂದಮನು ಅವನ ಕುತ್ತಿಗೆಯನ್ನು ಎಡದ ಕೈಯಿಂದ ಹಿಡಿದು ಒತ್ತಿದ್ದರಿಂದ ಅವನು ಗೊರಗೊರನೆಂದು ಶಬ್ದಮಾಡಲಾರಂಭಿಸಿದನು. ಅಪರಿಚಿತನು ನಿತ್ರಾಣನಾಗುತ್ತ ಬಂದುದನ್ನು ಕಂಡು ಅರಿಂದಮನು ಅವನ ಕುತ್ತಿಗೆಯ ಹಿಡಿತವನ್ನು ಬಿಟ್ಟು "ಏನೋ, ದೊಡ್ಡ ಮಾರಾಮಾರಿಗೇ ಆರಂಭಿಸಿದೆ? ಈಗ ನಾನು ಏನುಮಾಡಲಿ ಹೇಳು—ನಿನ್ನನ್ನು ಬಿಟ್ಟುಬಿಡಲೋ, ಅಥವಾ ನಿನ್ನ ಪ್ರಾಣವನ್ನು ಈ ಸ್ಥಳದ ಗಾಳಿಯೊಂದಿಗೆ ಬೆರಸಿಬಿಡಲೋ?" ಎಂದು ಕೇಳಿದನು.

ಅಪರಿಚಿತನು ಯಾವುದೊಂದು ಉತ್ತರವನ್ನೂ ಕೊಡಲಿಲ್ಲ.

ಅರಿಂದಮ—"ಇಲ್ಲಿಯೆ ನಿನ್ನಂಥ ಈ ಬಡಕಲು 'ಪೈಲ್ವಾನ'ನನ್ನು ಈಗಲೇ ತೀರಿಸಿಬಿಡಬಹುದಾಗಿದ್ದಿತು, ಆದರೆ ಒಂದೇಸಲಕ್ಕೆ ಕೊಂದು ಬಿಟ್ಟರೆ ನಿನ್ನ ವಿಚಾರದಲ್ಲಿ ಕೈಗಳು ಚೆನ್ನಾಗಿ ಕೆಲಸ ಮಾಡಿದಂತಾಗುವುದಿಲ್ಲ" ಎಂದು ಹೇಳಿ, ಅವನನ್ನು ಬಿಟ್ಟುಬಿಟ್ಟು "ಈಗ ನಾನು ನಿನ್ನನ್ನು ಬಿಟ್ಟುದರಿಂದ ನೀನು ನನ್ನ ಕೈಯಿಂದ ತಪ್ಪಿಸಿಕೊಂಡಂತೆ ಆಯಿತೆಂದು ತಿಳಿಯಬೇಡ; ಅವಶ್ಯಕ ತೋರಿದ ಕೂಡಲೇ ನಿನ್ನನ್ನು ಪುನಃ ಹಿಡಿಯ ಬಲ್ಲೆನು. ಅವಶ್ಯಕವಾದ ಒಂದು ಕಾರಣದ ದೆಸೆಯಿಂದ ನಿನ್ನನ್ನು

ಸ್ವಲ್ಪ ರೇಗಿಸಿದೆ. ಮತ್ತಾವಾಗಲಾದರೂ ಆವಶ್ಯಕ ಕಂಡುಬಂದರೆ, ಆಗ ಬಂದು ನಿನ್ನನ್ನು ನೋಡುತ್ತೇನೆ. ಈಗ, ಇನ್ನೇನೂ ಹೇಳದೆ, ಸರಿಯಾದ ಮಾರ್ಗದಲ್ಲಿ ಸ್ವಸ್ಥಾನವನ್ನು ಕುರಿತು ಪ್ರಸ್ಥಾನಮಾಡು; ಇಲ್ಲವಾದರೆ ನಿನ್ನ ಚೂರಿಯನ್ನು ನಿನ್ನ ಎದೆಯಲ್ಲಿಯೇ ನೆಡುವುದಕ್ಕೆ ನಾನು ಹಿಂದೆಗೆವುದಿಲ್ಲ'' ಎಂದು ಹೇಳಿದನು.

ಅಪರಿಚಿತನು ತಲೆ ತಗ್ಗಿಸಿಕೊಂಡು, ಒಂದು ಮಾತನ್ನೂ ಆಡದೆ ವಿಧೇಯನಾದ ಸತ್ಪುರುಷನಹಾಗೆ, ಆ ಸ್ಥಳವನ್ನು ಬಿಟ್ಟು ನಿಧಾನವಾಗಿ ನಡೆದು ಹೋದನು.

---

## ಹದಿನಾರನೆಯ ಪರಿಚ್ಛೇದ

### ವೇಷಾಂತರದಲ್ಲಿ

ಮಾರನೆಯ ದಿನ ಮಧ್ಯಾಹ್ನದ ಮೇಲೆ ಅರಿಂದಮನು ಸನ್ಯಾಸ ವೇಷದಿಂದ ಗೋಸ್ವಾಮಿಯನ್ನು ನೋಡುವುದಕ್ಕೆ ಬಂದನು.

ವೇಷಾಂತರವನ್ನು ಅವಲಂಬಿಸುವುದರಲ್ಲಿ ಅರಿಂದಮನಿಗೆ ವಿಶೇಷವಾಗಿ ನಿಪುಣತೆಯಿತ್ತು. ಆತನು ಯಾವುದಾದರೂ ವೇಷಾಂತರವನ್ನು ಅವಲಂಬಿಸಿ ಹೊರಗೆ ಹೊರಟನೆಂದರೆ ಎಂತಹ ಪರಿಚಿತನೇ ಆದರೂ ಆತನನ್ನು ಗುರ್ತಿಸಲಾರನು; ಅನೇಕ ವೇಳೆಗಳಲ್ಲಿ ಪೋಲೀಸ್ ಠಾಣೆಯ ಅಧ್ಯಕ್ಷನಾದ ಯೋಗೇಂದ್ರಬಾಬುವೂ ಭ್ರಮೆಗೊಳ್ಳುತ್ತಿದ್ದನು. ಅರಿಂದಮನಿಗೆ ವಯಸ್ಸು ಹತ್ತಿರ ಹತ್ತಿರ ಐವತ್ತಕ್ಕೆ ಬಂದಿತ್ತು. ಬಗೆಬಗೆಯ ವೇಷಾಂತರಗಳನ್ನು ತಾಳುವುದಕ್ಕೆ ಅನುಕೂಲವಾದೀತೆಂದು ತಿಳಿದು ಆತನು ಪ್ರತಿದಿನವೂ ಬೆಳಿಗ್ಗೆ ಎದ್ದ ಕೂಡಲೆ ತನ್ನ ಕೈಯ್ಯಾರ ತನ್ನ ಗಡ್ಡ ಮೀಸೆಗಳನ್ನು ಸಂಪೂರ್ಣವಾಗಿ ಬೋಳಿಸಿಕೊಳ್ಳುವನು. ಯದುನಾಥ ಗೋಸ್ವಾಮಿಯನ್ನು ಅರಿಂದಮನು ಸುಲಭವಾಗಿಯೇ ಕಂಡನು. ಆಗ ಯದುನಾಥ ಗೋಸ್ವಾಮಿಯು ಊಟವನ್ನು ಮುಗಿಯಿಸಿಕೊಂಡು ಹೊರ ಭಾಗದ ಕೊಠಡಿಯಲ್ಲಿ

ಕುಳಿತು ಎಲೆಯಡಿಕೆಯನ್ನು ಅಗಿಯುತ್ತಾ ಧೂಮಪಾನದಲ್ಲಿ ನಿರತನಾಗಿದ್ದನು. ಬಗ್ಗಿಕೊಂಡು ಮಲಗಿದ್ದವನು, ಅಪರಿಚಿತನಾದ ವೃದ್ಧನು ಬಂದುದನ್ನು ಕಂಡು, ಎದ್ದು ಕುಳಿತುಕೊಂಡನು.

ವೇಷಾಂತರವನ್ನವಲಂಬಿಸಿದ್ದ ಅರಿಂದಮನು,—ಮಹಾಶಯ, ಇಲ್ಲಿ ಯದುನಾಥ ಗೋಸ್ವಾಮಿ ಎಲ್ಲಿರುವರೋ ದಯಮಾಡಿ ತಿಳುಹುವಿರಾ ?

ಯದುನಾಥ—ಅದು ನನ್ನ ಹೆಸರು, ತಮಗೆ ಏನು ಬೇಕು ? ನೀವು ಎಲ್ಲಿಂದ ಬಂದಿರಿ ?

ಅರಿಂದಮ—ಬಹು ದೂರದಿಂದ ಬಂದೆ, ಒಬ್ಬಾನೊಬ್ಬ ನಿಮ್ಮ ಶಿಷ್ಯನ ಮನೆಯಿಂದ. ಆಹ! ಬಹು ಸೆಕೆ, ಎಂತಹ ಬಿಸಿಲು ! ಉಸ್ ! ಬಹು ಒಳ್ಳೆಯ ಸಮಾಚಾರ, ಆತನು ಶಿವಪ್ರತಿಷ್ಠೆ ಮಾಡುತ್ತಾನೆ, ದೊಡ್ಡಮನುಷ್ಯ, ಏಕಾಏಕಿ ಕಲ್ಪತರುವೇ ಆಗಿದ್ದಾನೆ, ಮುಖ್ಯವಾಗಿ ತಾವು ಆತನ ಗುರು, ತಮ್ಮ ಪುಣ್ಯವೇ ಪುಣ್ಯ ! ಅಬ್ಬ ಏನು ಸೆಕೆ–ಪ್ರಾಣವೇ ಹೋಗುತ್ತದೆ.

ಯದುನಾಥನು—ಕೇವಲ ಆಕೃಷ್ಟನಾಗಿ, "ನನ್ನ ಶಿಷ್ಯರೆಲ್ಲರೂ ದೊಡ್ಡಮನುಷ್ಯರೇ. ಆತನು ಯಾರು ?" ಎಂದು ಕೇಳಿದನು.

ಅರಿಂದಮನು ಕೆನ್ನೆಯ ಬೆವರು ಒರಸಿಕೊಳ್ಳುತ್ತಾ, ಅಯ್ಯಾ— "ಬಹು ಸೆಕೆ ! ಉಸ್–ಕೊಂಚ ನೀರು ; ಬಾಯಾರಿಕೆ, ಹೊಟ್ಟೆಯಿಂದ ಗಂಟಲವರೆಗೂ ಒಣಗಿ ಹೋಗಿದೆ" ಎಂದನು.

ಕೊಠಡಿಗೆ ಎರಡು ಬಾಗಿಲು, ಒಂದು ಬೀದಿಯ ಕಡೆಗೆ, ಇನ್ನೊಂದು ಮನೆಯೊಳಕ್ಕೆ. ಯದುನಾಥ ಗೋಸ್ವಾಮಿಯು ನೀರು ತರುವುದಕ್ಕೆಂದು ಒಳಬಾಗಿಲಿಂದ ಮನೆಯೊಳಕ್ಕೆ ಹೋದನು. ಅತ್ತಕಡೆಗೆ ಒಂದು ಕಿಟಕಿಯೂ ಇದ್ದಿತು ; ಆ ಕಿಟಕಿಯ ಪಕ್ಕದಲ್ಲಿ ಆ ಸರ್ವಾಂಗ ಸುಂದರಿಯು ವಿಷಣ್ಣ ವದನಳಾಗಿ ನಿಂತಿರುವುದನ್ನು

ಅರಿಂದಮನು ಕಂಡನು. ಹಿಂದಿನ ದಿನ ಅವಳನ್ನೇ ಮನೆಯ ಹಿಂಭಾಗದ ಕಿಟಕಿಯಲ್ಲಿ ಅರೆಘಳಿಯವರೆಗೆ ಅರಿಂದಮನು ನೋಡಿದ್ದನು. ಅರಿಂದಮನು ತನ್ನ ಕಡೆ ನೋಡುತ್ತಿರುವುದನ್ನು ಕಂಡು ಆ ಭುವನಮೋಹಿನೀ ಮೂರ್ತಿಯು ಅಲ್ಲಿ ನಿಂತುಕೊಳ್ಳಲಿಲ್ಲ.

ಸ್ವಲ್ಪ ಹೊತ್ತಿನ ಮೇಲೆ. ಯದುನಾಥ ಗೋಸ್ವಾಮಿಯು ನೀರು ತಂದು ಅರಿಂದಮನ ಕೈಗೆ ಕೊಟ್ಟನು. ಅರಿಂದಮನು ಒಂದೇ ಉಸುರಿನಲ್ಲಿ ಅಷ್ಟನ್ನೂ ಕುಡಿದುಬಿಟ್ಟನು.

ಯದುನಾಥ ಗೋಸ್ವಾಮಿಯು ಮೊದಲಿನಂತೆಯೇ ಕುತೂಹಲದಿಂದ, "ನೀವು ಯಾರ ಬಳಿಯಿಂದ ಬರುತ್ತಲಿದ್ದೀರಿ?" ಎಂದು ಪುನಃ ಪ್ರಶ್ನೆ ಮಾಡಿದನು.

ಅರಿಂದಮನು—(ನಿಟ್ಟುಸಿರು ಬಿಟ್ಟು) "ಹೇಳುತ್ತೇನಯ್ಯಾ ಹೇಳುತ್ತೇನೆ, ಆತುರಪಡಬೇಡಿ. ಉಸ್ ಬಹಳ ಸಂಕಟವಾಗುತ್ತದೆ. ಅಯ್ಯೋ! ಮೈಯ್ಯಲ್ಲೆಲ್ಲಾ ಏನೇನೋ ಆಗುತ್ತಿದೆ. ತಲೆ ಸುತ್ತುತ್ತದೆ; ಕಣ್ಣು ಕತ್ತಲು ಕವಿದಿರುವುದಲ್ಲಾ ಕಾರಣವೇನು? ಇದೇನು ಶೀತೋಷ್ಣಗಳ ಲಕ್ಷಣವೋ? ಬೀಸಣಿಗೆ ಬೀಸಣಿಗೆ—ಇಲ್ಲವೆ? ಇದೇನಾಯಿತು? ಪ್ರಾಣಹೋಗುವಹಾಗೆ ಸಂಕಟವಾಗುತ್ತಿದೆ, ಅಯ್ಯೋ ಗೋಸ್ವಾಮಿ ಮಹಾಶಯ, ಬದುಕುವ ಹಾಗೆ ತೋರುವುದಿಲ್ಲ. ನೀರು, ನೀರು—ಇನ್ನಷ್ಟು ನೀರು ಬೇಕು; ವಿಪರೀತ ದಾಹ—ಅಯ್ಯೋ ಸತ್ತೆನಲ್ಲ!" ಎಂದು ಹೇಳುತ್ತ ಹೇಳುತ್ತ ಅರಿಂದಮನು ಅಲ್ಲಿಯೇ ಮಲಗಿಬಿಟ್ಟನು; ನೆಲದ ಮೇಲೆಬಿದ್ದು ಒದೆದಾಡಿದನು; ಹಾಗೆಯೇ ಒಂದುಸಲ ಇತ್ತ ಕಡೆ, ಇನ್ನೊಂದುಸಲ ಅತ್ತಕಡೆ ಹೊರಳಾಡಿದನು; ಏಳುತ್ತಲೂ ಬೀಳುತ್ತಲೂ ಸಂಕಟಪಟ್ಟನು; ಕಡೆಗೆ ಅಜ್ಞಾನ—ಸತ್ತಹಾಗೆ ಬಿದ್ದುಕೊಂಡನು. ಇದೆಲ್ಲವನ್ನೂ ಕಂಡು ಯದುನಾಥನಿಗೆ ಭಯವಾಯಿತು. ಭಯದಿಂದ ಮುಖವು ಬಾಡಿತು, ಹಾಗೆಯೇ ಏನುಮಾಡಬೇಕೆಂದು ಆಲೋಚಿಸಿ ಯಾವುದನ್ನೂ ನಿಶ್ಚಯಮಾಡಲಾರದವನಾದನು. ಚೀತ್ಕಾರ

ಮಾಡುತ್ತ ಹೆಂಡತಿಯನ್ನು ಕರೆದನು; ಹೆಂಡತಿ ಬಂದನಂತರ ಆತನಿಗೆ ಗಾಳಿ ಹಾಕೆಂದು ಹೇಳಿ ತಾನು ವೈದ್ಯನ ಮನೆಗೆ ಓಡಿದನು. ವೈದ್ಯನ ಮನೆ ಸಮೀಪವಲ್ಲಿಲ್ಲ.

ಹಠಾತ್ತಾಗಿ ಇದೇನು ವಿಪತ್ತು!

---

## ಹದಿನೇಳನೆಯ ಪರಿಚ್ಛೇದ

### ಶುಶ್ರೂಷೆ

ಅರಿಂದಮನು ಇದೇ ಅನುಕೂಲ ಸಮಯವೆಂದು ಭಾವಿಸಿದನು.

ಯಾವ ಉದ್ದೇಶದಿಂದ ಅವನು ಸತ್ತವನ ಹಾಗೆ ನಟಿಸುತ್ತಾ ನೆಲದ ಮೇಲೆ ಬಿದ್ದುಕೊಂಡನೋ ಆ ಉದ್ದೇಶವನ್ನು ಈಗ ಸುಲಭವಾಗಿ ಕೈಗೂಡಿಸಿಕೊಳ್ಳಬಹುದೆಂದು ಆತನಿಗೆ ತೋರಿತು. ಆಗ ಆತನು ಕುಗ್ಗಿದ ಸ್ವರದಿಂದ ಪುನಃ ನೀರು ಕೇಳಿದನು. ಬ್ರಾಹ್ಮಣಿಯು ನೀರು ತರುವುದಕ್ಕೆಂದು ಎದ್ದಾಗ "ನೀವು ಕುಳಿತುಕೊಳ್ಳಿ, ಈಗಿನಂತೆಯೇ ಗಾಳಿ ಬೀಸಿ. ನನ್ನ ಶರೀರವೆಲ್ಲವೂ ಬಹು ಭಾರವಾಗಿರುವ ಹಾಗಿದೆ. ಅಮ್ಮಾ! ನೀವು ನನಗೆ ಯಾವ ಜನ್ಮದ ತಾಯಿಯೋ, ಈಗ ನನ್ನನ್ನು ಬದುಕಿಸಿದಿರಿ" ಎಂದು ಅರಿಂದಮನು ಹೇಳಿದನು.

ಹೆಂಗಸರ ಮನಸ್ಸು ಸ್ವಭಾವವಾಗಿ ಒಳ್ಳೆಯ ಮಾತುಗಳಿಂದ ಕರಗುತ್ತದೆ. ಆಗ ಬ್ರಾಹ್ಮಣಿಯು ಅಲ್ಲಿಯೇ ಕುಳಿತುಕೊಂಡು ಮತ್ತಷ್ಟು ಬಲವಾಗಿ ಗಾಳಿ ಬೀಸುತ್ತಾ ಕುಳಿತಳು. ಹೀಗೆ ಪುನಃ ಸ್ವಲ್ಪಹೊತ್ತು ಕಳೆಯಿತು. ಅರಿಂದಮನು ಪುನಃ ನೀರು ಕೇಳಿದನು. ಆಗ ಬ್ರಾಹ್ಮಣಿಯು ಬೇರೆ ಒಬ್ಬರನ್ನು ಕರೆದು, ಅವರ ಕೈಯಲ್ಲಿ ಬೀಸಣಿಗೆ ಕೊಟ್ಟು, ಗಾಳಿ ಹಾಕುವಂತೆ ಹೇಳಿ ತಾನು ನೀರು ತರುವುದಕ್ಕೆ ಹೋದಳು.

ಈಗ ಬೀಸಣಿಗೆ ಹಿಡಿದು ಕುಳಿತವಳೇ ಆ ಅಪರೂಪ ಲಾವಣ್ಯಮಯಿಯೆಂದು ಅರಿಂದಮನು ನೋಡಿ ಗುರ್ತಿಸಿದನು. ಇವಳು ಕಿಟಕಿ

ಯಲ್ಲಿ ನಿಂತಿದ್ದುದನ್ನು ಅವನು ಎರಡು ಸಾರಿ ನೋಡಿದ್ದನು. ಆಗ ಅವನು ಬಹು ಮೃದುಸ್ವರದಿಂದ, ಗೋಸ್ವಾಮಿ ಮಹಾಶಯನು ನಿನಗೆ ಏನಾಗಬೇಕನಮ್ಮಾ ?'' ಎಂದು ಪ್ರಶ್ನೆಮಾಡಿದನು.

ಅವಳು ಯಾವ ಉತ್ತರವನ್ನೂ ಹೇಳಲಿಲ್ಲ; ಮೊದಲಿನಂತೆ ಗಾಳಿ ಬೀಸುತ್ತಲೇ ಇದ್ದಳು.

ಅರಿಂದಮನು ಮೊದಲಿನ ಹಾಗೆಯೇ ಮೃದುಸ್ವರದಿಂದ ತನ್ನ ಪ್ರಶ್ನೆಗೆ ಉತ್ತರವಾಗಿ ''ನಿನಗೇನೂ ಆಗಬೇಕಾಗಿಲ್ಲವೆಂದು ತೋರುತ್ತದೆ—ತೋರುವುದೇನು, ನಿಜವಾಗಿಯೂ ಸಂಬಂಧಿಯಲ್ಲವೆಂದು ತೋರುತ್ತದೆ. ನನಗೆ ನಿನ್ನ ವಿಚಾರವು ಸ್ವಲ್ಪಸ್ವಲ್ಪ ಗೊತ್ತಿದೆ'' ಎಂದು ತಾನಾಗಿಯೇ ಹೇಳಿದನು.

ಕೇಳಿ ಬೀಸಣಿಗೆ ಹಿಡಿದಿದ್ದ ಸುಂದರಿಗೆ ಭಯವಾಯಿತು. ಅವಳು ಬೀಸಣಿಗೆಯನ್ನು ಬಿಸುಟು, ಎದ್ದುಹೋಗಲು ಪ್ರಯತ್ನಿಸಿದಳು.

ಅರಿಂದಮನು—ಭಯವಿಲ್ಲವಮ್ಮಾ—ನಾನು ನಿನಗೆ ಶತ್ರುವಲ್ಲ, ನನ್ನಲ್ಲಿ ಯಾವುದೊಂದು ವಿಚಾರವನ್ನೂ ಮರೆಮಾಡಬೇಡ. ನಿನ್ನ ಮೇಲೆ ಈಗ ಮತ್ತೊಂದು ಭಯಂಕರವಾದ ಪಿತೂರಿ ನಡೆಯುತ್ತಿದೆ. ಇಷ್ಟರಲ್ಲಿಯೇ ನೀನು ಇನ್ನೊಂದು ವಿಪತ್ತಿಗೆ ಗುರಿಯಾಗಲಿರುವೆ; ಅದಕ್ಕೆ ಸಿಕ್ಕಿದ ಮೇಲೆ ನೀನು ಬದುಕಬಹುದೆಂಬ ಭರವಸೆ ಕೊಂಚವಾದರೂ ಇಲ್ಲ.

ಬೀಸಣಿಗೆ ಹಿಡಿದವಳು ಏನುಮಾಡಬೇಕೆಂಬುದನ್ನು ಗೊತ್ತು ಮಾಡಲಾರದೆ ಪುನಃ ಕುಳಿತುಕೊಂಡಳು.

ಅರಿಂದಮ—ನಿನಗೆ ಗೋರಾಚಾಂದ ಎಂಬುವನು ಯಾವನಾದರೂ ಗೊತ್ತಿದೆಯೇ ? ನನಗೆ ಯಾವುದನ್ನೂ ಮರೆಮಾಡಬೇಡ.

ಗೋರಾಚಾಂದನ ಹೆಸರು ಕೇಳಿದ ಕೂಡಲೇ ಆ ಯುವತಿಯ ಮುಖವು ವಿವರ್ಣವಾಯಿತು; ಪುನಃ ಅವಳು ಎದ್ದು ಹೋಗಲು ಪ್ರಯತ್ನಪಟ್ಟಳು. ಅರಿಂದಮನು, ''ಕುಳಿತುಕೋ ತಾಯಿ, ನನ್ನಿಂದ

ನಿನಗೆ ಉಪಕಾರವೇ ಹೊರತು, ಅಪಕಾರವಾಗುವುದಿಲ್ಲ. ಇದು ಖಂಡಿತವೆಂದು ತಿಳಿ. ನನ್ನಲ್ಲಿ ಯಾವುದನ್ನೂ ಮರೆಮಾಚಬೇಡ—ಮರೆಮಾಚುವುದಾದರೆ ನೀನು ಒಳ್ಳೆಯ ಕೆಲಸಮಾಡಿದ ಹಾಗಾಗುವುದಿಲ್ಲ; ನನ್ನನ್ನು ನಂಬು. ಗೋರಾಚಾಂದನನ್ನು ನೀನು ಬಲ್ಲೆಯಷ್ಟೆ?'' ಎಂದು ಕೇಳಿದನು.

ಯುವತಿ—ಬಲ್ಲೆ.

ಅರಿಂದಮ—ಕೇಶವಚಂದ್ರನೆಂಬ ಯಾವನಾದರೂ ಜಮಾನ್‌ದಾರನನ್ನೂ ಬಲ್ಲೆಯಾ? ಎಂದು ಪುನಃ ಕೇಳಿದನು.

ಯುವತಿಯ ಕಾಂತಿಹೀನವಾದ ಮುಖವು ಮತ್ತೂ ಕಳೆಗುಂದಿತು. ಅವಳು ಕಂಪಿತ ಕಂಠದಿಂದ ''ಅವನನ್ನೂ ಬಲ್ಲೆ'' ಎಂದು ಹೇಳಿದಳು.

ಅರಿಂದಮ—''ನೀನು ಇಷ್ಟರಲ್ಲಿಯೇ ಪುನಃ ಅವರ ಕೈಸೇರುವೆ. ನಿಮ್ಮ ಈ ಗೋಸ್ವಾಮಿ ಮಹಾಶಯನೂ ಈ ಪಿತೂರಿಗೆ ಸೇರಿದ್ದಾನೆ; ಗೋರಾಚಾಂದನೆಂಬವನು ನಿನ್ನೆ ಸಂಜೆಯಾದಮೇಲೆ ಇಲ್ಲಿಗೆ ಬಂದು ಗೋಸ್ವಾಮಿ ಮಹಾಶಯನೊಂದಿಗೆ ರಹಸ್ಯವಾಗಿ ಆಲೋಚನೆ ಮಾಡಿಕೊಂಡು ಹೋಗಿರುತ್ತಾನೆ; ಈ ದಿವಸ ರಾತ್ರಿಯೇ ನೀನು ಪುನಃ ಅವರ ಕೈಗೆ ಬೀಳಬೇಕಾಗಿರುತ್ತದೆ. ಈ ಕಾಗದವನ್ನು ಓದಿನೋಡಿದರೆ ನಿನಗೆ ಎಲ್ಲವೂ ವಿದಿತವಾಗುವುದು'' ಎಂದು ಹೇಳಿ, ಕಾಗದವನ್ನು ಯುವತಿಯ ಕೈಗೆ ಕೊಟ್ಟನು. ಅದರಲ್ಲಿ ಹೀಗೆ ಬರೆದಿತ್ತು:—

''ಮಹಾಶಯ,

ತಮಗೆ ನಾನು ಅಪರಿಚಿತನಾಗಿದ್ದರೂ ತಮ್ಮ ವಿಚಾರವಾಗಿ ಗೋರಾಚಾಂದನು ಹೇಳಿದುದನ್ನೆಲ್ಲಾ ಕೇಳಿದ್ದರಿಂದ ತಾವು ಒಬ್ಬ ಮಹಾಪುರುಷರೆಂದೇ ಊಹಿಸುತ್ತೇನೆ. ರೇವತಿಯ ಚಿಕ್ಕಪ್ಪನಾದ ಗೋಪಾಲಚಂದ್ರವಸುವು ರೇವತಿಯನ್ನು ನಿಮಗೆ ಕೊಟ್ಟು ಮದುವೆ ಮಾಡಬೇಕೆಂದು ಸಂಕಲ್ಪಮಾಡಿರುವುದಾಗಿ ಕೇಳುತ್ತೇನೆ. ರೇವತಿಗೇನೋ ಈ ಮದುವೆಯಲ್ಲಿ ಮನಸ್ಸಿಲ್ಲವಂತೆ, ಆದ್ದರಿಂದಲೇ ಈ ಶುಭ

ಮಹೋತ್ಸವವು ನಿರ್ವಿಘ್ನವಾಗಿಯೂ ರಹಸ್ಯವಾಗಿಯೂ ನಡೆಯಬೇಕೆಂದು ಆಲೋಚಿಸಿ ರೇವತಿಯನ್ನು ತಮ್ಮ ತೋಟದ ಮನೆಗೆ ಕಳುಹಿಸಿಕೊಟ್ಟದ್ದರಂತೆ. ತಾವು ಇಲ್ಲದ ಸಮಯದಲ್ಲಿ ರೇವತಿಯು ಅಲ್ಲಿಂದ ಓಡಿಬಂದಿರುವಳು. ಹೆಣ್ಣುಮಕ್ಕಳಿಗೆ ವಯಸ್ಸಾಗುವವರೆಗೆ ಮದುವೆಮಾಡದಿರುವುದೇ ಈ ಎಲ್ಲ ತೊಂದರೆಗೂ ಮುಖ್ಯವಾದ ಕಾರಣ. ಆದಕಾರಣವೇ ನಮ್ಮವರ ಶಾಸ್ತ್ರದಲ್ಲಿ ಹೆಣ್ಣುಮಕ್ಕಳಿಗೆ ಎಷ್ಟು ಚಿಕ್ಕ ವಯಸ್ಸಿನಲ್ಲಿ ಮದುವೆ ಮಾಡಿದರೆ ಅಷ್ಟು ಪುಣ್ಯವೆಂದು ಬರೆದಿದೆ. ವಯಸ್ಸು ಹೆಚ್ಚಿದ ಹಾಗೆಲ್ಲಾ ಹೆಣ್ಣುಮಕ್ಕಳು ತಾವು ತಾವೇ ಗಂಡನನ್ನು ಆರಿಸಿಕೊಳ್ಳುವುದನ್ನು ಕಲಿಯುತ್ತಾರೆ. ಪಾತ್ರಾಪಾತ್ರಗಳ ವಿಚಾರವನ್ನು ತಿಳಿಯಲಾರರು. ತಮ್ಮ ವಿಷಯದಲ್ಲಿ ರೇವತಿಯು ನಮಗೆ ಬಹುವಾಗಿ ಸುಳ್ಳುಮಾತುಗಳನ್ನು ಹೇಳಿದ್ದಳು. ನಾನು ಅವೆಲ್ಲವನ್ನೂ ನಂಬಲಿಲ್ಲ. ಹೇಗಾದರೂ ಆಗಲಿ, ಈ ವಿವಾಹವನ್ನು ಮಾಡಿಯೇ ಮಾಡಬೇಕೆಂಬ ವಿಷಯದಲ್ಲಿ ನನಗೂ ಇಚ್ಛೆಯುಂಟು. ಅಲ್ಲದೆ ನಿಮ್ಮ ಸಂಪತ್ಸಮೃದ್ಧಿಗಳ ವಿಚಾರವಾಗಿ ಗೋರಾಚಾಂದನು ಹೇಳುವುದನ್ನು ಕೇಳಿದರೆ ಇದೆಲ್ಲವೂ ರೇವತಿಯ ಸೌಭಾಗ್ಯವೆಂದೇ ಹೇಳಬೇಕಾಗುತ್ತದೆ. ಈಗ ರೇವತಿ ನನ್ನ ಬಳಿಯಲ್ಲಿದ್ದಾಳೆ; ಗೋರಾಚಾಂದನು ಇನ್ನೂರ ಐವತ್ತು ರೂಪಾಯಿಗಳನ್ನು ಕೊಟ್ಟು ರೇವತಿಯನ್ನು ನನ್ನಿಂದ ಕರೆದುಕೊಂಡು ಹೋಗಬೇಕೆಂದು ಅಪೇಕ್ಷಿಸಿದನು; ಆದರೆ ಮದುವೆ ಮುಂತಾದ ಶುಭಕಾರ್ಯಗಳಲ್ಲಿ ಗುರುದಕ್ಷಿಣೆಯೇ ಮೊದಲಾದ ಕಾರಣಗಳಿಂದ ನನಗೆ ಮೂರು ನಾಲ್ಕು ನೂರು ರೂಪಾಯಿಗಳ ಆದಾಯವುಂಟು; ಅದೂ ಅಲ್ಲದೆ ನಾನು ರೇವತಿಯನ್ನು ಹುಡುಕಿ ಹಿಡಿದು ತಂದಿದ್ದೇನೆ. ಅದಕ್ಕೋಸ್ಕರವಾಗಿ ನಿಮ್ಮಂತಹ ಜಮೀನ್‌ದಾರರಲ್ಲಿ ಇನ್ನೂ ಸ್ವಲ್ಪ ಹೆಚ್ಚಾಗಿಯೇ ದೊರೆಯಬೇಕೆಂದು ಆಶಿಸುತ್ತೇನೆ. ಇದೇನೂ ಅನ್ಯಾಯವಲ್ಲವಲ್ಲ? ಈ ಕಾಗದವನ್ನು ಕಂಡಕೂಡಲೆ ತಾವು ಐದುನೂರು ರೂಪಾಯಿಗಳನ್ನು ಗೋರಾಚಾಂದನ ಕೈಲಿ ಕೊಟ್ಟು ಕಳುಹಿಸಿಕೊಡಿ. ನಾನು ಒಡನೆಯೇ ಅವನೊಡನೆ ರೇವತಿಯನ್ನು ಕಳುಹಿಸಿಕೊಡುತ್ತೇನೆ.

ಇಂತು,

**ಶ್ರೀ ಯದುನಾಥಶರ್ಮ.''**

ಜೀವನಪಾಲನ ತೋಟದಿಂದ, ಮೋಹಿನಿಯ ಸಹಾಯ ಹೊಂದಿ, ದುರಾತ್ಮನಾದ ಕೇಶವಚಂದ್ರನ ದೆಸೆಯಿಂದ ಪಾರಾಗಿ, ಆ ದಿನ ರಾತ್ರಿ ಆ ಬಿರುಗಾಳಿ ಮಳೆಗಳಿಂದ ಕಷ್ಟಪಡುತ್ತಾ, ಗೋಸ್ವಾಮಿಪುರದ ಮಾರ್ಗ ವನ್ನು ತಿಳಿಯುವುದಕ್ಕೋಸ್ಕರ ವಲಾಯಿಮಂಡಲನ ಅಂಗಡಿಯ ಬಳಿಗೆ ಬಂದವಳು ಈ ರೇವತಿಯೇ ಎಂಬುದನ್ನು ಪಾಠಕ ಮಹಾ ಶಯರಿಗೆ ವಿವರಿಸಿ ಹೇಳಬೇಕಾದುದಿಲ್ಲವಷ್ಟೆ; ಮತ್ತೂ ರಕ್ತಕಲೆ ಗಳುಳ್ಳ ಇವಳ ಬಟ್ಟೆಯನ್ನು ನೋಡಿಯೇ ಮಾರನೆಯ ದಿನ ಆ ಊರಿ ನಲ್ಲಿ ಹಾಹಾಕಾರವೆದ್ದುದು. ಅದೇ ದಿನ ರಾತ್ರಿ ರೇವತಿಯು ಹೊರಟು ಬಂದನಂತರ ಸ್ವಲ್ಪ ಹೊತ್ತಿನೊಳಗಾಗಿ ವಲಾಯಿಮಂಡಲನ ಅಂಗಡಿಗೆ ಹೋಗಿ ಯಾವನು ಹುಡುಗಿಯ ವಿಚಾರವಾಗಿ ಪ್ರಶ್ನೆ ಮಾಡಿದನೋ ಮತ್ತೂ ಮಾರನೆಯ ದಿನ ರಾತ್ರಿ ಅರಿಂದಮನನ್ನು ನಿಜನವಾದ ಪ್ರಾಂತರಕ್ಕೆ ಕರೆದುಕೊಂಡು ಹೋಗಿ ಕೊಲ್ಲಬೇಕೆಂದು ಯಾವನು ಪ್ರಯತ್ನಿಸಿದ್ದನೋ ಅವನೇ ಆ ಕೇಶವಚಂದ್ರನ ವಿಶ್ವಾಸಪಾತ್ರನಾದ ಸೇವಕ—ಅವನು ಗೋರಾಚಾಂದನಲ್ಲದೆ ಮತ್ತೆ ಯಾವನೂ ಅಲ್ಲ.

---

## ಹದಿನೆಂಟನೆಯ ಪರಿಚ್ಛೇದ

### ರೇವತಿಯ ಸಂದೇಹ

ಕಾಗದವನ್ನು ಓದಿದ ಕೂಡಲೇ ರೇವತಿಗೆ ತಲೆತಿರುಗುತ್ತಿರುವಂತೆ ತೋರಿತು. ಸರ್ವಾಂಗಗಳೂ ಸ್ವಾಧೀನ ತಪ್ಪಿದುವು. ಶರೀರ ದೊಳಗಿನ ರಕ್ತವೆಲ್ಲವೂ ಹೃತ್ಪಿಂಡದೊಳಕ್ಕೆ ಪ್ರವೇಶಿಸಿ ಅದರಿಂದ ಹೃದಯವು ಬಹು ಭಾರವಾಗಿದೆಯೋ ಎನ್ನುವಂತೆ ತೋರಿತು. "ನಾನು ಇದನ್ನು ಯಾವ ರೀತಿಯಿಂದಲೂ ನಂಬಲಾರೆ" ಎಂಬ ಮಾತು ಅವಳಿಗೆ ತಿಳಿಯದ ಹಾಗೆಯೇ ಅವಳ ಬಾಯಿಂದ ಹೊರಟಿತು.

ಅರಿಂದಮ—ಯದುನಾಥ ಗೋಸ್ವಾಮಿಯ ಕೈಬರಹದೊಡನೆ ಹೋಲಿಸಿ ನೋಡುವುದರಿಂದ ನಂಬುವಂತೆ, ಆದೀಯೆ.

ರೇವತಿ—ನಾನು ಅವರ ಕೈಬರಹವನ್ನು ಬಲ್ಲೆ.

ಅರಿಂದಮ—ಇದು ಅವರ ಕೈಬರಹವಲ್ಲವೇನು?

ರೇವತಿ—ಅವರದೇ ಕೈ ಅಕ್ಷರ; ಈ ರುಜುವು ಕೂಡ ಅವರದೇ. ಗೋಸ್ವಾಮಿ ಮಹಾಶಯನು ನಮಗೆ ಗುರುವಾದವನು. ಸಮಯ ಸಂದರ್ಭಗಳಲ್ಲಿ ನಮ್ಮ ಮನೆಗೆ ಕಾಗದ ಪತ್ರಗಳನ್ನೂ ಬರೆಯುತ್ತಾನೆ. ಆದ್ದರಿಂದ ನಾನು ಆತನ ಕೈ ಅಕ್ಷರವನ್ನೂ ರುಜುವನ್ನೂ ಅನೇಕ ಬಾರಿ ನೋಡಿದ್ದೇನೆ. ನೋಡಿದ ಕೂಡಲೇ ತಿಳಿಯಬಲ್ಲೆ. ತಮಗೆ ಈ ಕಾಗದ ಎಲ್ಲಿ ಸಿಕ್ಕಿತು?

ಅರಿಂದಮ—ನೀನು ನನ್ನನ್ನು ನಂಬುವೆಯಾದರೆ, ಯಾವ ಮಾತನ್ನೂ ಮರೆಮಾಚಬೇಡ; ನೀನು ಯಾರು? ನಿಮ್ಮ ಸ್ಥಳವು ಯಾವುದು, ತಾಯಿತಂದೆಗಳ ಹೆಸರೇನು, ಕೇಶವಬಾಬು ಯಾರು, ಗೋರಾಚಾಂದನು ಯಾರು, ನಿನ್ನ ಈ ದುರವಸ್ಥೆಗೆ ಏನು ಕಾರಣ, ಇವುಗಳ ವಿಚಾರವಾಗಿ ನಿನಗೆ ತಿಳಿದಿರುವ ಮಟ್ಟಿಗೆ, ನಿಷ್ಕಪಟವಾಗಿ ಹೇಳು; ನನ್ನ ದೆಸೆಯಿಂದ ನಿನಗೆ ಯಾವ ಬಗೆಯಾದ ಕೇಡುಕೂ ಆಗುವುದಿಲ್ಲವೆಂದು ತಿಳಿ.

ರೇವತಿ—ತಮಗೆ ಈ ಕಾಗದವು ಎಲ್ಲಿ ಸಿಕ್ಕಿತು?

ಅರಿಂದಮ—ನಿನ್ನೆಯ ರಾತ್ರಿ, ಗೋಸ್ವಾಮಿ ಮಹಾಶಯನೊಂದಿಗೆ ಮಾತು ಕತೆಗಳನ್ನಾಡಿ ಕಾಗದವನ್ನು ತೆಗೆದುಕೊಂಡು ಗೋರಾಚಾಂದನು ಹೊರಗೆ ಹೊರಟುದನ್ನು ಕಂಡು ಆಗ ನಾನು ಈ ಕಾಗದವನ್ನು ಕಿತ್ತುಕೊಳ್ಳಬೇಕೆಂದು ಅವನನ್ನೇ ಹಿಂಬಾಲಿಸಿದೆ. ದಾರಿಯಲ್ಲಿ ಅವನ ಸಂಗಡ ಒಂದೆರಡು ಮಾತುಕತೆಗಳಾದ ಮೇಲೆ ನಿನ್ನ ಪ್ರಸ್ತಾವವನ್ನೆತ್ತಿದೆ. ನಿನ್ನ ಮೃತದೇಹವನ್ನು ತೋರಿಸುವೆನೆಂದು ಹೇಳಿ ಅವನು ನನ್ನನ್ನು ಒಂದು ನಿರ್ಜನವಾದ ಅರಣ್ಯಕ್ಕೆ ಕರೆದುಕೊಂಡು ಹೋಗಿ ಕೊಂದು ಹಾಕೋಣವೆಂದು ಆಲೋಚಿಸಿ ನನ್ನನ್ನು ತನ್ನ ಸಂಗಡ ಬರಬೇಕೆಂದು ಹೇಳಿದನು. ನಾನು ಅವನ ಮನೋಭಿಪ್ರಾಯವನ್ನು ತಿಳಿದೂ ಕೂಡ ಅವನ ಸಂಗಡಲೇ ಹೋದೆ. ಅಲ್ಲಿ, ಆ ವಿಜನಸ್ಥಾನದಲ್ಲಿ,

ನಾನು ಏಕಾಂಗಿಯಾಗಿ ಸಿಕ್ಕಿದುದನ್ನು ಕಂಡು ಅವನು ನನ್ನನ್ನು ಚೂರಿಯಿಂದ ಹೊಡೆಯಬಂದನು. ನಾನು ಅವನನ್ನು ನೆಲಕ್ಕುರುಳಿಸಿ ಅವನ ಎದೆಯಮೇಲೆ ಹತ್ತಿ ಕುಳಿತುಕೊಂಡೆನು. ಆಗ ಅವನಿಗೆ ತಿಳಿಯದ ಹಾಗೆ ಈ ಕಾಗದವನ್ನು ಸಂಗ್ರಹಿಸಿಕೊಂಡು ಅವನನ್ನು ಬಿಟ್ಟುಬಂದೆ.

ರೇವತಿ—(ಸಂದೇಹಿಸುತ್ತ) ನಿಮ್ಮ ಅಭಿಪ್ರಾಯವೇನೋ ಗೊತ್ತಾಗಲಿಲ್ಲ. ಹೇಗಾದರೂ ಆಗಲಿ, ನೀವು ಈ ಎಲ್ಲ ವ್ಯಾಪಾರದಲ್ಲಿಯೂ ಸೇರಿಯೇ ಇದ್ದೀರಲ್ಲವೆ?

ಅರಿಂದಮ—ನಾನು ಒಬ್ಬ ಪೋಲೀಸ್ ನೌಕರ. ನಿನ್ನ ವಿಪತ್ತಿನ ವಿಚಾರವನ್ನು ನಾನು ಊಹೆಯಿಂದ ಕೊಂಚಮಟ್ಟಿಗೆ ತಿಳಿದಿದ್ದೇನೆ. ಸನ್ನಿಹಿತವಾಗಿರುವ ಈ ವಿಪತ್ತಿನಿಂದ ನಿನ್ನನ್ನು ಉಳಿಸುವುದು ಸಾಧ್ಯವಾಗುವುದಾದರೆ ನಾನು ಯಾವ ಉದ್ದೇಶದಿಂದ ಈ ಕೆಲಸಕ್ಕೆ ಕೈ ಹಾಕಿದೆನೋ ಅದು ಬಹುಮಟ್ಟಿಗೆ ಸಫಲವಾದ ಹಾಗೆಯೇ ಸರಿ ಎಂದು ತಿಳಿದಿದ್ದೇನೆ.

ಆ ಸಮಯದಲ್ಲಿ ರೇವತಿಯ ಮನೋಭಾವವು ಹೇಗಿದ್ದಿತೆಂಬುದನ್ನು ಸರಿಯಾಗಿ ವರ್ಣಿಸಿ ಹೇಳುವುದು ಸಾಧ್ಯವಿಲ್ಲ. ಭಯ ಮತ್ತು ವಿಸ್ಮಯ, ಆಸೆ ಮತ್ತು ನಿರಾಶೆ, ಮತ್ತು ಘೋರತರವಾದ ಸಂದೇಹ—ಇವೆಲ್ಲವೂ ಒಂದಾಗಿ ಸೇರಿ ಅವಳ ದುರ್ಬಲ ಹೃದಯವನ್ನು ಕಡೆಯುತ್ತಿದ್ದುವು. ರೇವತಿಯು ಅಸ್ಥಿರಳಾಗಿ, "ನೀವು ಪೋಲೀಸಿನವರಾದರೆ, ಗೋರಾಚಾಂದನನ್ನು ಹಿಡಿದು ಪುನಃ ಬಿಟ್ಟುಬಿಟ್ಟುದೇಕೆ" ಎಂದು ಕೇಳಿದಳು.

ಅರಿಂದಮ—ಬಿಟ್ಟು ಬಂದುದೇನೋ ನಿಜ, ಯಾವ ಸಮಯದಲ್ಲಿ ಬೇಕಾದರೂ ಪುನಃ ಹಿಡಿಯುತ್ತೇನೆ; ಅವನ ಮುಖವನ್ನು ಗುರ್ತಿಸಿ ತಿಳಿದನಂತರ ಅವನು ಸಿಕ್ಕಿಬಿದ್ದ ಹಾಗೆಯೇ. ಬೇಗ ಬೇಗ ಒಬ್ಬೊಬ್ಬ ಮನುಷ್ಯನನ್ನಾಗಿ ಹಿಡಿದು ಹಾಕುವುದು ನನಗೆ ಅಭ್ಯಾಸವಿಲ್ಲ. ಹಾಗೆ ಮಾಡುವುದರಿಂದ ಬೇಗನೆ ತಪ್ಪು ಮಾಡಿದವನು ಸಿಕ್ಕುವುದೂ ನಿಜ. ಬೇಗನೆ ವಿಚಾರಣೆಯಾಗಿ ಅವನಿಗೆ ಯಾವುದಾದರೊಂದು ಶಿಕ್ಷೆಯಾಗುವುದೂ ನಿಜ; ಆ ರೀತಿಯಾಗಿ ಆಗುವ ಶಿಕ್ಷೆಗಳಲ್ಲಿ ಅನೇಕವಾಗಿ

ಅಲ್ಪಾಪರಾಧಕ್ಕೆ ಹೆಚ್ಚು ಶಿಕ್ಷೆಯಾಗುತ್ತದೆ; ಮಹಾಪರಾಧ ಮಾಡಿದವರು ಸಾಧಾರಣವಾಗಿ ದಂಡಿತರಾಗುತ್ತಾರೆ. ಯಾವನನ್ನು ಬಂದಿಯನ್ನಾಗಿ ಮಾಡಿ ವಿಚಾರಾಲಯಕ್ಕೆ ಕಳುಹುತ್ತೇನೆಯೋ ಅವನ ವಿಷಯವಾಗಿ ತಿಳಿಯಬೇಕಾದುದನ್ನೆಲ್ಲಾ ತಿಳಿಯುವತನಕ ನಾನು ಅವನನ್ನು ಹಿಡಿದು ಹಾಕುವುದಿಲ್ಲ. ಅವನು ತನ್ನ ಪಾಪಚರಿತ್ರೆಯನ್ನೂ ತನ್ನ ಸ್ವಭಾವ ಚರಿತ್ರೆಯನ್ನೂ ತಾನು ಹೇಗೆ ತಿಳಿದಿದ್ದಾನೆಯೋ ಹಾಗೆಯೇ ನಾನೂ ಅವೆಲ್ಲವನ್ನೂ ಅವನ ಹಾಗೆಯೇ ಸಂಪೂರ್ಣವಾಗಿ ತಿಳಿಯಬೇಕು. ಅವನನ್ನು ಬಿಟ್ಟುಬಂದ ಕಾರಣದಿಂದ ನೀನು ನನ್ನ ವಿಚಾರವಾಗಿ ಸಂದೇಹಪಡುತ್ತಿರುವೆ ಎಂದು ತೋರುತ್ತದೆ. ಈಗಲೂ ಹೇಳುತ್ತೇನೆ, ಇದರಿಂದ ನಿನಗೆ ಒಳ್ಳೆಯದಾಗುವುದಿಲ್ಲ. ನನ್ನನ್ನು ನಂಬುವುದಾದರೆ—ಯಾವುದೊಂದು ಮಾತನ್ನೂ ನನಗೆ ಮರೆಮಾಚಬೇಡ. ನೀನು ಯಾರು, ನಿಮ್ಮ ಸ್ಥಳ ಯಾವುದು, ನಿಮ್ಮ ತಂದೆಯ ಹೆಸರೇನು, ನಿನ್ನ ಈ ದುರವಸ್ಥೆಗೆ ಕಾರಣವಾದರೂ ಏನು, ಇವೆಲ್ಲವುಗಳ ವಿಚಾರವಾಗಿ ನಿನಗೆ ತಿಳಿದಿರುವುದೆಲ್ಲವನ್ನೂ ನನಗೆ ನಿಷ್ಕಪಟಭಾವದಿಂದ ಹೇಳು; ನಾನು ಸಾರಿ ಸಾರಿ ಹೇಳುತ್ತೇನೆ. ನನ್ನ ದೆಸೆಯಿಂದ ನಿನಗೆ ಕೆಡಕಾಗುವುದಿಲ್ಲ.

---

## ಹತ್ತೊಂಭತ್ತನೆಯ ಪರಿಚ್ಛೇದ

### ರೇವತಿಯ ಹೇಳಿಕೆ

ರೇವತಿ ಹೇಳತೊಡಗಿದಳು. ನಮ್ಮ ಸ್ಥಳವು ವೇಣೀಮಾಧವಪುರ. ನಮ್ಮ ತಂದೆಯ ಹೆಸರು ಜಾನಕೀನಾಥ ವಸು. ಆತನು ಮೃತಿ ಹೊಂದಿ ಸುಮಾರು ಎರಡು ವರ್ಷಗಳಾಗಿರಬಹುದು. ತಂದೆಯು ಮೃತನಾದ ನಂತರ, ಸುಮಾರು ಒಂದು ವರ್ಷದ ಹಿಂದೆ, ತಾಯಿ ಸತ್ತುಹೋದಳು. ನನಗೆ ಒಬ್ಬಳು ತಂಗಿ ಇದ್ದಾಳೆ, ಅವಳ ಹೆಸರು ರೋಹಿಣೀ. ನಾವಿಬ್ಬರು ಸಹೋದರಿಯರೂ ಚಿಕ್ಕಪ್ಪನ ಹತ್ತಿರ

ಗಲ್ಲಿದ್ದೆವು. ಚಿಕ್ಕಪ್ಪನ ಹೆಸರು ಗೋಪಾಲಚಂದ್ರ ವಸು. ಚಿಕ್ಕಪ್ಪನ ಸ್ಥಿತಿಗತಿಗಳು ಅಷ್ಟೇನೂ ಚೆನ್ನಾಗಿರಲಿಲ್ಲ. ಅವನು ಒಂದು ಸಲ ನಮ್ಮ ತಂದೆಯ ಮೇಲೆ ವ್ಯಾಜ್ಯವನ್ನು ಹೂಡಿ ತನ್ನ ಆಸ್ತಿಯನ್ನೆಲ್ಲಾ ಹಾಳು ಮಾಡಿಕೊಂಡನೆಂದು ಕೇಳಿದ್ದೇನೆ. ಅನಂತರ ನಮ್ಮ ತಂದೆಯು ಅವನನ್ನು ಕರೆಯಿಸಿ ತನ್ನ ಜಮೀನ್‌ದಾರಿಯಲ್ಲಿ ಅವನಿಗೆ ಕಾಲು ಭಾಗವನ್ನು ಕೊಟ್ಟನು. ಅಲ್ಲಿಂದೀಚೆಗೆ, ನಮ್ಮ ತಂದೆಗೂ ಚಿಕ್ಕಪ್ಪನಿಗೂ ಇದ್ದ ಮನೋಮಾಲಿನ್ಯವು ತೊಡೆದುಹೋಯಿತು. ತಂದೆಯು ಮೃತನಾದ ಮೊದಲು ಈ ಎರಡು ವರ್ಷಗಳವರೆಗೂ ನಮ್ಮ ಚಿಕ್ಕಪ್ಪನೇ ತಂದೆಯ ಜಮೀನ್‌ದಾರಿಯ ಎಲ್ಲ ಕಾರುಬಾರುಗಳನ್ನೂ ನೋಡಿಕೊಳ್ಳುತ್ತಾ ಬಂದನು. ನಮ್ಮ ಚಿಕ್ಕಪ್ಪನಿಗೆ ಮಕ್ಕಳು ಮರಿಗಳೇನೂ ಇಲ್ಲ. ನಮ್ಮ ಚಿಕ್ಕಪ್ಪನೂ ಮತ್ತೂ ಚಿಕ್ಕಮ್ಮನೂ ನಮ್ಮನ್ನು ತಾಯಿತಂದೆಗಳಿಗಿಂತ ಹೆಚ್ಚಾಗಿ ಪ್ರೀತಿಸುತ್ತಿದ್ದರು. ನನಗೋಸ್ಕರವಾಗಿ ನಮ್ಮ ಚಿಕ್ಕಪ್ಪನು ಈಗ ಎಷ್ಟೊಂದು ಅನಾಹುತ ನಡಿಸುವನೋ ತಿಳಿಯದು. ನೀವು ನನ್ನನ್ನು ಹೇಗಾದರೂ ಮಾಡಿ ನಮ್ಮ ಚಿಕ್ಕಪ್ಪನ ಬಳಿಗೆ ಕಳುಹಿಸಿದರೆ ನನಗೆ ತುಂಬ ಉಪಕಾರ ಮಾಡಿದ ಹಾಗಾಗುತ್ತದೆ.

ಅರಿಂದಮ—ಆ ಮಾತು ಆಮೇಲಾಗಲಿ. ಈಗ ನಿನ್ನ ದುರವಸ್ಥೆಯ ಕಾರಣವೇನೋ ಹೇಳು. ನಾನು ಅದಕ್ಕೇನಾದರೂ ಪ್ರತೀಕಾರ ಮಾಡಬಹುದೋ ಏನೋ ನೋಡೋಣ.

ರೇವತಿ—ಈಚೀಚಿಗೆ ಕೇಶವಚಂದ್ರನೆಂಬವನು ನಮ್ಮ ಚಿಕ್ಕಪ್ಪನನ್ನು ನಿತ್ಯವೂ ನೋಡುವುದಕ್ಕೆ ಬರುತ್ತಿದ್ದನು. ಇದಕ್ಕೆ ಮೊದಲು ಆತನನ್ನು ಎಂದೂ ನೋಡಿದ್ದಿಲ್ಲ. ಮನುಷ್ಯನು ಬಹು ಮಿಷ್ಟಭಾಷಿ, ಚಿಕ್ಕಪ್ಪನಿಗೂ ಆತನಿಗೂ ತುಂಬ ಮೈತ್ರಿಯುಂಟಾಯಿತು. ಎಂದಾದರೊಂದು ದಿನ ಅವನು ಬರುವುದು ತಡವಾದರೆ ನಮ್ಮ ಚಿಕ್ಕಪ್ಪನು ಅವನಿಗೆ ಹೇಳಿ ಕಳುಹಿಸುತ್ತಿದ್ದನು. ಅವನು ಬಂದನೆಂದರೆ ಒಂದೊಂದು ಸಲ ಅವನೊಡನೆ ಮಾತುಕತೆಗಳಾಡುತ್ತಿದ್ದನು. ಒಂದೊಂದು ಸಲ ಪಗಡೆಯಾಡುವನು. ಕೆಲವು ಸಮಯದಲ್ಲಿ ಗಾಳಿಸವಾರಿ ಹೋಗು

ವನು. ಕೇಶವಚಂದ್ರನು ಎಂದಾದರೂ ಬರದೆ ಇದ್ದರೆ ಆ ದಿವಸ ಚಿಕ್ಕಪ್ಪನು ತುಂಬಾ ಬೇಸರದಿಂದಿರುತ್ತಿದ್ದನು. ಕೇಶವಚಂದ್ರನೂ ಸಹ, ನಮ್ಮ ಚಿಕ್ಕಪ್ಪನ ಹಾಗೆಯೇ, ನಮ್ಮನ್ನು ವಿಶ್ವಾಸದಿಂದ ಕಾಣುತ್ತಿದ್ದನು; ಆದರೆ ಅವನು ಮನುಷ್ಯನಲ್ಲ, ಪಿಶಾಚ. ಅವನ ಮನೋಭಾವವು ಬೇರೇ ತರಹೆಯದು. ಇಂದಿಗೆ ಏಳು ದಿನಗಳಾದುವು, ಯಾವುದೋ ಔಷಧದ ಸಹಾಯದಿಂದ ನನಗೆ ಜ್ಞಾನವಿಲ್ಲದ ಹಾಗೆ ಮಾಡಿ, ಕದ್ದುಕೊಂಡು ಬಂದಿರುವನು. ನನಗೆ ಪ್ರಜ್ಞೆಬಂದಾಗ, ಏನೂ ತಿಳಿಯಲಾಗಲಿಲ್ಲ. ತಲೆಯಲ್ಲಿ ತುಂಬ ಬಾಧೆಯಾಗುತ್ತಲಿದ್ದಿತು. ನನ್ನ ಶರೀರವೆಲ್ಲವೂ ಸ್ವಾಧೀನ ತಪ್ಪಿದಹಾಗಿದ್ದಿತು; ಹೆಚ್ಚು ಹೇಳುವುದೇನು, ಕಣ್ಣು ತೆರೆದು ಚೆನ್ನಾಗಿ ನೋಡುವುದೂ ಕಷ್ಟವೆಂದು ತೋರುತ್ತಿದ್ದಿತು. ನನಗೆ ಎಚ್ಚರವಾದಾಗ, ನಾನು ದೋಣಿಯಲ್ಲಿದ್ದೆನು. ದೋಣಿಯು ಗಂಗಾನದಿಯ ಒಂದು ತೀರಕ್ಕೆ ಸೇರಿ ನಿಂತಿದ್ದಿತು. ಆ ಕಡೆ ಭಯಂಕರವಾದ ಅರಣ್ಯ; ಅಂತಹ ಅರಣ್ಯವನ್ನು ನಾನು ಎಂದೂ ನೋಡಿದ್ದೇ ಇಲ್ಲ. ದೋಣಿಯ ಮೇಲೆ ಕೇಶವಚಂದ್ರ ಮತ್ತೂ ನಾಲ್ಕಾರು ಜನ ಅಂಬಿಗರು. ಅವರು ಹೊಗೆಸೊಪ್ಪು ಅಗಿಯುತ್ತಿದ್ದರು ಮತ್ತೂ ಏನೇನೋ ಮಾತನಾಡಿಕೊಳ್ಳುತ್ತಿದ್ದರು. ಆಗ ನನಗೆಲ್ಲವೂ ಕನಸಿನಂತೆ ಕಾಣುತ್ತಿದ್ದಿತು. ಯಾವುದನ್ನೂ ಸರಿಯಾಗಿ ತಿಳಿಯಲಾಗಲಿಲ್ಲ. ತಲೆ ಮತ್ತಷ್ಟು ಭಾರವಾಗುತ್ತ ಬಂದಿತು. ತೀರದಲ್ಲಿ ಒಬ್ಬ ಮನುಷ್ಯ ನಿಂತುಕೊಂಡಿದ್ದನು. ಅವನೇ ಆ ಗೋರಾಚಾಂದ, ಅವನನ್ನು ನಾನು ಹಿಂದೆ ಎಂದೂ ಕಂಡಿದ್ದಿಲ್ಲ. ಅವನು "ಇವಳನ್ನು ಕರೆದುಕೊಂಡು ಹೋಗಲೇನು? ಇವಳಿಗೆ ಪ್ರಜ್ಞೆ ಬಂದಿರುವಂತೆ ಕಾಣುತ್ತದೆ" ಎಂದು ಕೇಳಿದನು. ಅವನ ಕಠೋರಸ್ವರವು ಸ್ವಾಧೀನ ತಪ್ಪಿದ್ದ ನನ್ನ ಕಿವಿಗೆ ಮತ್ತಷ್ಟು ಕರ್ಕಶವಾಗಿ ತೋರಿತು; ನನಗೆ ತುಂಬ ಭಯವಾಯಿತು. ಮುಖ್ಯವಾಗಿ, ದಸ್ಯುವಿನಹಾಗಿರುವ ಅವನ ವಿಕಾರವಾದ ಆಕಾರವನ್ನು ಕಂಡು ಭಯದಿಂದ ಪ್ರಾಣವೇ ಹಾರಿ ಹೋಗುವ ಹಾಗಾಯಿತು. ನಾನು ಚೀತ್ಕಾರ ಮಾಡುತ್ತ ಅಳುವುದಕ್ಕೆ

ಮೊದಲಿಟ್ಟೆನು.—ಆದರೆ ಸಾಧ್ಯವಾಗಲಿಲ್ಲ; ಬಹುವಾಗಿ ಅಶಕ್ತಳಾಗಿ ಬಿದ್ದಿದ್ದೆನು. ಏಳುವುದಕ್ಕೆ ಪ್ರಯತ್ನಪಟ್ಟಾಗ ಎದೆಯಲ್ಲಿ ನೋವಾಯಿತು; ಏಳುವುದಕ್ಕೆ ಆಗಲಿಲ್ಲ. ಆಗ ಕೇಶವಚಂದ್ರನು ಅವಸರವಸರವಾಗಿ ಬಂದು ನನ್ನ ಮೂಗಿನ ಹತ್ತಿರ ಒಂದು ಕರವಸ್ತ್ರವನ್ನು ಒತ್ತಿಹಿಡಿದನು. ತಲೆಯಮೇಲೆ ಸಿಡಿಲುಬಿದ್ದ ಹಾಗಾಯಿತು; ಪುನಃ ನನಗೆ ಪ್ರಜ್ಞೆ ತಪ್ಪಿತು. ಆಮೇಲೆ ನನಗೆ ಎಚ್ಚರವಾದಾಗ ಆ ಗಂಗೆ ಇಲ್ಲ, ಆ ವನವಿಲ್ಲ, ದೋಣಿಯಿಲ್ಲ, ದೋಣಿ ನಡೆಸುವವರು ಯಾರೂ ಇಲ್ಲ. ನಾನು ದಟ್ಟವಾದ ಅರಣ್ಯಮಧ್ಯದಲ್ಲಿ ದುರ್ಗಂಧಪೂರ್ಣವಾದ ಒಂದು ಕೊಠಡಿಯೊಳಗೆ ಒಬ್ಬಳೇ ಬಿದ್ದಿದ್ದೆನು. ಕೊಠಡಿಯ ಬಾಗಿಲಿಗೆ ಹೊರಗಡೆ ಬೀಗ ಹಾಕಿತ್ತು. ಹೊರಗೆ ಹೋಗುವುದಕ್ಕೆ ಮತ್ತಾವ ಮಾರ್ಗವೂ ಇರಲಿಲ್ಲ. ಅನಂತರ ಕೇಶವಚಂದ್ರನು ಪ್ರತಿನಿತ್ಯವೂ ಒಂದೊಂದುಸಲ ಬಂದು ನನ್ನನ್ನು ನೋಡಿಕೊಂಡು ಹೋಗಲು ಉಪಕ್ರಮಿಸಿದನು. ನನ್ನನ್ನು ಮದುವೆಮಾಡಿಕೊಳ್ಳುವುದಕ್ಕಾಗಿಯೇ ತಾನು ಈ ಕೆಲಸ ಮಾಡಿರುವದಾಗಿ ಒಂದುದಿನ ತಾನಾಗಿ ಹೇಳಿದನು; ನಾನು ಆ ಪಾಪಿಷ್ಠನ ಮಾತಿಗೆ ಸಮ್ಮತಳಾಗಲಿಲ್ಲ. ಅದಕ್ಕಾಗಿ ಆ ಪಿಶಾಚನು ನನ್ನನ್ನು ಬಹಳ ಭಯಗೊಳಿಸಿದನು. ಒಂದೊಂದು ಸಲ ಚೂರಿಯನ್ನೆತ್ತಿಕೊಂಡು ಕೊಲ್ಲುವುದಕ್ಕೆ ಬಂದನು. ನಾನು ಯಾವುದಕ್ಕೂ ಗಮನ ಕೊಡಲಿಲ್ಲ—ಮತರಿಂದಲೂ ಸಮ್ಮತಳಾಗಲಿಲ್ಲ. ಅಂತಹ ಪಾಪಿಷ್ಠನಿಗೆ ಹೆಂಡತಿಯಾಗಿ ಜೀವಿಸಿರುವವರಿಗೂ ಮರಣ ಸಂಕಟಪಡುವುದಕ್ಕಿಂತ, ಅವನ ಹರಿತವಾದ ಚೂರಿಗೆ ಸಿಕ್ಕಿ; ಅರಿಗಳಿಗೆಯೊಳಗಾಗಿ ಸಾಯುವುದೇ ಶ್ರೇಯಸ್ಕರವೆಂದು ತೋರಿತು. ನನ್ನನ್ನು ನೋಡಿಕೊಳ್ಳುವ ಕೆಲಸವು ಗೋರಾಚಾಂದನಿಗೆ ಸೇರಿದ್ದಾಗಿತ್ತು. ಅವನು ಆ ನರಪಿಶಾಚನ ಆಪ್ತ ಸೇವಕ. ಕಡೆಗೆ ಒಬ್ಬ ಹೆಂಗಸು ನನ್ನನ್ನು ಬಿಡಿಸಿದಳು. ಅವಳು ಕೇಶವಚಂದ್ರನ ಹೆಂಡತಿಯೆಂದು ಕೇಳಿದೆ; ನಾನು ಇಲ್ಲಿಗೆ ಬರುವುದಕ್ಕೆ ದಾರಿ ತೋರಿಸಿದವಳು ಅವಳೇ. ವಿಸ್ತಾರವಾದೊಂದು ವನಪ್ರದೇಶವನ್ನು ದಾಟಿ ನಾನು ಈ ಗ್ರಾಮಕ್ಕೆ ಬಂದೆ. ಆಗ ಭಯಂಕರವಾದ ಬಿರುಗಾಳಿಯೊಡನೆ ಸೇರಿದ ಮಳೆ ಸುರಿಯುತ್ತಲೇ ಇದ್ದಿತು. ಈ ಪ್ರಾಂತದಲ್ಲಿನ ಗೋಸಾಯಿಪುರದ

ನಮ್ಮ ಗುರುವಾದ ಈ ಗೋಸ್ವಾಮಿಯವರ ಆಶ್ರಯಹೊಂದೋಣ ವೆಂದು ಭಾವಿಸಿ ಈ ಸ್ಥಳದ ಒಂದು ಚಿಲ್ಲರೆ ಅಂಗಡಿಗೆ ಬಂದು ಗೋಸಾಯಿ ಪುರದ ದಾರಿಕೇಳಿ ತಿಳಿದುಕೊಂಡೆನು. ಆ ಸ್ಥಳದಲ್ಲಿ ಇನ್ನೂ ಕೆಲವರು ಸೇರಿ ಇಸ್ಪೀಟಾಡುತ್ತಲಿದ್ದರು ; ಅವರು ಒಂದು ಕಾಲುವೆಯ ಮಾರ್ಗ ವಾಗಿ ಹೋಗಬೇಕೆಂದು ನನಗೆ ಹೇಳಿದರು. ನಾನು ಪುನಃ ಹೊರಟೆನು. ನಾನು ಕಾಲುವೆಯ ಮಾರ್ಗವಾಗಿ ಹೋಗುತ್ತಿರುವಾಗ ಹಿಂದು ಗಡೆ ಯಾರೋ ನಡೆದುಬರುವ ಸದ್ದು ಕೇಳಿಸಿತು. ಮೊದಲು ವನಪ್ರದೇಶ ವನ್ನು ಬಿಟ್ಟು ಪ್ರಾಂತರಕ್ಕೆ ಬಂದಾಗ್ಗೆ ದಾರಿಯಲ್ಲಿ ಗೋರಾಚಾಂದನು ನನ್ನನ್ನು ಹುಡುಕುತ್ತಾ ಬರುತ್ತಿರುವುದನ್ನು ನೋಡಿದೆ. ಆಗ ನಾನು ಒಂದು ಮರದ ಮರೆಯಲ್ಲಿ ಬಚ್ಚಿಟ್ಟುಕೊಂಡೆನು, ಅವನು ನನ್ನನ್ನು ನೋಡಲಿಲ್ಲ, ಅವನು ಮತ್ತೊಂದುಕಡೆ ಹೊರಟುಹೋದನು. ನಾನು ಪ್ರಾಂತರದ ಮಧ್ಯಭಾಗದಲ್ಲಿ ಹೊರಟು, ಆ ಬಿರುಗಾಳಿ ಮಳೆಗಳಲ್ಲಿ ತೊಳಲುತ್ತಾ ಈ ಗ್ರಾಮಕ್ಕೆ ಬಂದು ಬಿದ್ದೆ; ಕಾಲುವೆಯ ಹತ್ತಿರ ಬಂದಾಗ ಕೇಳಿಸಿದ ಹೆಜ್ಜೆಯ ಸದ್ದು ಗೋರಾಚಾಂದನದೇ ಆಗಿರಬಹು ದೆಂದು ತೋರಿ ತುಂಬ ಭಯವಾಯಿತು. ಆಗ ನಾನು ಪ್ರಾಣಭಯ ದಿಂದ ಓಡಿದೆನು ; ಆ ಸಮಯದಲ್ಲಿ ನನ್ನ ಸೆರಗನ್ನು ಎಳೆದ ಹಾಗಾಯಿತು ; ಪುನಃ ಗೋರಾಚಾಂದನಿಗೆ ಸಿಕ್ಕಿಬಿದ್ದೆನೆಂದು ಭಾವಿಸಿ, ಭಯಪಟ್ಟು ಆತ್ಮಬಿಟ್ಟೆನು, ನೆಲಕ್ಕೆ ಉರುಳಿ ಬಿದ್ದೆನು. ಆ ಸಮಯದಲ್ಲಿ ಯಾರೋ ಬಂದು ನನ್ನನ್ನು ಹಿಡಿದೆತ್ತಿದರು. ಮಿಂಚಿನ ಬೆಳಕಿನಲ್ಲಿ ಆತನನ್ನು ಗುರ್ತಿ ಸಿದೆ. ಆತನೇ ರಘುನಾಥಗೋಸ್ವಾಮಿ. ಸ್ವಲ್ಪ ಧೈರ್ಯವಾಯಿತು. ನೋಡಿದೆ ಯಾರೂ ನನ್ನ ಸೆರಗನ್ನು ಹಿಡಿದುಕೊಂಡಿರಲಿಲ್ಲ. ಮುಳ್ಳಿನ ಗಿಡವೊಂದಕ್ಕೆ ಸೆರಗು ತಗಲಿಕೊಂಡಿತ್ತು ; ನಾನು ಕೇಳಿದ್ದ ಪದಶಬ್ದವೂ ಗೋಸ್ವಾಮಿ ಮಹಾಶಯನದೇ. ಬಿದ್ದು ಹೋದ್ದರಿಂದ ನನ್ನ ಕೆನ್ನೆ ಯಲ್ಲಿ ಒಂದುಕಡೆ ಗಾಯವಾಗಿತ್ತು; ಆ ಗಾಯದಲ್ಲಿ ರಕ್ತವು ಹರಿಯು ತಿದ್ದಿತು. ಗೋಸ್ವಾಮಿ ಮಹಾಶಯನಿಗೆ ಎಲ್ಲ ವಿಚಾರವನ್ನೂ ವಿವರ ವಾಗಿ ಹೇಳಿದೆನು. ಎರಡು ಮೂರು ದಿನಗಳ ಮಟ್ಟಿಗೆ ನನ್ನನ್ನು ರಹಸ್ಯವಾಗಿಟ್ಟಿರಬೇಕೆಂದು ಆತನನ್ನು ಬೇಡಿಕೊಂಡೆನು ; ಆತನು ಒಪ್ಪಿ

ಹಾಗೆಯೇ ಹಾಸುಗೆ ಹಿಡಿದು ಮಲಗಿದನು. ಎಂತಹ ಡಾಕ್ಟರರೂ, ಎಂತಹ ಪಂಡಿತರೂ ಅದು ಇಂತಹ ರೋಗವೆಂದು ಗೊತ್ತುಮಾಡಲಾರದೇ ಹೋದರು. ತಂದೆ ಸುಮಾರು ಆರುತಿಂಗಳವರೆಗೆ ನರಳುತ್ತಿದ್ದು ಬರುಬರುತ್ತ ಮತ್ತೂ ದುರ್ಬಲನಾದನು. ಅದು ಯಾವ ರೋಗವೋ ಯಾರೂ ನಿಶ್ಚಯ ಮಾಡಲಿಲ್ಲ ಆದ್ದರಿಂದ ಔಷಧೋಪಚಾರಗಳೂ ಅಷ್ಟಾಗಿ ನಡೆಯಲಿಲ್ಲ. ತಂದೆಯು ಅಕಾಲದಲ್ಲಿ ನಮ್ಮೆಲ್ಲರನ್ನೂ ಬಿಟ್ಟು ಹೋದನು.

ಅರಿಂದಮ—ನಿಮ್ಮ ಚಿಕ್ಕಪ್ಪನು ನಿನ್ನ ಮದುವೆಯ ವಿಚಾರವಾಗಿ ಇಷ್ಟು ದಿನ ಉದಾಸೀನನಾಗಿ ಇದ್ದುದೇಕೆ?

ರೇವತಿ—ಆತನು ಜಮೀನ್‍ದಾರಿಯ ಕೆಲಸಕಾರ್ಯಗಳಲ್ಲಿ ನಿರತನಾಗಿಬಿಟ್ಟಿದ್ದನು. ಬಹುಮಟ್ಟಿಗೆ ಅವನಿಗೆ ಊಟ ಉಪಚಾರಗಳಿಗೂ ಅವಕಾಶ ಸಿಗುತ್ತಿರಲಿಲ್ಲ.

ಅರಿಂದಮ—ಅವನು ಕೇಶವಚಂದ್ರನ ಜತೆಯಲ್ಲಿ ಸದಾ ಮಾತನಾಡುತ್ತಿದ್ದ, ಪಗಡೆಯಾಡುತ್ತಿದ್ದ, ಇಸ್ಪೀಟಾಡುತಲಿದ್ದ, ಗಾಳಿಸವಾರಿಗಾಗಿ ಹೊರಗೆ ಹೊರಡುತ್ತಿದ್ದ ಎಂದು ಈಗತಾನೇ ಹೇಳಿದೆಯಲ್ಲ, ನೀನು ಹೇಳುವಂತೆ ನಿನ್ನ ವಿಚಾರದಲ್ಲಿ ಆತನಿಗೆ ಅಷ್ಟರ ಪ್ರೀತಿ ವಿಶ್ವಾಸಗಳಿರುತ್ತಿದ್ದ ಪಕ್ಷದಲ್ಲಿ ಆತನು ನಿನ್ನ ಮದುವೆಯ ಯಾವುದೊಂದು ಪ್ರಯತ್ನವನ್ನೂ ಮಾಡದೆ ಪಗಡೆ, ಇಸ್ಪೀಟು, ಹರಟೆ, ಗಾಳಿಸವಾರಿ ಮೊದಲಾದುವೆಲ್ಲ ಹಾಗಿರಲಿ, ಹೇಗೆತಾನೆ ಸ್ನಾನ ಭೋಜನಗಳನ್ನು ಮಾಡುತ್ತಿದ್ದನೋ ತಿಳಿಯದು. ನಿಮ್ಮ ಚಿಕ್ಕಪ್ಪ, ನಿನಗೆ ಮದುವೆ ಮಾಡಿ ನಿನ್ನನ್ನು ಕಂಡವರ ಮನೆಗೆ ಕಳುಹಿಸಿಕೊಟ್ಟು ಹೇಗೆತಾನೆ ಪ್ರಾಣದಿಂದಿರುವುದು ಎಂದು ಶಂಕಿತನಾಗಿರುವಮಟ್ಟಿಗೆ ನಿನ್ನಲ್ಲಿ ಪ್ರೀತಿಯುಳ್ಳವನಾಗಿರುವನು ಎಂದು ಭಾವಿಸುತ್ತೇನೆ.

ರೇವತಿಯು ಅವನ ಮಾತಿನ ಅಭಿಪ್ರಾಯವನ್ನು ತಿಳಿಯಲಾರದೇ ಹೋದಳು. ಆಗ ಅರಿಂದಮನು ರೇವತಿಯು ಏನೇನು ಮಾಡಬೇಕೋ ಅದೆಲ್ಲವನ್ನೂ ಹೇಳಿಕೊಟ್ಟನು. ನಾಲ್ಕೂಕಡೆ ಮುತ್ತಿ ಬರುತ್ತಿರುವ

ಈ ವಿಪತ್ತಿನಿಂದ ಅವಳನ್ನು ಯಾವ ಕೌಶಲದಿಂದ ಬದುಕಿಸಬೇಕೆಂದಿರು ವನೋ ಅದನ್ನೂ ಹೇಳಿದನು. ಮತ್ತೂ ಈ ಸಂಬಂಧವಾಗಿ ಬಹುಕಾಲ ಆಲೋಚನೆ ಮಾಡಿ ನಿಶ್ಚಿತವಾದ ವಿಚಾರದಿಂದ ರೇವತಿಯು ಬಹು ಮಟ್ಟಿಗೆ ಶಾಂತಿಲಾಭಗೊಂಡಳು ; ರೇವತಿಯು ಕಣ್ಣಿನ ಒಂದು ಪರೆಯು ಸರಿದು ಹೋದಂತಾಯಿತು.

---

## ಇಪ್ಪತ್ತನೆಯ ಪರಿಚ್ಛೇದ

### ಸಾಫಲ್ಯ

ವೃದ್ಧನು ಬಾಯಾರಿಕೆಯಿಂದ ಮೃತಪ್ರಾಯನಾಗಿರುವುದನ್ನು ನೋಡಿ ನೀರು ತರುವುದಕ್ಕೆಂದು ಹೋದ ಆ ಬ್ರಾಹ್ಮಣಿಯು ಬಹು ವರೆಗೂ ಹಿಂದಿರುಗಿ ಬರಲಿಲ್ಲ—ಕಾರಣವೇನು? ಬ್ರಾಹ್ಮಣಿಯು ನೀರ ನ್ನೆತ್ತಿಕೊಂಡುಬಂದಾಗ, ರೇವತಿಯೂ ಅರಿಂದಮನೂ ಪರಸ್ಪರ ಮಾತ ನಾಡುತ್ತಿರುವುದನ್ನು ಕೇಳಿ, ಆ ಕೊಠಡಿಯೊಳಕ್ಕೆ ಪುನಃ ಪ್ರವೇಶಿಸಲಿಲ್ಲ. ನೀರಿನ ಪಾತ್ರೆಯನ್ನು ಕೈಯಲ್ಲಿ ಹಿಡಿದುಕೊಂಡು ಹೊರಗಡೆಯೇ ನಿಂತುಕೊಂಡು ಅವರುಗಳ ಮಾತು ಕಥೆಗಳನ್ನು ಒಂದೇ ಮನಸ್ಸಿನಿಂದ ಕೇಳತೊಡಗಿದಳು. ಅವಳು ಕೇಳುತ್ತಿದ್ದ ಹಾಗೆಯೇ ನೀರುತುಂಬಿದ್ದ ಪಾತ್ರೆಯು ಅವಳ ಕೈಯಲ್ಲಿ ಥರಥರನೆ ನಡುಗಲು ಉಪಕ್ರಮಿಸಿತು. ಯುವರಾಜನು ಮನೆಯಲ್ಲಿಲ್ಲ, ತಾನು ಒಬ್ಬಂಟಿಗಳು, ಏನುಮಾಡ ಲಾದೀತು ; ಎಷ್ಟು ಆಲೋಚಿಸಿದರೂ ಏನೂ ತೋರದೆ ಹೋಯಿತು. ಹೆಂಗಸರ ಮನಸ್ಸು ಬಹು ಕುತೂಹಲಪ್ರಿಯವಾದದ್ದು. ಕುತೂಹಲ ಗೊಂಡ ಮನಸ್ಸು ಹೇಳಿತು, "ಮೊದಲು ಕೇಳಿದ್ದಾಗಲಿ, ಆಮೇಲೆ ಏನುಮಾಡಬೇಕೋ ಅದನ್ನು ಮಾಡೋಣ; ಅಷ್ಟರೊಳಗಾಗಿ ಅವರು ಬಂದು ಬಿಟ್ಟರೆ ಅವರೇ ಬೇಕಾದ್ದನ್ನು ಮಾಡುತ್ತಾರೆ. ಈಗ ಅದೇನು ಮಾತೋ-ಕೇಳಬಾರದೆ" ಎಂದು. ಬ್ರಾಹ್ಮಣಿಯು ಸ್ಥಿರಮನಸ್ಸಿನಿಂದ ಕೇಳುತ್ತಿದ್ದಳು. ಕೆಲವು ಮಾತು ಕೇಳಿಸಿದುವು. ಕೆಲವು ಕೇಳಲಿಲ್ಲ;

ಕೇಳಿಸಿದ್ದರಲ್ಲಿ ಕೂಡ ಆಕೆಗೆ ಕೆಲವು ಅರ್ಥವಾಯಿತು, ಕೆಲವು ತಿಳಿಯಲೇ ಇಲ್ಲ.

ಅನಂತರ ಅವರು ಬಹು ಮೆಲ್ಲಗೆ ಮಾತನಾಡುತ್ತಾ ಇದ್ದು ಮಾಡಿ ಕೊಂಡ ಪರಾಮರ್ಶೆಗಳು ನಮಗೇ ಕೇಳಿಸದಿರುವಾಗ ಆ ಬ್ರಾಹ್ಮಣಿಯ ಕಿವಿಗೆ ಹೇಗೆ ಕೇಳಿಸಬೇಕು? ಸುಮ್ಮನೆ ಕಿಟಕಿಯ ಸಂದಿನಲ್ಲಿ ಬ್ರಾಹ್ಮಣಿಯ ಕಣ್ಣುಗಳು ಅತ್ಯಾತುರದಿಂದ, ಆ ಸಮಯದಲ್ಲಿ, ರೇವತಿಯ ಮುಖ ಭಾವವು ಕ್ಷಣೇಕ್ಷಣೇ ಬದಲಾಗುತ್ತಿರುವುದನ್ನು ನೋಡುತ್ತಿದ್ದುವು. ಆ ಸಮಯದಲ್ಲಿ ಅವಳ ಮನಸ್ಸು ಈ ಎಲ್ಲ ವಿಷಯ ಗಳಿಂದ ಆಕರ್ಷಿತವಾಗಿ ಹೋಗಿತ್ತು. ಆಗ ಅವಳ ಕೈಯೊಳಗಿನ ಜಲ ಪಾತ್ರೆಯ ವಿಷಯವೇ ಅವಳಿಗೆ ಮರೆತು ಹೋಯಿತು. ಅದು ನಡುಗುತ್ತ ನಡುಗುತ್ತ ಅವಳ ಕೈಯಿಂದ ಜಾರಿ ನೆಲದಮೇಲೆ ಬಿದ್ದು ಸದ್ದು ಮಾಡಿತು. ಆಗ ಅರಿಂದಮನು ಹೊರಡಬೇಕೆಂದು ಎದ್ದನು; ಹೊರಡುವಾಗ "ನಾನು ಇನ್ನು ನೀರು ಕುಡಿಯುವುದಿಲ್ಲ" ಎಂದು ಹೇಳಿ ಹೋದನು.

ಸ್ವಲ್ಪ ಹೊತ್ತಿನೊಳಗಾಗಿಯೇ ಯದುನಾಥಗೋಸ್ವಾಮಿಯು ವೈದ್ಯನನ್ನು ಸಂಗಡ ಕರೆದುಕೊಂಡು ಅಲ್ಲಿಗೆ ಬಂದನು. ಆತನಿಗೆ ಬ್ರಾಹ್ಮಣಿಯು ಸತ್ಯವಾದುದೆಷ್ಟೋ ಅಸತ್ಯವಾದುದೆಷ್ಟೋ ಅನೇಕ ವಾಗಿ ಹೇಳಿದಳು. ಕೇಳಿ ಗೋಸ್ವಾಮಿ ಮಹಾಶಯನ ಬಾಯಲ್ಲಿ ಮಾತೇ ಹೊರಡಲಿಲ್ಲ. ವೈದ್ಯನು ಸಪ್ಪೆಮೋರೆ ಹಾಕಿಕೊಂಡು ಹಿಂದಿರುಗಿದನು. ಅನಂತರ ಗೋಸ್ವಾಮಿ ಮಹಾಶಯನೂ ಅವನ ಹೆಂಡತಿಯೂ ರೇವತಿ ಯನ್ನು ಬಹುವಾಗಿ ಒತ್ತಾಯಮಾಡುತ್ತಾ, ಅವನು ಯಾರು? ಏಕೆ ಬಂದಿದ್ದ? ಅವನಿರುವುದೆಲ್ಲಿ? ಏನು ಹೇಳಿಹೋದ? ಎಂದು ಮುಂತಾಗಿ ಕೇಳಲಾರಂಭಿಸಿದರು.

ರೇವತಿಯು ಒಂದು ಮಾತಿಗೂ ಉತ್ತರ ಕೊಡಲಿಲ್ಲ.

* * * * *

ಅದೇ ದಿನ ಅಪರಾಹ್ನದಲ್ಲಿ ಇನ್ನೊಂದು ವಿಚಿತ್ರ ನಡೆಯಿತು. ರೇವತಿಯ ಮಾತಾಮಹ (?) ಪೋಲೀಸಿನವರನ್ನು ಸಂಗಡ, ರೇವತಿಯನ್ನು ಕರೆದುಕೊಂಡು ಹೋಗುವುದಕ್ಕಾಗಿ ಯದುನಾಥಗೋಸ್ವಾಮಿಯ ಮನೆಗೆ ಬಂದನು. ರೇವತಿ ಅಲ್ಲಿರುವಳೋ ಇಲ್ಲವೋ ಎಂದು ಯದುನಾಥಗೋಸ್ವಾಮಿಯನ್ನು ಕೇಳಲಾಗಿ ಆತನು 'ಒಪ್ಪಿಕೊಳ್ಳಲೆ ಅಥವಾ ಇಲ್ಲವೆಂದು ಹೇಳಲೆ' ಎಂದು ಆಲೋಚಿಸುವುದರೊಳಗಾಗಿ ರೇವತಿಯು ಹೊರಕ್ಕೆ ಓಡಿಬಂದಳು. ಅವಳು ವೃದ್ಧನಾದ ತನ್ನ ಮಾತಾಮಹನನ್ನು ಗುರ್ತಿಸಿದಳು. ಕೂಡಲೇ ಆ ವೃದ್ಧನ ಕಡೆಯವರು ಪಾಲ್ಕಿಯನ್ನು ಬರಮಾಡಿ ರೇವತಿಯನ್ನು ಅದರಲ್ಲಿ ಕೂಡಿಸಿಕೊಂಡು ಹೋದರು. ಆ ಸಮಯದಲ್ಲಿ ಅರಿಂದಮನೂ ಯೋಗೇಂದ್ರನಾಥನೂ ಆ ಸ್ಥಳಕ್ಕೆ ಬಂದಿದ್ದರು.

ಅರಿಂದಮನು ಗೋಸ್ವಾಮಿಯನ್ನು ಕುರಿತು, "ಏನು ಗೋಸ್ವಾಮಿ ಮಹಾಶಯರೇ, ಐದುನೂರು ರೂಪಾಯಿ ಒಟ್ಟಿಗೆ ನಷ್ಟವಾಯಿತಲ್ಲ, ಏನಾದರೂ ಆಗಲಿ ರಕ್ತದ ಕಲೆಯ ಬಟ್ಟೆಯ ಸಂಗಡ ಅಡವಿಯಲ್ಲಿ ಏನಾನು ಹುಚ್ಚುವ ಮುಚ್ಚನ್ನು ಇಟ್ಟುಬಂದಿರಿ; ತಮಗೆ ಅದು ಬೇಕಾಗಿ ಬಂದಾಗ ಅದನ್ನು ಠಾಣೆಗೆ ಹೋಗಿ ತೆಗೆದುಕೊಳ್ಳಬಹುದು; ಅನ್ಯಾಯವಾಗಿ ಮನೆಯಲ್ಲಿದ್ದ ಚೂರಿಯನ್ನೇಕೆ ಹಾಳುಮಾಡಿಕೊಂಡಿರಿ?" ಎಂದು ಹಾಸ್ಯಮಾಡಿದನು.

ಗೋಸ್ವಾಮಿ ಮಹಾಶಯನು ಸುಮ್ಮನೇ ನಿಂತಿದ್ದನು.

ಅರಿಂದಮ—ನೀವೇನೋ ಬಹು ಒಳ್ಳೆಯ ಮನುಷ್ಯರು, ಒಂದು ಒಳ್ಳೆಯ ಆಟವನ್ನೇ ಆಡಿದಿರಿ.

ಠಾಕುರ ಮಹಾಶಯನು ಅದಕ್ಕೂ ಏನೊಂದು ಉತ್ತರವನ್ನೂ ಹೇಳಲಿಲ್ಲ.

ಎಲ್ಲರೂ ಹೊರಟು ಹೋದರು.

ಠಾಕುರ ಮಹಾಶಯನು "ಏನು ಏನಾಗಿ ಹೋಯಿತು!" ಎಂದು ಆಲೋಚಿಸುತ್ತಾ ಯಾವುದನ್ನೂ ನಿಶ್ಚಯಮಾಡಲಾರದೇ ಹೋದನು.

---

ಶ್ರೀ

# ಮಾಯಾವಿ

೨ನೆಯ ಭಾಗ



## ಒಂದನೆಯ ಪರಿಚ್ಛೇದ

ಕುಲಸವು

ಅರಿಂದಮನು ನಿಶ್ಚಿಂತನಾಗಿರಲಿಲ್ಲ. ಯಾವನು ಆ ಬಾಲಿಕೆಯ ಶವವನ್ನು ಪೆಟ್ಟಿಗೆಯಲ್ಲಿ ಠಾಣೆಗೆ ಕಳುಹಿಸಿ ತನ್ನದೊಂದು ಮಹಾ ಸಾಮರ್ಥ್ಯದ ಪರಿಚಯವನ್ನು ಮಾಡಿಕೊಟ್ಟನೋ ಆ ಕೊಲೆಪಾತಕಿಯನ್ನು ಯಾವ ರೀತಿಯಿಂದಲಾದರೂ ಹಿಡಿದುಹಾಕುವವರೆಗೆ ಅರಿಂದಮನು ಹೇಗೂ ಸ್ಥಿರನಾಗಿರಲಾರದೇ ಹೋದನು. ಅಲ್ಲದೆ ನಡೆಯುತ್ತಿರುವ ಘಟನೆಗಳಲ್ಲೆಲ್ಲಾ ಒಂದಲ್ಲದಿದ್ದರೆ ಒಂದು ಬಗೆಯಲ್ಲಿ ಪರಸ್ಪರ ಸಂಬಂಧವಿದ್ದೇ ಇರುತ್ತದೆ; ಅರಿಂದಮನು ಇದನ್ನೂ ತಿಳಿದುಕೊಂಡಿದ್ದನು. ಅವೆಲ್ಲವೂ ಒಂದೇ ಸರಪಣಿಯಿಂದ ಕಟ್ಟಿದಹಾಗಿರುತ್ತವೆ; ಹೀಗಿದ್ದರೂ ಆತನು ಅವುಗಳೆಲ್ಲದರ ಮಧ್ಯೆ ಸಿಕ್ಕಿ ಪೇಚಾಡುತ್ತಿರುವನು. ಕೆಲವು ಕಾಲದವರೆಗೆ ಆತನಿಗೆ ಯಾವುದೊಂದು ಉಪಾಯವೂ ತೋರದೆಹೋಯಿತು. ಸಂದೇಹದ ಛಾಯೆಯು ಎಲ್ಲೆಲ್ಲಿ ಕಾಣುವುದೋ ಅಲ್ಲಿಗೆಲ್ಲಾ ಹೋಗುವನು. ಸಾಧ್ಯವಾದಮಟ್ಟಿಗೆ ಎಲ್ಲ ವರ್ತಮಾನಗಳನ್ನೂ ಸಂಗ್ರಹಿಸುವನು; ಆದರೆ ಈವರೆಗೆ ಕಾರ್ಯತಃ ಏನನ್ನೂ ಮಾಡಲಾರದವನಾದನು. ಅರಿಂದಮನಂತಹ ಹೆಸರುಗೊಂಡ ಪೋಲೀಸು ಪತ್ತೇದಾರನ ವಿಷಯದಲ್ಲಿ ಇದು ನಿಶ್ಚಯವಾಗಿಯೂ ಒಂದು ದೊಡ್ಡ ಕಳಂಕದ ಮಾತೇ ಸರಿ.

ಒಂದು ದಿನ ಅಪರಾಹ್ನ; ಆತನು ದೂರದಲ್ಲಿರುವ ಲೋಕನಾಥಪುರ ಗ್ರಾಮದ ಮಧ್ಯೆ ಹಾದು ತನ್ನ ಊರಿಗೆ ಹಿಂದಿರುಗಿ ಬರು

ತ್ತಿದ್ದಾನೆ. ಬೆಳಿಗ್ಗೆ ಮನೆಯಿಂದ ಹೊರಟವನು; ಇಷ್ಟು ಹೊತ್ತಾಗಿದ್ದರೂ ಆತನಿಗೆ ಇನ್ನೂ ಸ್ನಾನ ಭೋಜನಗಳಿಲ್ಲ. ಲೋಕನಾಥಪುರದಿಂದ ಊರಿಗೆ ಸ್ವಲ್ಪ ಹೆಚ್ಚು ಕಡಿಮೆ ಒಂದು ಹರದಾರಿಯಾಗಬಹುದು. ಹೊತ್ತು ಮುಳುಗುತ್ತ ಬಂದಿದೆ. ಆಗ ಪಶ್ಚಿಮಾಕಾಶದಲ್ಲಿ ಕೆಲವು ಕರಿಯ ಮೋಡಗಳೂ ಬಿಳಿಯ ಮೇಘದ ತುಣುಕುಗಳೂ ಇದ್ದು ಅಸ್ತನಾಗುತ್ತಿರುವ ಸೂರ್ಯನ ಹೊಂಬಣ್ಣದ ಕಿರಣಮಾಲೆಯಿಂದ ಕಳೆಯೇರಿ ಬಹು ಸುಂದರವಾಗಿ ಕಾಣಿಸುತ್ತಿವೆ; ಅವುಗಳ ಕೋಮಲವಾದ ಮತ್ತೂ ಉಜ್ವಲವಾದ ಛಾಯೆಯನ್ನು ಅಲೆಗಳ ದೆಸೆಯಿಂದ ಅಲುಗಾಡುತ್ತಿರುವ ತನ್ನ ವಕ್ಷದಲ್ಲಿ ಧರಿಸಿಕೊಂಡು ಹಲಸು ಮಾವು ನೇರಿಳೆ ತೆಂಗು ಮುಂತಾದ ಫಲವೃಕ್ಷಗಳಿಂದ ಪರಿವೃತವಾಗಿರುವ, ಆ ಲೋಕನಾಥಪುರದ ವಿಮಲಾ ಸರೋವರವು ಮತ್ತೂ ಸುಂದರವಾಗಿ ಕಾಣಿಸುತ್ತಿದೆ. [ಈ ಪುಷ್ಕರಿಣಿಯ ತೀರದಲ್ಲಿ ವಿಮಲೆ ಎಂಬ ವೃದ್ಧೆಯು ಒಂದು ಗುಡಿಸಲು ಹಾಕಿಕೊಂಡು ಆಮರಣಾಂತವಾಗಿ ವಾಸಮಾಡುತ್ತಿದ್ದಳಾಗಿ ಇದಕ್ಕೆ ವಿಮಲಾ ಪುಷ್ಕರಿಣಿ ಎಂದು ಹೆಸರಾಯಿತೆಂದು ವದಂತಿಯುಂಟು. ನಾವು ಯಾವ ಕಾಲದ ಕಥೆಯನ್ನು ಹೇಳುತ್ತಿರುವೆವೋ ಆಗ ಆ ವಿಮಲೆಯೂ ಇರಲಿಲ್ಲ, ಅವಳ ಆ ಪರ್ಣಕುಟೀರದ ಚಿಹ್ನೆಯೂ ಇರಲಿಲ್ಲ. ಈಗ ಆ ಪುಷ್ಕರಿಣಿಯ ನೆಲೆಯೇ ಇಲ್ಲ.] ಇವೆಲ್ಲಕ್ಕಿಂತಲೂ ಆ ಸರೋವರದ ಪಶ್ಚಿಮಕಡೆಯ ಸೋಪಾನಾವಳಿಯು ಆಗ ಒಂದು ಅಪೂರ್ವವಾದ ಕಾಂತಿಯಿಂದ ಕಾಣಿಸುತ್ತಿದ್ದಿತು. ಅಲ್ಲಿ ಸೌಂದರ್ಯಭೂಷಣೆಯರಾದ ಸ್ನಿಗ್ಧಜ್ಯೋತಿರ್ಮಯರೂಪಿಣಿಯರಾದ ಅನೇಕ ಮಂದಿ ಯುವತಿಯರು ಸ್ನಾನಮಾಡುತ್ತಿದ್ದರು. ಕೆಲವರು ಕುತ್ತಿಗೆಯವರೆಗೂ ನೀರಿನಲ್ಲಿ ಮುಳುಗಿದ್ದರು. ಮೇಲ್ಭಾಗದಲ್ಲಿ ಸುಂದರವಾದ ಮುಖವು ಆಗತಾನೆ ವಿಕಸಿತವಾದ ಕಮಲದಂತೆ ತೋರುತ್ತಿದೆ. ಆ ಮುಖಕ್ಕೆ ನೇರವಾಗಿ ಆಕಾಶದಿಂದ ಬಹು ಸುಂದರವಾದ ಸೂರ್ಯನ ಹೊಂಬಣ್ಣದ ಕಿರಣವು ಬಿದ್ದಿದೆ. ಕೆಲವರು ಮುಳುಗಿದ್ದಾರೆ. ಕಪ್ಪಾಗಿರುವ ಜಲರಾಶಿಯಲ್ಲಿ ಗುಚ್ಛ ಗುಚ್ಛವಾಗಿರುವ ಕೃಷ್ಣಕೇಶಪಾಶವು ತೇಲುತ್ತ ಒಂದೊಂದು ಅಲೆಯಲ್ಲಿಯೂ ತೂಗಾಡುತ್ತಿದೆ—ಅಲ್ಲಿಯೂ

ಒಂದು ಅತಿ ಸುಂದರವಾದ ಹೊಂಬಣ್ಣದ ಕಿರಣ. ಒಂದು ಕಡೆ ಕೆಲವರು ಈಜಾಡುತ್ತಲೂ, ಮತ್ತೆ ಕೆಲವರು ಅಲೆಗಳಿಗೆ ಮೈಯೊಡ್ಡಿರುತ್ತಲೂ, ಇನ್ನು ಕೆಲವರು ನೀರನ್ನು ಎರಚುತ್ತಲೂ ಆಟವಾಡುತ್ತಿದ್ದರು. ಆ ಸ್ಥಳದಲ್ಲಿ ಬಹು ಸುಂದರವಾದ ಅದೇ ಹೊಂಬಣ್ಣದ ಕಿರಣಮಾಲೆಯು ಪಸರಿಸಿ ಖಂಡಖಂಡವಾಗಿ ಚಾಂಚಲ್ಯ ವಹಿಸಿದೆ, ಅದರೂ ಬಹು ಮನೋಹರ.

ಎಲ್ಲರೂ ಅವರವರ ಕೆಲಸಗಳನ್ನು ಮುಗಿಯಿಸಿಕೊಂಡು ಒಬ್ಬೊಬ್ಬರಾಗಿ ಹೊರಡುತ್ತಲಿದ್ದಾರೆ. ಆ ವೇಳೆಗೆ ಸರಿಯಾಗಿ ಅರಿಂದಮನು ಆ ಪುಷ್ಕರಣಿಯ ದಕ್ಷಿಣ ಪಾರ್ಶ್ವದ ಮಾರ್ಗವಾಗಿ ತನ್ನ ಜೂಲಗೆ ಹಿಂದಿರುಗಿ ಹೋಗುತ್ತಿದ್ದಾನೆ. ಎಲ್ಲರೂ ಹೊರಟುಹೋದರು. ಒಬ್ಬಳು ಮಾತ್ರ ಹೋಗಲಿಲ್ಲ; ಅವಳು ಕುಳಿತೇ ಇದ್ದಾಳೆ. ಇದನ್ನು ಅರಿಂದಮನು ನೋಡಿದನು. ಅವಳು ತನ್ನ ಸೌಂದರ್ಯದಿಂದ ಆ ಸನ್ನಿವೇಶವನ್ನು ಬೆಳಗುತ್ತ ಅಲ್ಲಿ ಕುಳಿತೇ ಇದ್ದಳು. ಅವಳ ಆ ಅಪರೂಪ ರೂಪವರ್ಣನೆ ಮಾಡುವುದು ಸಾಧ್ಯವಿಲ್ಲ. ಆ ಹದಿನಾರು ವರ್ಷದ ಸುಂದರಿಯೊಬ್ಬಳೇ ವಿಧಾತನ ರಚನಾಕೌಶಲ್ಯದ ಪರಮೋತ್ಕೃಷ್ಟ ನಿದರ್ಶನವೆಂದು ತೋರುತ್ತದೆ. ಇಷ್ಟು ಸಣ್ಣ ವಯಸ್ಸಿನಲ್ಲಿಯೇ ಸರ್ವಾವಯವಗಳೂ ಪೂರ್ಣತೆ ವಹಿಸಿರುವುದು ಬಹು ಅಪರೂಪ. ಆಹಾ! ಆ ಸ್ನೇಹಪ್ರಫುಲ್ಲವಾದ ಮುಖಪದ್ಮ, ಅದರಲ್ಲಿ ವಿಶಾಲಾಯತವಾಗಿ ಅರಳಿದ ತಾವರೆಯ ಹಾಗಿರುವ ಕಣ್ಣುಗಳು, ಆಕರ್ಣವಿಶ್ರಾಂತವಾದ ಕಣ್ಣುಗಳಿಗೆ ತಕ್ಕ ಹಾಗೆ ಚಿತ್ರದಲ್ಲಿ ಬರೆದು ತಿದ್ದಿದಂತಿರುವ ಹುಬ್ಬುಗಳು, ಮುಂಗುರುಳುಗಳ ದೆಸೆಯಿಂದ ಅರ್ಧಮಾತ್ರ ಆವೃತವಾಗಿರುವ ಆ ಸುಂದರ ಲಲಾಟ, ಹಾಗೆಯೇ ಸುಂದರವಾಗಿಯೂ ಸುಘಟಿತವಾಗಿಯೂ ಇರುವ ನಸುನೀಳವಾದ ಮೂಗು, ನಿರ್ಮಲವಾಗಿ ಕೆಂಪಗೆ ವಿರಾಜಿಸುತ್ತಿರುವ ತುಟಿ, ಲಲಿತವಾಗಿಯೂ, ನಿರ್ಮಲವಾಗಿಯೂ, ರಕ್ತವರ್ಣವುಳ್ಳದಾಗಿಯೂ ಇರುವ ಆ ಕಪೋಲಯುಗ್ಮಗಳ ಕಮನೀಯತೆಯನ್ನು ಕಣ್ಣಾರ ನೋಡಿ ತಿಳಿಯಬೇಕಲ್ಲದೆ ಬರೆದು ತಿಳುಹಿಸುವುದು

ಸಾಧ್ಯವಿಲ್ಲ. ಆ ಚಿಬುಕವನ್ನು ನೋಡಿ, ನಾವು ಇಂತಹ ಚಿಬುಕವನ್ನೆಂದೂ ಕಂಡಿಲ್ಲ, ಇಂದು ಕಂಡೆವು ಎಂದು ಹೇಳದಿರುವರು ಯಾರು? ಅದು ಪುಷ್ಪಪರಾಗದಿಂದ ಚೆನ್ನಾಗಿ ಆವೃತವಾಗಿರುವ ನವನೀತವೇ ಆಗಿರಬೇಕು! ಸರ್ಪದಹಾಗೆ ನೀಳವಾಗಿಯೂ, ಹಾಗೆಯೇ ಗುಂಗುರು ಗುಂಗುರಾಗಿಯೂ ಇದ್ದು ಒಟ್ಟಾಗಿ ಸೇರಿ ತೊಯಿದಿರುವ ಆ ಕೃಷ್ಣಕೇಶದಾಮವು ಗುಚ್ಛಗುಚ್ಛವಾಗಿ ಬೆನ್ನಿನಮೇಲೆಯೂ, ಕೊಂಚ ಮಾತ್ರ ಉಬ್ಬಿರುವ ವಕ್ಷಃಪ್ರದೇಶದ ಮೇಲೆಯೂ ತೂಗಾಡುತ್ತಿದೆ. ಚಂದ್ರಕಿರಣದಂತೆ ಬೆಳಗುತಿರುವ ಜ್ಯೋತಿಸ್ಸ್ವರೂಪದ ಇದಿರಿಗೆ ಗೋಧೂಳಿ ಸಮಯದ ಉಜ್ವಲತಮವಾದ ಕಾಂಚನವರ್ಣದ ರಶ್ಮಿಗಳು ಕೂಡ ಕಾಂತಿಹೀನವಾಗಿವೆ. ವಾಚಕರೇ! ನೀವು ಭಾದ್ರಪದ ಮಾಸದಲ್ಲಿ ತುಂಬಿ ಹರಿಯುವ ಹೊಳೆಯನ್ನು ನೋಡಿದ್ದೀರಾ? ನೋಡಿರುವ ಪಕ್ಷದಲ್ಲಿ ಅವಳ ಆ ಸುಘಟಿತ ಶರೀರದಲ್ಲಿ ಅಸಾಧಾರಣವಾದ ಆ ಸೌಂದರ್ಯರಾಶಿಯು ಅದೇ ರೀತಿಯಲ್ಲಿ ತುಂಬಿ ತುಳುಕುತ್ತಿರುವುದು. ಆದರೆ ಮೇರೆಮೀರಿಲ್ಲ. ಸರ್ವಾವಯವಗಳೂ ಎಷ್ಟೆಷ್ಟರಮಟ್ಟಿಗೆ ಇರಬೇಕೋ ಅಷ್ಟಷ್ಟೇ ಇದ್ದು ಪರಿಪುಷ್ಟವಾಗಿವೆ; ಆ ಸರ್ವಾವಯವದಲ್ಲಿಯೂ ಅಪರೂಪವಾದ ರೂಪರಾಶಿ ಉಕ್ಕಿ ಬರುತ್ತಿದೆ. ಆ ವಿಜನವಾದ ಸ್ಥಳದಲ್ಲಿ, ಗಿಡಮರಗಳ ಮಧ್ಯೆ, ಸಂಧ್ಯಾಸಮಯದ ಹೇಮ ಕಿರಣಗಳ ಮಧ್ಯೆ, ತಂಪಾಗಿ ಬೀಸುತ್ತಿರುವ ಆ ಮಂದಮಾರುತನ ಮಧ್ಯೆ, ದಿಗ್ದಿಗಂತಗಳವರೆಗೂ ವ್ಯಾಪಿಸಿರುವ ಕುಸುಮಗಂಧದ ಮಧ್ಯೆ ಇದ್ದುಕೊಂಡು, ಪಾಚಿಯಿಂದ ಆವೃತವಾದ ಆ ಸೋಪಾನದ ಮೇಲೆ ಕುಳಿತಿರುವ ಆ ವನದೇವೀ ಮೂರ್ತಿಯು ಚಿತ್ರದ ಪುತ್ಥಳಿಯಂತೆ ನೀರವಭಾವದಿಂದಿರುವಳು.

ಆ ಸುಂದರಿಯು, ಅಲ್ಲಿ ತನ್ನ ವಿನಾ ಮತ್ತಾರೂ ಇಲ್ಲದಿರುವುದನ್ನು ಕಂಡು, ಆತುರದಿಂದೆದ್ದು ನೀರಿಗಿಳಿದಳು. ಹಾಗೆಯೇ ಆಳವಾಗಿರುವಲ್ಲಿ ಮುಳುಗಿದಳು. ಬಹಳ ಹೊತ್ತಾಯಿತು, ಆದರೂ ಏಳಲಿಲ್ಲ. ಅರಿಂದಮನು ದೂರದಲ್ಲಿದ್ದುಕೊಂಡೇ ಇದೆಲ್ಲವನ್ನೂ ನೋಡಿ ವಿಸ್ಮಿತನಾದನು. ವಿಚಾರವೇನೆಂಬುದು ಗೊತ್ತಾಗಲಿಲ್ಲ. ಆತನು ಸರೋವರದ ದಕ್ಷಿಣ

ಪಾರ್ಶ್ವದಲ್ಲಿನ ಒಂದು ಆಲದಮರದ ಬುಡದಲ್ಲಿ ನಿಂತುಕೊಂಡಿದ್ದನು; ಮನಸ್ಸಿನಲ್ಲಿ ಅದೊಂದು ಬಗೆಯ ಸಂದೇಹವುಂಟಾದ್ದರಿಂದ ಅಲ್ಲಿಯೇ ಕಾದು ನಿಂತಿದ್ದನು. ಬಹಳ ಹೊತ್ತು ಕಾದುಕೊಂಡಿದ್ದರೂ ಆ ಲೋಕ ಲಲಾಮಭೂತಳಾದ ಸುಂದರಿಯು ಮುಳುಗಿಯೇ ಇದ್ದಳು. ಇಷ್ಟು ಹೊತ್ತು ನೀರಿನಲ್ಲಿ ಮುಳುಗಿರುವುದೆಂದರೆ ಸಾಮಾನ್ಯ ಮನುಷ್ಯರಿಗೆ ಸಾಧ್ಯವಿಲ್ಲ.—ಎಂದು ಅರಿಂದಮನು ಭೀತನಾದನು. ಹಾಗೆಯೇ ಅವಳು ಮುಳುಗಿಕೊಂಡ ಸ್ಥಳಕ್ಕೆ ಸ್ವಲ್ಪ ದೂರದಲ್ಲಿ ಎರಡು ಕೈಗಳು ಒಂದುಸಲ ತೇಲಿದುವು, ಮತ್ತೆ ಮುಳುಗಿದುವು; ಕೊಂಚ ದೂರ ಹೋಗಿ ಪುನಃ ತೇಲಿದುವು.

ನೋಡುತ್ತಿದ್ದ ಅರಿಂದಮನು ಎಲ್ಲವನ್ನೂ ತಿಳಿದನು. ಆತನು ಒಡನೆಯೇ ನೀರಿಗೆ ಇಳಿದು, ಕೈಗಳು ಪುನಃ ತೇಲಿದಾಗ ಅವನ್ನು ಹಿಡಿದುಕೊಂಡು ಆ ಯುವತಿಯನ್ನು ಸೋಪಾನಕ್ಕೆ ಎಳೆದು ತಂದನು. ಆ ಯುವತಿಗೆ ಪ್ರಜ್ಞೆ ಹೋಗಿರಲಿಲ್ಲವಾದರೂ ಅವಳು ತುಂಬ ಅಶಕ್ತಳಾಗಿದ್ದಳು; ಅವಳಿಗೆ ಕುಳಿತುಕೊಳ್ಳುವುದೂ ಸಾಧ್ಯವಿಲ್ಲದೆ ಸೋಪಾನದಮೇಲೆ ಬಿದ್ದುಬಿಟ್ಟಳು. ಆ ವೇಳೆಗೆ ಅವಳು ಅಷ್ಟಾಗಿ ನೀರು ಕುಡಿದಿದ್ದಳೆಂದು ಹೇಳುವುದು ಸಾಧ್ಯವಿಲ್ಲ. ಆದರೆ, ಅವಳ ಸ್ಥಿತಿಯು ಸರಾಗವಾಗಿ ಉಸಿರಾಡುವುದಕ್ಕೂ ಆಗದಹಾಗಿತ್ತು; ಒಂದು ಉಸಿರನ್ನು ಎರಡು ಮೂರು ಸಲವಾಗಿ ಸೆಳೆದುಕೊಳ್ಳುತ್ತಿದ್ದಳು.

ನೋಡುತ್ತಿದ್ದ ಹಾಗೆಯೇ, ಅಲ್ಲಿಗೆ, ಆ ಗ್ರಾಮವಾಸಿಗಳಾದ ಅನೇಕ ಜನರು ಬಂದು ಸೇರಿದರು. ಜಲಮಗ್ನಳಾಗಿದ್ದ ಆ ಸುಂದರಿಯು ಆ ಗ್ರಾಮದಲ್ಲಿ ಭಾರಿ ಸಾಹುಕಾರನಾಗಿರುವ ತಮಿಜಾಬುದ್ದೀನನ ಮಗಳೆಂದೂ ಅವಳ ಹೆಸರು ಕುಲಸಮೆಯೆಂದೂ ಆ ಜನಗಳಿಂದ ಅರಿಂದಮನು ಕೇಳಿ ತಿಳಿದನು. ಅಲ್ಲಿಗೆ ಬಂದಿದ್ದವರೆಲ್ಲರೂ ತಮಿಜಾಬುದ್ದೀನನ ಪ್ರಜೆಗಳೇ ಎಂಬುದೂ ತಿಳಿಯಿತು. ಅವರ ಸಹಾಯವು ದೊರೆತುದರಿಂದ ಅರಿಂದಮನು ಅನುಕೂಲವಾಯಿತೆಂದು ಭಾವಿಸಿಕೊಂಡನಲ್ಲದೆ ಕುಲಸಮಳನ್ನು ಅಡಿಗಡಿಗೆ ತಿರುಗಿಸುತ್ತಲೂ, ಅವಳನ್ನು ನಿಲ್ಲಿಸುವುದು

ಕೂಡಿಸುವುದು ಹೀಗೆಲ್ಲಾ ಮಾಡಿ ಅವಳ ಹೊಟ್ಟೆಗೆ ಸೇರಿದ್ದ ನೀರನ್ನೆಲ್ಲಾ ಕಾರಿಸಿದನು. ಇದರಿಂದ ಕುಲಸಮೆಯು ಬಹುಮಟ್ಟಿಗೆ ಸ್ವಸ್ಥಳಾದಳು. ಒಂದುಸಲ ಅರಿಂದಮನ ಮುಖವನ್ನು ನೋಡಿ,—ತಾವು ನನಗೋಸ್ಕರ ಇಷ್ಟೆಲ್ಲಾ ಮಾಡಿದಿರೇಕೆ? ಇದರಿಂದ ಏನೂ ಗುಣ ಕಾಣಿಸುವುದಿಲ್ಲ. ನನಗೆ ಮರಣವೇ ಹಿತಕರವಾಗಿದ್ದಿತು—ಎಂದು ಕುಲಸಮೆಯು ಮೆಲ್ಲಗೆ ಹೇಳಿ ನಿಟ್ಟುಸಿರಿಟ್ಟಳು.

ಆ ಮಾತಿಗೆ ಅರಿಂದಮನಿಂದ ಯಾವ ಉತ್ತರವೂ ಬರಲಿಲ್ಲ. ಕುಲಸಮೆಯ ಶರೀರದ ನಿತ್ರಾಣವು ಕೊಂಚಮಟ್ಟಿಗೆ ಕಡಿಮೆಯಾದಾಗ ಒಂದುಕಡೆ ಅರಿಂದಮನೂ, ಮತ್ತೊಂದುಕಡೆ ಇನ್ನೊಬ್ಬ ಮನುಷ್ಯನೂ ಕುಲಸಮೆಯ ಕೈಹಿಡಿದು ಅವಳ ಮನೆಗೆ ಕರೆದುಕೊಂಡು ಹೊರಟರು. ಕುಲಸಮೆಯು ಅವರೊಡನೆ ನಿದಾನವಾಗಿ ಹೆಜ್ಜೆಹಾಕುತ್ತಾ ನಡೆದಳು. ಬಹಳ ದೂರವಿಲ್ಲ, ಅಲ್ಲಿಯೇ ಆ ಸರೋವರದ ಪೂರ್ವಕಡೆ ಅರಮನೆಯ ಹಾಗಿರುವ ತಮಿರಾಜುದ್ದೀನನ ವಿಸ್ತಾರವಾದ ಉಪ್ಪರಿಗೆ ಮನೆ!

---

## ಎರಡನೆಯ ಪರಿಚ್ಛೇದ

### ಹೊಸ ಗಂಡಾಂತರ

ಕೊಂಚ ಹೊತ್ತಿನೊಳಗಾಗಿ ಕುಲಸಮಳನ್ನು ಸಂಗಡ ಕರೆದುಕೊಂಡು ಅರಿಂದಮನೂ ನಾಲ್ಕುಮಂದಿ ಗ್ರಾಮಸ್ಥರೂ ತಮಿರಾಜುದ್ದೀನನ ಮನೆಗೆ ಬಂದರು. ಆ ವರ್ತಮಾನವು ಅಂತಃಪುರಕ್ಕೆ ತಲಪುವುದಕ್ಕೆ ಸಾವಕಾಶವಾಗಲಿಲ್ಲ. ಇಬ್ಬರು ಮೂವ್ವರು ಸೇವಕರು ಬಂದು ಕುಲಸಮಳನ್ನು ಕರೆದುಕೊಂಡು ಹೋದರು. ಆ ವೇಳೆಗೆ ಕುಲಸಮಳ ತಂದೆಯಾದ ತಮಿರಾಜುದ್ದೀನನು ಆ ಸ್ಥಳಕ್ಕೆ ಬಂದನು. ಹಿಂದೆಯೇ ಅವನ ಹೆಂಡತಿ ಬಂದಳು. ತಮಿರಾಜುದ್ದೀನನ ವಯಸ್ಸು ಸುಮಾರು ಐವತ್ತು ವರ್ಷಗಳಿರಬಹುದು; ಆದರೆ, ಅವನ ದೇಹವು ಜೀರ್ಣ-ಶೀರ್ಣವಾಗಿದೆ; ಎಂಭತ್ತು ವರ್ಷದ ಮುದುಕನಹಾಗೆ ಅವನ ಶರೀರದ ಮೇಲು

ಭಾಗವು ಮುಂದುಗಡೆಗೆ ತುಂಬ ಬಾಗಿಕೊಂಡಿದೆ. ನಡೆದು ಬರುವಾಗ ಆತನ ಕಾಲುಗಳು ಮದ್ಯಪಾಯಿಯ ಕಾಲುಗಳಂತೆ ಅಸ್ಥಿರಗಳಾಗಿದ್ದುವು.

ತಮಿಜುದ್ದೀನನು ಅರಿಂದಮನನ್ನು ಮ್ಲಾನದೃಷ್ಟಿಯಿಂದ ನೋಡಿ, "ಮಹಾಶಯ, ತಾವು ನನ್ನ ಮಗಳನ್ನು ಕಾಪಾಡಿದಿರಿ; ತಾವು ನೋಡದೇ ಇದ್ದಿದ್ದ ಪಕ್ಷದಲ್ಲಿ ಅವಳು ಇಂದು ನನ್ನನ್ನು . ." ಎಂದು ಕಂಪಿತ ಕಂಠದಿಂದ ಹೇಳುತ್ತಿದ್ದಹಾಗೆಯೇ ಕಂಠರೋಧವಾಯಿತು; ಮುಂದೆ ಮಾತನಾಡಲಾಗಲಿಲ್ಲ; ಪುನಃ ಮಾತನಾಡಲು ಪ್ರಯತ್ನಿಸಿದನು, ಆ ಪ್ರಯತ್ನವೂ ವ್ಯರ್ಥವಾಯಿತು. ಅವನ ಮುಖವೂ ಕಣ್ಣುಗಳೂ ಕೆಂಪಾದುವು, ಶರೀರವಾದ್ಯಂತವೂ ನಡುಗಲಾರಂಭವಾಯಿತು. ನೆಲಕ್ಕೆ ಬೀಳಲಿದ್ದ ಆತನನ್ನು ಅರಿಂದಮನು ಹಿಡಿದುಕೊಂಡನು. ಎರಡು ಕೈಗಳಿಂದಲೂ ಆತನನ್ನೆತ್ತಿಕೊಂಡು ಬಂದು, ಹೊರಭಾಗದಲ್ಲಿ, ಒಂದು ಪ್ರಶಸ್ತವಾದ ಕೊಠಡಿಯೊಳಗೆ ಮಲಗಿಸಿದನು.

ಉಳಿದವರೆಲ್ಲರೂ ಭಯಭ್ರಾಂತರಾಗಿ ಅಲ್ಲಿಗೆ ಬಂದರು. ಅರಿಂದಮನು ನೋಡಿದನು, ಇಷ್ಟರೊಳಗಾಗಿ ತಮಿಜುದ್ದೀನನು ಮೃತನಾಗಿ ಹೋಗಿದ್ದಾನೆ!

ತಮಿಜುದ್ದೀನನ ಹೆಂಡತಿಯ ಹೆಸರು ಮತಿಬೀಬಿ ಎಂದು; ಅವಳಿಗೆ ಇನ್ನೂ ಬಹು ಸಣ್ಣಪ್ರಾಯ. ಇಪ್ಪತ್ತೈದು ವರ್ಷಗಳಿಗೆ ಮೀರಿಲ್ಲ, ಆದರೆ ಅದಕ್ಕೂ ಚಿಕ್ಕವಳಂತೆಯೇ ಕಾಣಿಸುವಳು. ಮತಿಬೀಬಿಯು ಆಕುಲಿತಳಾಗಿ ಅಳತೊಡಗಿದಳು. ತಲೆ ಕೆದರಿಕೊಂಡು ಕೈಕಾಲುಗಳನ್ನು ಆಡಿಸುತ್ತಾ, ಎದೆ ಕುಟ್ಟಿಕೊಳ್ಳುತ್ತಾ, ಚೀತ್ಕಾರ ಮಾಡಿಕೊಂಡು, ಘಟ್ಟಿಯಾಗಿ, ಅಳತೊಡಗಿದಳು.

ಅರಿಂದಮನು ಸೇವಕನೊಬ್ಬನನ್ನು ಕರೆದು "ಇಲ್ಲಿ ಔಷಧಿ ಕೊಡುವವರು ಯಾರು?" ಎಂದು ಕೇಳಿದನು.

ಸೇವಕನ ಹೆಸರು ಅಹಮದ. ಅಹಮದನು "ಫೂಲಸಾಹೇಬ" ಎಂದನು.

ಅರಿಂದಮ—ಆತನನ್ನು ಈಗಲೇ ಕರೆದುಕೊಂಡು ಬಾ.

ಆಹಮ್ಮದನು ಓಡುತ್ತಾ ಹೋದನು. ಅರಿಂದಮನು ತಮಿಜುದ್ದೀನನ ಶರೀರವನ್ನು ಚೆನ್ನಾಗಿ ಪರೀಕ್ಷೆಮಾಡುತ್ತಾ ಕುಳಿತನು. ಹಾಗೆಯೇ,—ತಮಿಜುದ್ದೀನನು ಬದುಕಿರಬಹುದು, ಇದು ಒಂದು ಬಗೆಯ ಮೂರ್ಛೆರೋಗವಾಗಿರಬೇಕು—ಎಂದು ಮನಸ್ಸಿನಲ್ಲಿಯೇ ಭಾವಿಸಿದನು. ಅಲ್ಲಿಂದ ಮತಿಬೀಬಿಗೆ ಸಮಾಧಾನ ಹೇಳಲು ಯತ್ನಿಸಿದನು. ಮತಿಬೀಬಿಯು ಮತ್ತೂ ಅಳುವುದಕ್ಕೆ ಆರಂಭಿಸಿದಳು.

ಈ ವೇಳೆಗೆ ಅಲ್ಲಿಗೆ ಕುಲಸಮೆಯು ಓಡೋಡಿ ಬಂದಳು. ತಂದೆಯ ಮೃತದೇಹವು ಇದ್ದಲ್ಲಿಗೆ ಹೋಗು-ಹೋಗುತ್ತಾ, "ಅಪ್ಪಾ-ಅಪ್ಪಾ-ಅಪ್ಪಾ! ನಿನಗೆ ಏನಾಯಿತಪ್ಪಾ? ಇದೊ ನಾನು ಬಂದಿದ್ದೇನೆ, ಮಾತ ನಾಡಪ್ಪಾ" ಎಂದು ಹೇಳಿದಳು. ಹತ್ತಿರಹೋಗಿ ತಂದೆಯ ಪಕ್ಕದಲ್ಲಿ ಮುಖವನ್ನಿರಿಸಿ ಅಳುತ್ತ ಕುಳಿತು ಬಿಟ್ಟಳು.

ಅರಿಂದಮ—ನಿಮ್ಮ ತಂದೆ ಬದುಕಿರುವಂತೆ ಕಾಣುವುದಿಲ್ಲ. ವೈದ್ಯನನ್ನು ಕರೆಯುವುದಕ್ಕೆ ಸೇವಕನು ಹೋಗಿದ್ದಾನೆ.

ಇದನ್ನು ಕೇಳಿ ಕುಲಸಮೆಯು ನಡುಗಿದಳು, ಹಾಗೆಯೇ ಎದ್ದು ನಿಂತಳು; ಅವಳ ಕಣ್ಣುಗಳೆರಡೂ ಮತ್ತಷ್ಟು ವಿಸ್ಫಾರಿತವಾದುವು; ಅವಳು ಕರ್ತವ್ಯಭಾವದಿಂದ ತಲೆಯನ್ನೆತ್ತಿ, ಕುತ್ತಿಗೆಯನ್ನೋರೆಮಾಡಿಕೊಂಡು, "ಯಾವ ವೈದ್ಯ?" ಎಂದಳು.

ಅರಿಂದಮ—ನಿಮ್ಮ ಮನೆಯ ವೈದ್ಯ-ಫೂಲಸಾಹೇಬ.

ಇದನ್ನು ಕೇಳಿ ಇಂತಹ ಸಮಯದಲ್ಲಿಯೂ ಕುಲಸಮೆಯ ಮುಖದಲ್ಲಿ ನಗೆಮೂಡಿತು. ಇದಿರಾಗಿ ಅವಳ ತಂದೆಯ ಮೃತದೇಹವು ಬಿದ್ದಿದೆ, ವ್ಯಸನಾಕ್ರಾಂತಳಾದ ತಾಯಿ ಪಕ್ಕದಲ್ಲಿಯೇ ಅಳುತ್ತಿದ್ದಾಳೆ. ಇಂತಹ ಭಯಾನಕ ಸಮಯದಲ್ಲಿ ಆ ಕುಲಸಮಳ ಮುಖದಲ್ಲಿ ಮೂಡಿದ ನಗೆಯು, ಅದೊಂದು ಬಗೆಯಾಗಿ, ತುಂಬ ಭಯಂಕರವಾಗಿ ತೋರಿತು. ಅನಂತರ ಅವಳು ಅಸ್ಫುಟಸ್ವರದಿಂದ "ಫೂಲಸಾಹೇಬನೇ?

ಆಗಬಹುದು'' ಎಂದಂದುಕೊಂಡಳು. ಆಗ ಪುನಃ ತಂದೆಯ ವಕ್ಷದಲ್ಲಿ ತಲೆಯಿಟ್ಟುಕೊಂಡು ಅಳುತಳುತ, ''ಅಪ್ಪಾ! ಎಲ್ಲಿಹೋದೆ? ಇನ್ನು ನನಗೆ ಯಾರೂ ದಿಕ್ಕಿಲ್ಲವಲ್ಲಾ! ಅಪ್ಪಾ, ಅಪ್ಪಾ, ನನಗೇನು ಗತಿ!'' ಎಂದು ಪ್ರಲಾಪಿಸಿದಳು. ಅವಳ ಮುಖವರ್ಣವು ವಿವರ್ಣವಾಯಿತು; ತಲೆ ಸುತ್ತುತ್ತಿರುವಂತೆ ತೋರಿತು, ಕೈಕಾಲುಗಳು ಸ್ವಾಧೀನ ತಪ್ಪಿದುವು; ಹೇಳಿದಳು,—''ಫೂಲಸಾಹೇಬ ನನ್ನ—ಶತ್ರು—ನನ್ನ ತಂದೆಯ ಶತ್ರು—ನನ್ನ‥ಶತ್ರು—ಈ ಕುಟುಂಬದ ಶತ್ರು; ಪಿಶಾಚ—ಪಿಶಾಚ—ಎಂತಹ ಸರ್ವನಾಶ!'' ಮುಂದೆ ಮಾತು ಹೊರಡಲಿಲ್ಲ. ಕಾತರತೆಯಿಂದ ಕಂದಿದ ಅವಳ ದೇಹಲತೆಯು ಅಲ್ಲಿಯೇ ಬಿದ್ದು ನೆಲದಲ್ಲಿ ಹೊರಳಿತು; ಕುಲಸಮೆಯು ಮೂರ್ಛಿತೆಯಾದಳು.

ಅರಿಂದಮನು ಅತ್ಯವಸರದಿಂದ ಎದ್ದು ಬಂದು ಕುಲಸಮೆಯನ್ನು ಹಿಡಿದುಕೊಂಡನು; ಅನಂತರ,—ಈ ಸಂದರ್ಭದಲ್ಲಿ ನೀವು ವ್ಯಸನದಿಂದ ಅಳುತ್ತ ಕುಳಿತರೆ ಸಾಗುವುದಿಲ್ಲ. ಕುಲಸಮಳು ಮೂರ್ಛಿತಳಾಗಿದ್ದಾಳೆ; ಈಗ ಎಲ್ಲ ವಿಚಾರಗಳಿಗೂ ನೀವೇ ಲಕ್ಷ್ಯಕೊಡಬೇಕಾಗಿದೆ—ಎಂದು ಮತಿಜೀಬಗೆ ಹೇಳಿದನು.

ಮತಿಜೀಬಿಯು ಬಂದು ಕುಲಸಮಳ ಪಾರ್ಶ್ವದಲ್ಲಿ ಕುಳಿತಳು. ಕಣ್ಣಿಗೂ ಮುಖಕ್ಕೂ ನೀರು ಚಿಮುಕಿಸಿದ್ದರಿಂದ ಕುಲಸಮೆಗೆ ಜಾಗ್ರತೆಯಾಗಿ ಪ್ರಜ್ಞೆ ಬಂದಿತು.

---

## ಮೂರನೆಯ ಪರಿಚ್ಛೇದ

### ಫೂಲಸಾಹೇಬ

ಅಷ್ಟರೊಳಗಾಗಿ ಡಾಕ್ಟರ್ ಫೂಲ್‌ಸಾಹೇಬನು ಅಲ್ಲಿಗೆ ಬಂದನು. ಮೊತ್ತಮೊದಲು, ವೃದ್ಧನಾದ ತವಿನಾಬುದ್ದೀನನ್ನು ನೋಡುವುದಕ್ಕೆ ಹೋದನು; ನೋಡಿ, ''ಇಲ್ಲ, ಬದುಕಿಲ್ಲ; ಹಠಾತ್ತಾಗಿ ಹೀಗಾಗುವುದಕ್ಕೆ ಕಾರಣವೇನೋ ತಿಳಿಯಲಿಲ್ಲವಲ್ಲ!'' ಎಂದನು.

ಮತಿಬೀಬಿ—ಈ ಅನರ್ಥಕ್ಕೆಲ್ಲ ಕುಲಸಮೆಯೇ ಕಾರಣ; ಇಂದು ಅವಳು ನೀರಲ್ಲಿ ಮುಳುಗಿ ಸಾಯುವ ಪ್ರಯತ್ನ ಮಾಡದೇ ಇದ್ದಿದ್ದಪಕ್ಷದಲ್ಲಿ ಇಂತಹ ಸರ್ವನಾಶವಾಗುತ್ತಿದ್ದಿತೇನು !—ಎಂದು ಹೇಳಿದಳು. ಅಶ್ರುಧಾರೆಯು ಅವಳ ಎರಡು ಕೆನ್ನೆಗಳನ್ನೂ ತೋಯಿಸಿ ಹರಿಯುತಿದ್ದಿತು; ಆದರೂ ಆ ಮುಖದಲ್ಲಿ ಒಂದು ಸಲ ನಗೆಯ ರೇಖೆ ಮೂಡಿ ಹಾಗೆಯೇ ಲೀನವಾಗಿ ಹೋಯಿತು.

ಅರಿಂದಮನು ಡಾಕ್ಟರ ಫೂಲಸಾಹೇಬನಿಗೆ ಆನುಪೂರ್ವಿಕವಾಗಿ ಎಲ್ಲವನ್ನೂ ಹೇಳಿದನು. ಫೂಲಸಾಹೇಬನು ಮನಗೊಟ್ಟು ಎಲ್ಲವನ್ನೂ ಕೇಳಿದನು. ಆ ಸಮಯದಲ್ಲಿ ಗಡ್ಡಮಿಸೆಗಳೊಂದೂ ಇಲ್ಲದ ಅವನ ಓಷ್ಠಾಧರದಲ್ಲಿ ಒಂದು ಕಡೆ, ಪರಿಹಾಸವ್ಯಂಜಕವಾದ ಅದೊಂದು ಬಗೆಯ ನಗೆಯು ಸುಳಿದಾಡುತ್ತಿದ್ದಿತು; ಇದನ್ನು ಯಾರೂ ಕಾಣಲಿಲ್ಲ. ಅರಿಂದಮನು ಮಾತು ಮುಗಿಸಿದಮೇಲೆ, ಫೂಲಸಾಹೇಬನು ವಿನೀತಭಾವದಿಂದ "ಮಹಾಶಯರ ನಾಮಧೇಯವೇನೋ ತಿಳಿಯಬಹುದೇ?" ಎಂದು ಪ್ರಶ್ನೆಮಾಡಿದನು.

ಅರಿಂದಮ—ಅರಿಂದಮವಸು.

ಫೂಲಸಾಹೇಬ—ಸರಿ !

ಫೂಲಸಾಹೇಬನ ಮುಖಭಾವವು ಹಠಾತ್ತಾಗಿ ಮಾರ್ಪಟ್ಟಿತು; ಅವನು ಅದನ್ನು ಹಾಗೆಯೇ ಕ್ರಮಪಡಿಸಿಕೊಂಡು ಮತ್ತಷ್ಟು ವಿನೀತಭಾವದಿಂದ; "ಮಹಾಶಯರು ಇರುವುದೆಲ್ಲಿ? ಎಂಬುದನ್ನು,—ಯಾವ ಆಕ್ಷೇಪಣೆಯೂ ಇಲ್ಲದಿದ್ದರೆ"—....?—ಎಂದನು.

ಅರಿಂದಮ—ರಘುನಾಥಪುರ; ಇಲ್ಲಿಂದ ಸುಮಾರು ಮೂರು ಹರಿದಾರಿಯಾಗಬಹುದು; ಯಾವುದೋ ಕೆಲಸಕ್ಕಾಗಿ ಇತ್ತಕಡೆ ಬಂದಿದ್ದೆ; ನಾನು ಇನ್ನು ಹೊರಡಬಹುದಷ್ಟೆ?

ಫೂಲಸಾಹೇಬನು ಆ ಮಾತಿಗೆ ಯಾವುದೊಂದು ಉತ್ತರವನ್ನೂ ಕೊಡದೆ ಕುಲಸಮಳ ಕೈಹಿಡಿದು ನೋಡಿ,—ನೀನು ಇನ್ನು ಇಲ್ಲಿರಬೇಡ,

ನಾನು ಕೇಳಿದ್ದರಲ್ಲಿ ನಿನ್ನ ಶರೀರಸ್ಥಿತಿ ಸರಿಯಾಗಿರುವುದೆಂದು ತೋರುವುದಿಲ್ಲ. ನಡೆ, ನಿಮ್ಮ ತಾಯನ್ನೂ ಸಂಗಡ ಕರೆದುಕೊಂಡು ನಿನ್ನ ಕೊಠಡಿಗೆ ಹೊರಡು,—ಎಂದನು. ಅನಂತರ ಅರಿಂದಮನನ್ನು ನೋಡಿ, ತಾವು ದಯೆಮಾಡಿ ಇನ್ನು ಕೊಂಚಕಾಲ ಇಲ್ಲಿಯೇ ಇರೋಣಾಗಲಿ'' ಎಂದು ಹೇಳಿದನು.

ಕುಲಸಮೆಯು ಎದ್ದು ನಿಂತಳು. ಯಾವ ಮಾತನ್ನೂ ಆಡಲಿಲ್ಲ; ಆದರೆ, ಅವಳು ತಿರಸ್ಕಾರ ಸೂಚಕ ದೃಷ್ಟಿಯಿಂದ, ಒಂದುಸಲ ಡಾಕ್ಟರನನ್ನು ನೋಡಿದಳು. ಆ ದೃಷ್ಟಿಯ ಅಭಿಪ್ರಾಯವನ್ನು ಡಾಕ್ಟರನು ಮಾತ್ರ ತಿಳಿದುಕೊಂಡನು. ಆದರಿಂದ ಫೂಲಸಾಹೇಬನ ಮುಖಭಾವವು ಮಾರ್ಪಡದೇ ಹೋದರೂ ಅರೆಗಳಿಗೆಯುಮಟ್ಟಿಗೆ ಆ ಮುಖದಲ್ಲಿ, ಹುಬ್ಬು ವಕ್ರವಾಗಿದ್ದು ನಂತರ ನೈಜಭಾವಕ್ಕೆ ಬಂದಿತು. ಒಡನೆಯೇ ಅವನ ಆ ದೃಷ್ಟಿಯಿಂದ, ಒಂದು ಸಲ, ಬೆಂಕಿಯ ಕೆಂಡವೇ ಹೊರಬಿದ್ದ ಹಾಗೆ ತೋರಿ, ಅವ್ಯಕ್ತವಾದ ಆ ಭಾವಾಂತರದಲ್ಲಿ ಸೇರಿಹೋಯಿತು. ಹೇಳಿದನು—ಹೊರಡು-ಕುಲಸಮೆ, ಹಟಮಾರಿಯಾಗಬೇಡ. ನಿಮ್ಮ ತಾಯನ್ನೂ ಸಂಗಡ ಕರೆದುಕೊಂಡು ನಿನ್ನ ಕೊಠಡಿಗೆ ಹೊರಡು ಎಂದು. ಮತಿಬೇಬಿ ಎದ್ದು ಹೋದಳು. ಕುಲಸಮೆಯೂ ಎದ್ದಳು. ಹೊರಡುವಾಗ ಅವಳು ಬಾಗಿಲಬಳಿ ನಿಂತು ಅರಿಂದಮನನ್ನು ಉದ್ದೇಶಿಸಿ, —''ಮಹಾಶಯ, ಆ ಸಮಯದಲ್ಲಿ ನನ್ನನ್ನು ಸಾಯಬಿಟ್ಟಿದ್ದ ಪಕ್ಷದಲ್ಲಿ, ಒಳ್ಳೆಯ ಕೆಲಸವಾಗುತ್ತಿತ್ತು. ನೀವು ಸರಿಯಾದ ಕೆಲಸ ಮಾಡಿದಂತೆ ಆಗಲಿಲ್ಲವೆಂದು ಈಗಲೂ ಹೇಳುತ್ತೇನೆ'' ಎಂದು ಹೇಳಿ ತ್ವರಿತ ಗತಿಯಿಂದ ಹೊರಟುಹೋದಳು.

ಆಗ ಡಾಕ್ಟರ್ ಫೂಲಸಾಹೇಬನು ಆ ಆತಂಕ ಪರಿಹಾರವಾದುದಕ್ಕಾಗಿ ದೀರ್ಘವಾದ ನಿಟ್ಟುಸಿರಿಟ್ಟು,—ಯಾರಾದರೂ ಸತ್ತರೆ ಸಾಕು, ಹೆಂಗಸರಿಗೆ ಅಳುವುದಕ್ಕೆ ಮಹಾ ಸುಯೋಗ ಸಿಕ್ಕಿದಂತಾಗುತ್ತದೆ. ಮನೆ ಕಿತ್ತುಹೋಗುವ ಹಾಗೆ ಅತ್ತುಬಿಡುತ್ತಾರೆ; ಅವರಿಂದ ಬಿಡುಗಡೆ ಹೊಂದಬೇಕಾದರೆ ಏನೇನು ಮಾಡಬೇಕೋ ಆ ಪ್ರಯತ್ನವೆಲ್ಲವನ್ನೂ

ಮೊದಲು ಮಾಡುತ್ತೇನೆ,—ಎಂದು ಹೇಳಿ, ಸೇವಕರ ಹೆಸರು ಹಿಡಿದು ಕೂಗಿದನು. ಮೂರು ನಾಲ್ಕು ಮಂದಿ ಸೇವಕರು ಊರ್ಧ್ವಶ್ವಾಸ ದಿಂದ ಓಡಿಬಂದರು. ಅವರೆಲ್ಲರೂ ಭಯಭರಿತರು, ತ್ರಸ್ತರು, ಡಾಕ್ಟರ ಬಾಬುವನ್ನು ಕಂಡರೆ ಬಹು ಶಂಕಿತರು. ಇದೆಲ್ಲವನ್ನೂ ಅರಿಂದಮನು ನೋಡಿದನು. ಅವರು ಅವನನ್ನು ಕಂಡರೆ ಎಷ್ಟರ ಮಟ್ಟಿಗೆ ಭಯ ಪಡುತ್ತಿದ್ದರೋ ಅಷ್ಟರಮಟ್ಟಿಗೇ ಅವನನ್ನು ದ್ವೇಷಿಸುತ್ತಲೂ ಇದ್ದ ರೆಂಬುದು ಅವರ ಮುಖಭಾವದಿಂದ ವ್ಯಕ್ತವಾಗುತ್ತಿದ್ದಿತು.

ಫೂಲಸಾಹೇಬನು ಭೃತ್ಯರನ್ನು ಕುರಿತು ಯಾರ್ಯಾರು ಏನೇನು ಮಾಡಬೇಕೆಂಬುದನ್ನು ಹೇಳಿದನು; ಅವರು ಅವರವರ ಕೆಲಸಗಳಿಗೆ ಹೊರಟುಹೋದರು. ಸುಮ್ಮನೇ ಕುಳಿತಿದ್ದ ಅರಿಂದಮನು ತಾನು ಹೊರಡುವುದಕ್ಕಾಗಿ ಎರಡಾವರ್ತಿ ಮೇಲಕ್ಕೆ ಎದ್ದನು; ಎರಡು ಸಲವೂ ಫೂಲಸಾಹೇಬನು ಕುಳಿತುಕೊಳ್ಳಬೇಕೆಂದು ಅವನನ್ನು ಬಲಾತ್ಕರಿಸಿದನು.

ಆ ಮೃತದೇಹದ ವಿಚಾರವಾಗಿ ಮಾಡಬೇಕಾದ ವಿಧಾನಗಳಲ್ಲಿ ಫೂಲಸಾಹೇಬನಿಗೆ ಇನ್ನೂ ಅರ್ಧಗಂಟೆಯಾಯಿತು. ಅನಂತರ ಅವನು ಅರಿಂದಮನನ್ನು ಕುರಿತು,—ಅರಿಂದಮಬಾಬೂ, ತಾವು ಇನ್ನೂ ಕೊಂಚ ಕಾಲ ನಿಲ್ಲುವುದಾದರೆ ತುಂಬ ಅನುಕೂಲ. ನಾನು ಒಂದು ಸಲ ಮತಿಬೀಬಿಯನ್ನೂ ಕುಲಸಮಳನ್ನೂ ನೋಡಿಕೊಂಡು ಬರುತ್ತೇನೆ; ಇಬ್ಬರೂ ಜತೆಯಾಗಿ ಹೋಗೋಣ; ಏನು ಹೇಳುತ್ತೀರಿ? ಎಂದನು.

ಅರಿಂದಮ—ಕ್ಷಮಿಸಿರಿ, ನಾನು ಹೋಗಬೇಕಾದ ಆವಶ್ಯಕ ಕೆಲಸವಿದೆ; ಬಹಳ ಹೊತ್ತು ನಿಲ್ಲಲಾರೆ; ಇದೋ ಹೊರಟೆ.

ಫೂಲಸಾಹೇಬ—ಇಲ್ಲ ಇಲ್ಲ, ತಾವು ಕುಳಿತುಕೊಳ್ಳಿ, ನಾನು ಈಗಲೇ ಬಂದೆ; ತಮ್ಮ ಸಂಗಡ ಒಂದೆರಡು ಮಾತನಾಡುವುದಿದೆ. ಮುಖ್ಯವಾಗಿ ಮತಿಬೀಬಿಯೂ ಕುಲಸಮೆಯೂ ಈಗ ಏನೇನು ಮಾಡಬೇಕೋ ಹೇಳಿಬರುತ್ತೇನೆ—ಈಗಲೇ ಬಂದೆ.

ಫೂಲಸಾಹೇಬನು ಎದ್ದು ಹೋದನು.

---

## ನಾಲ್ಕನೆಯ ಪರಿಚ್ಛೇದ

### ಸಾವಧಾನ

ಡಾಕ್ಟರು ಹೊರಟುಹೋದ ಉತ್ತರಕ್ಷಣದಲ್ಲಿಯೇ ಕುಲಸಮಳು ಆ ಕೊಟ್ಟಡಿಗೆ ಓಡಿಬಂದಳು. ಆ ಕೊಟ್ಟಡಿಯಲ್ಲಿ ಇನ್ನೂ ಅವಳ ತಂದೆಯ ಮೃತದೇಹವು ಇದ್ದೇ ಇದ್ದಿತು. ಕುಲಸಮಳು ಮೃತನಾದ ತನ್ನ ತಂದೆಯನ್ನು ಪುನಃ ನೋಡುವುದಕ್ಕೋಸ್ಕರ ಬಂದಿರಬಹುದೆಂದು ಅರಿಂದಮನು ಭಾವಿಸಿದನು ; ಆದರೆ ಅವಳು ತಂದೆಯ ಶವದಕಡೆ ಒಂದು ಸಲವಾದರೂ ತಿರುಗಿನೋಡಲಿಲ್ಲ; ಅರಿಂದಮನು ಯಾವಲ್ಲಿ ಕುಳಿತಿದ್ದನೋ ಅಲ್ಲಿಗೇ ಮುಂದರಿದು ಹೋಗಿ, ಒಂದು ಕುರ್ಚಿಯನ್ನೆಳದುಕೊಂಡು ಕುಳಿತು,—ಅರಿಂದಮಬಾಬೂ, ಎಚ್ಚರದಿಂದಿರಿ! ಈ ಡಾಕ್ಟರನು ಸಾಮಾನ್ಯನೆಂದು ತಿಳಿಯಬೇಡಿ; ನಾನು ಈತನ ಭಾವ ಭಂಗಿಯನ್ನು ನೋಡಿದ್ದರಲ್ಲಿ ಅವನು ನಿಮ್ಮನ್ನು ಮೋಸಮಾಡುವ ಪ್ರಯತ್ನದಲ್ಲಿರುವಂತೆ ಕಂಡುಬರುತ್ತದೆ,—ಎಂದು ಹೇಳಿ ಎಚ್ಚರಿಸಿದಳು.

ಅರಿಂದಮನಿಗೆ ಅವಳ ಮಾತಿನ ಅಭಿಪ್ರಾಯ ತಿಳಿಯಲಿಲ್ಲ. ದುಃಖ ವೇಗದಿಂದ ಕುಲಸಮೆಗೆ ಬುದ್ಧಿ ಕೆಟ್ಟಿರಬೇಕೆಂದು ಊಹಿಸಿಕೊಂಡನು ; ಅರಿಂದಮನು ಮಾತನಾಡದಿರುವುದನ್ನು ಕಂಡು ಕುಲಸಮಳು ಅವನ ಮನೋಭಾವವನ್ನು ಒಂದು ರೀತಿಯಿಂದ ಊಹಿಸಿದಳು. ಆ ಸಮಯದಲ್ಲಿ, ಯಾತನಾಮಯವಾದ ಒಂದು ನಗೆಯು, ಅವಳ ಆ ಮ್ಲಾನ ಮುಖದಲ್ಲಿ, ಕಾಣಿಸಿಕೊಂಡಿತು. ಆಗ ಕುಲಸಮೆಯು—ನನ್ನನ್ನು ಹುಚ್ಚಿ ಎಂದು ತಿಳಿಯಬೇಡಿ, ನಾನು ಎಲ್ಲವನ್ನೂ ನೋಡುತ್ತಿದ್ದೇನೆ. ಎಲ್ಲವನ್ನೂ ಸರಿಯಾಗಿ ತಿಳಿಯುತ್ತಲೂ ಇದ್ದೇನೆ. ನೀವು ಯಾವುದನ್ನು ತಿಳಿಯಲಾರಿರೋ ಅದನ್ನೂ ನಾನು ತಿಳಿದುಕೊಂಡಿದ್ದೇನೆ,—ಎಂದು ಹೇಳಿ ಮೃತನಾದ ತಂದೆಯ, ಅಲುಗಾಡದಿರುವ, ಕಠಿಣ ವಕ್ಷದ ಮೇಲೆ ಕೈಯಿಟ್ಟು,—ನಮ್ಮ ತಂದೆಯನ್ನು ಈ ಅವಸ್ಥೆಗೆ ತಂದವನು ಯಾರು ? ಯಾರು ? ಅದೇ ಪಿಶಾಚ—ಡಾಕ್ಟರ್—ಡಾಕ್ಟರ್ ಫೂಲಸಾಹೇಬನು ನಮ್ಮ ತಂದೆಯ ಕೊಲೆಮಾಡಿದ್ದಾನೆ. ಎರಡು ವರ್ಷಗಳಿಗೆ ಮೊದಲು ನಮಗೆ

ಫೂಲಸಾಹೇಬನ ಪರಿಚಯವೇ ಇಲ್ಲದಿದ್ದಾಗ, ನಮ್ಮ ತಂದೆ ಹೇಗೆ ಕಾಣಿಸಿಕೊಳ್ಳುತ್ತಿದ್ದನೋ, ಆ ಪುಷ್ಟವಾದ ಶರೀರವು, ಎರಡು ವರ್ಷಗಳ ಮಧ್ಯೆ ಮುಪ್ಪಿಗೆ ಸಂದ ಮುದುಕನ ಶರೀರಕ್ಕಿಂತಲೂ ಜೀರ್ಣ ಶೀರ್ಣ ವಾಯಿತು. ಈ ಎರಡು ವರ್ಷಗಳೊಳಗಾಗಿ ಫೂಲಸಾಹೇಬನು ನಂದನದಂತಹ ಈ ಸಂಸಾರವನ್ನು ಸ್ಮಶಾನವನ್ನಾಗಿ ಮಾಡಿದನು. ಈಗಲೂ ಹೇಳುತ್ತೇನೆ, ಅರಿಂದಮಬಾಬೂ, ನೀವು ನನ್ನನ್ನು ಹುಚ್ಚಿ ಳೆಂದು ಭಾವಿಸಬೇಡಿ. ನಾನು ನಮ್ಮ ತಂದೆಯ ಮೃತದೇಹವನ್ನು ಮುಟ್ಟಿ ಪ್ರಮಾಣಮಾಡಿ ಹೇಳುತ್ತೇನೆ; ನಾನು ಫೂಲಸಾಹೇಬನ ವಿಚಾರವಾಗಿ ತಿಳಿಯಬಹುದಾದುದನ್ನೆಲ್ಲ ಪೂರ್ಣವಾಗಿ ತಿಳಿದಿದ್ದೇನೆ. ಅವನ ಭಾವಭಂಗಿಯನ್ನು ನೋಡಿದರೆ, ಇಂದು ಅವನು ನಿಮ್ಮನ್ನು ವಿಪತ್ತಿಗೆ ಸಿಕ್ಕಿಸಬೇಕೆಂದು ಸಂಕಲ್ಪಮಾಡಿರುವಂತೆ ವ್ಯಕ್ತವಾಗುತ್ತದೆ. ನಾನು ಮುಖವನ್ನು ನೋಡಿದ ಮಾತ್ರದಿಂದಲೇ ಅವನ ಮನೋಭಾವ ವನ್ನು ತಿಳಿದುಕೊಳ್ಳಬಲ್ಲೆನು. ಆದ್ದರಿಂದಲೇ ನಿಮ್ಮನ್ನು ಎಚ್ಚರ ಗೊಳಿಸಿದ್ದೇನೆ; ಸಾವಧಾನ! ಬಹು ಜಾಗರೂಕರಾಗಿರಬೇಕು. ಫೂಲ ಸಾಹೇಬನು ಸಾಮಾನ್ಯನಲ್ಲ. ಬಹು ಭಯಂಕರ ಪಿಶಾಚ!—ಎಂದಳು.

ಕುಲಸಮೆಯ ಆ ಆಗ್ರಹಾತಿಶಯದಿಂದಲೂ, ಸರಳತಾಪೂರ್ಣ ವಾಗಿರುವ, ಅವಳ ನಿಷ್ಕಪಟವಾದ ಮಾತುಗಳಿಂದಲೂ ಅರಿಂದಮನ ಮನಸ್ಸಿಗೆ ಒಂದು ಬಗೆಯಾಗಿ ಸಂದೇಹ ತೋರಿತು. ಎಲ್ಲ ವಿಚಾರ ಗಳನ್ನೂ ವಿವರವಾಗಿ ಹೇಳದಿದ್ದರೆ, ನನಗೊಂದೂ ಗೊತ್ತಾಗುವ ಹಾಗಿಲ್ಲ—ಎಂದು ಅರಿಂದಮನು ಹೇಳಿದನು.

ಇಲ್ಲ-ಇಲ್ಲ; ಈಗ ಬೇಡ; ಆ ಪಿಶಾಚನು ಇಷ್ಟರಲ್ಲಿಯೇ ಬಂದು ಬಿಡುವನು—ಈಗ ಅಷ್ಟರ ಅವಕಾಶವಿಲ್ಲ—ಎಂದು ಹೇಳಿ ಕುಲಸಮೆಯು ಭಯದಿಂದ ಒಂದುಸಲ ಹಾಗೂ ಹೀಗೂ ನೋಡಿದಳು.

ಅರಿಂದಮ—ಒಂದುವೇಳೆ ಅವನು ಬಂದರೆ ತಾನೇ ಏನು ಭಯ?

ಕುಲಸಮೆ—ಅದರ ಫಲವನ್ನು ನಾನು ಅನುಭವಿಸಬೇಕಾಗು ವುದು.

ಅರಿಂದಮ.—ನಾನು ಇಲ್ಲಿರುವವರೆಗೂ ಹಾಗಾಗಲಾರದೆಂದು ನಂಬಬಹುದು.

ಕುಲ.—ಅಲ್ಲಿಯವರೆಗೆ ಆಗದಿದ್ದರೂ ಅನಂತರ ಆಗಬಹುದು. ಇಂತಹ ಪಾಪಿಷ್ಠನು ಎಲ್ಲಿಯೂ ಇರಲಿಕ್ಕಿಲ್ಲ. ಮಾತು ಕಥೆಗಳಲ್ಲಿ ಬಹು ಮೃದು, ನಡವಳಿಯಲ್ಲಿ ನಿರ್ವಂಚನೆಯ ಅಭಿನಯ! ಹೀಗಿರುವಾಗ ಅವನ ಮನೋಭಾವದ ಅಂಶಮಾತ್ರವನ್ನಾದರೂ ತಿಳಿಯುವುದಕ್ಕೆ ಯಾರಿಗೆ ಸಾಧ್ಯ? ಅವನ ಬಾಯಲ್ಲಿ ಒಂದೂ ಕಠಿಣವಾದ ಮಾತನ್ನು ಕೇಳಿದ್ದಿಲ್ಲ; ಅವನಿಗೆ ಕೋಪಮಾಡಿಕೊಳ್ಳುವುದೇ ತಿಳಿಯದಹಾಗಿದೆ; ಇಂದು ನಿಮ್ಮ ಸಂಗಡ ಅವನು ಬಹು ಸುಗುಣಶೀಲನಾಮಣಿಯಂತೆ ಹೇಗೆ ಮಾತನಾಡುತ್ತಿರುವನೋ ಅದೇ ರೀತಿಯಾಗಿ, ಇಪ್ಪತ್ತುನಾಲ್ಕು ಗಂಟೆಗಳ ಕಾಲವೂ, ಅವನನ್ನು ಕಾಣಬಹುದು. ಮತ್ತೂ ಇಂದು ನೀವು ಯಾವಳನ್ನು ನೋಡಿದಿರೋ, ಯಾವಳ ವಯಸ್ಸು ನನ್ನ ವಯಸ್ಸಿಗಿಂತ ತುಂಬ ಹೆಚ್ಚಾಗಿಲ್ಲವೋ, ಅವಳು ನಮ್ಮ ಚಿಕ್ಕಮ್ಮ. ಅವಳು ಸಾಧಾರಣಳಲ್ಲ. ನಮ್ಮ ತಂದೆಯ ಮರಣದ ದೆಸೆಯಿಂದ ಅವಳು ಪ್ರಕಾಶಪಡಿಸಿದ ವ್ಯಸನವು ಸಂಪೂರ್ಣವಾಗಿಯೂ ಅಭಿನಯವೇ ಸರಿ. ಇದರಿಂದ ಅವಳು, ಒಳಗೊಳಗೇ, ಎಷ್ಟೋಮಟ್ಟಿಗೆ ಸಂತೋಷಗೊಂಡಿರುವಳು. ಅಯ್ಯೋ, ಎಲ್ಲ ರೀತಿಗಳಿಂದಲೂ ಎಷ್ಟರ ಮಟ್ಟಿಗೆ ಸರ್ವನಾಶವಾಗಬಹುದೋ ಇಂದು ನನಗೆ ಅಷ್ಟೂ ಆಯಿತು. ನನ್ನವರು ತನ್ನವರೆಂದು ಹೇಳಿಕೊಳ್ಳುವುದಕ್ಕೆ ಇಂದು ಯಾರೂ ಇಲ್ಲವಾಯಿತು. ತಂದೆಯಿಲ್ಲ, ತಾಯಿ ಇಲ್ಲ, ಅಣ್ಣತಮ್ಮಂದಿರಿಲ್ಲ; ಯಾರ ಆಶ್ರಯದಲ್ಲಿ ಇರಬೇಕೆಂಬುದೇ ತಿಳಿಯದು. ನನ್ನಗತಿಯೇನೋ ದೇವರೇ ಬಲ್ಲ!

ಕುಲಸಮಳ ಕಣ್ಣುಗಳಲ್ಲಿ ನೀರು ತುಂಬುತ್ತ ಬಂದಿತು. ಅವಳು ಎರಡು ಕೈಗಳಿಂದಲೂ ಮುಖವನ್ನು ಮುಚ್ಚಿಕೊಂಡು ಅಳುವುದಕ್ಕೆ ಮೊದಲು ಮಾಡಿದಳು. ಸಂಪಿಗೆಯ ಮೊಗ್ಗಿನಂತಿರುವ ಅವಳ ಬೆರಲುಗಳ ಪಾರ್ಶ್ವದಲ್ಲೆಲ್ಲಾ ಅವಿರಳವಾಗಿ ಅಶ್ರುಪ್ರವಾಹವು ಹೊರಟು, ಅವಳ

ಎರಡು ಕೈಗಳನ್ನೂ ತೋಯಿಸಿತು. ಅರಿಂದಮನು ಧೈರ್ಯಹೇಳಿ, ಆಗ್ಗೆ, ಅವಳನ್ನು ಸಮಾಧಾನಗೊಳಿಸಿದನು. ಕುಲಸುಮಳು ಹೇಳ ತೊಡಗಿದಳು:—ಫೂಲಸಾಹೇಬನು ನಮ್ಮ ಮನೆಯನ್ನು ಮುಟ್ಟಿದ ಎರಡು ತಿಂಗಳ ನಂತರ ನಮ್ಮ ತಾಯಿ ಪರಲೋಕಗತಳಾದಳು. ಅದಾದ ಹತ್ತು ತಿಂಗಳ ನಂತರ ನನಗಿಂತಲೂ ಎರಡುವರ್ಷ ಚಿಕ್ಕವನಾಗಿದ್ದ ಸಹೋದರನೊಬ್ಬನು ಮೃತನಾದನು. ಅದಾದನಂತರ ಇನ್ನಾರು ತಿಂಗಳು ಕಳೆಯಿತೋ ಇಲ್ಲವೋ ಎನ್ನುವುದರೊಳಗಾಗಿ ನಮ್ಮ ತಂದೆಯ ಆರೋಗ್ಯಭಾಗ್ಯವು ಕೆಟ್ಟಿತು. ಅತನು ಹಠಾತ್ತಾಗಿ ಹಾಸುಗೆ ಹಿಡಿದನು. ಇವುಗಳಲ್ಲೆಲ್ಲಾ ಆ ಪಿಶಾಚನಿಗೆ ಏನೋ ಉದ್ದೇಶ್ಯವು ಇದ್ದೇಯಿರಬೇಕು; ಆ ಪಾಪಿಷ್ಠನು ನನ್ನನ್ನು ಇನ್ನು ಬಹು ದಿನಗಳವರೆಗೆ ಉಳಿಯಿಸುವಂತೆ ತೋರುವುದಿಲ್ಲ.

ಅರಿಂದಮ—ಏಕೆ, ಈ ಮಾತು ಹೇಳುವುದೇಕೆ?

ಕುಲಸುಮ—ನಾನು ಅವನನ್ನು ಮದುವೆಯಾಗದೇ ಹೋದರೆ, ಅವನು ನನ್ನನ್ನು ಜಾಗ್ರತೆಯಾಗಿಯೇ ತೀರಿಸಿಬಿಡುವನು. ಅಂತಹ ನರಾಧಮನನ್ನು ಮದುವೆಯಾಗಿ, ಸಾಯುವವರೆಗೂ ಮರಣ ಸಂಕಟವನ್ನು ಅನುಭವಿಸುವುದಕ್ಕಿಂತ ಅರೆಗಳಿಗೆಯ ಕಾಲದ ಮರಣಯಾತನೆಯು ಸಾವಿರಪಾಲಿಗೆ ಮೇಲು; ಅದಕ್ಕೋಸ್ಕರವಾಗಿಯೇ ಆ ಪಿಶಾಚ—ಇರಲಿ, ಈ ಮಾತು ಇಷ್ಟಕ್ಕೇ ಸಾಕು, ನಾನು ವ್ಯಸನಕರವಾದ ನನ್ನ ಚರಿತ್ರೆಯನ್ನ ಹೇಳುವುದಕ್ಕೆ ಇಲ್ಲಿ ಬಂದವಳಲ್ಲ; ನಿಮ್ಮನ್ನು ಎಚ್ಚರಿಸುವುದಕ್ಕಾಗಿ ಬಂದಿದ್ದೇನೆ. ಈಗಲೂ ನಿಮಗೆ ಹೇಳುತ್ತೇನೆ, ಫೂಲಸಾಹೇಬನ ವಿಚಾರದಲ್ಲಿ ಜಾಗರೂಕರಾಗಿರಿ; ಹತ್ತಿರದಲ್ಲಿಯೇ ಹಾವನ್ನು ಕಂಡಾಗ ಜನರು ಹೇಗೆ ಜಾಗರೂಕತೆಯಿಂದಿರುವುದು ಆವಶ್ಯಕವೋ, ನೀವೂ ಹಾಗೆಯೇ ಜಾಗರೂಕರಾಗಿರಿ. ಅವನು ಇಲ್ಲಿಗೆ ಬಂದು ನಿಮ್ಮನ್ನು ಮೊದಲು ನೋಡಿದಾಗ ಅವನ ಮುಖದ ಭಾವಭಂಗಿಯನ್ನು ನೋಡಿದುದರಲ್ಲಿ, ನಿಮಗೆ ಫೂಲಸಾಹೇಬನ ವಿಚಾರವು ತಿಳಿಯದಿದ್ದರೂ ಅವನಿಗೆ ನಿಮ್ಮ ವಿಚಾರವೆಲ್ಲವೂ ಚೆನ್ನಾಗಿ ತಿಳಿದಿರುವುದೆಂದು

ಗೊತ್ತಾಯಿತು; ಸುಮ್ಮನೆ ತಿಳಿದಿರುವುದು ಮಾತ್ರವೇ ಅಲ್ಲ; ಅವನು ನಿಮ್ಮನ್ನು ಬಹಳವಾಗಿ ದ್ವೇಷಿಸುವನೆಂದೂ ಗೊತ್ತಾಯಿತು. ನಿಮ್ಮ ಹೆಸರನ್ನು ಕೇಳಿದ ಮಾತ್ರದಿಂದ ಅವನ ಕಣ್ಣುಗಳು ಕೆಂಡಗಳನ್ನು ಕಾರುವಂತೆ ತೋರಿದುದನ್ನೂ ಚೆನ್ನಾಗಿ ನೋಡಿದೆ. ಫೂಲಸಾಹೇಬನು ನಿಮ್ಮ ಸಂಗಡ ಸಮ್ಯಭಾವದಿಂದ ಮಾತುಕಥೆಗಳಾಡುತ್ತಿದ್ದರೂ ಅವನ ಆ ವಿನಯದ, ಆ ಸವಿಯಾದ, ಆ ನಗೆಮೊಗದ ಮಾತುಗಳಿಗಿಂತಲೂ ಕೃಷ್ಣಸರ್ಪದ ಗರ್ಜನೆಯೇ ಹಿತಕಾರಿಯೆಂದು ಖಂಡಿತವಾಗಿ ತಿಳಿಯಿರಿ; ಇನ್ನು ನಾನು ಹೊರಟೆ. ಹೀಗೆಂದು ಹೇಳಿ ಕುಲಸಮೆ ಎದ್ದಳು.

ಕುಳಿತುಕೋ, ನನ್ನದೂ ಒಂದು ಮಾತಿದೆ—ಎಂದು ಹೇಳಿ ಅರಿಂದಮನು ಒಂದು ಕಾಗದದ ಚೂರಿನಲ್ಲಿ ತನ್ನ ಹೆಸರು ವಿಳಾಸಗಳನ್ನು ಬರೆದು ಕುಲಸಮೆಯ ಕೈಗೆ ಕೊಟ್ಟು,—ಅವಶ್ಯಕ ಕಂಡು ಬಂದರೆ ಆ ವಿಳಾಸಕ್ಕೆ ವರ್ತಮಾನ ಕೊಡುವುದಕ್ಕೆ ಆಲಸ್ಯಮಾಡಬೇಡ,—ಎಂದೂ ಹೇಳಿದನು.

ಕುಲಸಮೆಯು ತಲೆಯಾಡಿಸಿ ಒಪ್ಪಿಕೊಂಡಳು. ಅನಂತರ ಬೇಗಬೇಗನೆ ಅಲ್ಲಿಂದ ಹೊರಟುಹೋದಳು.

---

## ಐದನೆಯ ಪರಿಚ್ಛೇದ

### ದಾರಿಯಲ್ಲಿ

ಅಷ್ಟುಹೊತ್ತಿಗೆ ಅರಿಂದಮನ ಮನಸ್ಸಿನಲ್ಲಿ ಕುಲಸಮೆಯ ಮಾತುಕತೆಗಳ ವಿಚಾರವಾಗಿ ತರ್ಕವಿತರ್ಕಗಳಾಗುತ್ತಿದ್ದುವು. ಮೊದಲು,—ಕುಲಸಮೆ ಹೇಳಿದುದರಲ್ಲಿ ಎಲ್ಲವೂ ಸಿಕ್ಷ್ಯಯೆಂದು ಹೇಳಲಾಗದಿದ್ದರೂ ಸಂಪೂರ್ಣವಾಗಿ ಸುಳ್ಳೆಂದು ತೋರುವುದಿಲ್ಲ. ಕುಲಸಮೆಯು ಹೇಳಿದ ಪ್ರಕಾರವಾಗಿ ಫೂಲಸಾಹೇಬನು ಅಷ್ಟು ಭಯಂಕರ ವ್ಯಕ್ತಿಯೆ? ಅಷ್ಟರಮಟ್ಟಿಗೂ ಪಿಶಾಚ ಸ್ವಭಾವವುಳ್ಳವನೆ?—ಎಂದು ಭಾವಿಸಿದನು. ಪುನಃ,—ಯಾಕೆ, ಫೂಲಸಾಹೇಬನ ಪರಿಚಯವೇ ನನಗಿಲ್ಲ; ಮನುಷ್ಯನೇನೋ ಒಳ್ಳೆಯವನೆಂದು ತೋರುತ್ತದೆ; ಒಂದು ವೇಳೆ ಕುಲಸಮೆಗೆ,

ಸ್ವಲ್ಪ ಮಟ್ಟಿಗೆ, ಬುದ್ಧಿ ನೆಟ್ಟಗಿಲ್ಲದಿದ್ದರೂ ಇರಬಹುದು; ಅವಳು ನನ್ನ ಸಂಗಡ ಮಾತನಾಡಿದುದನ್ನು ನೋಡಿದರೆ, ಅವಳನ್ನು ಹುಚ್ಚಿ ಎಂದು ಹೇಳುವುದು ತಾನೆ ಹೇಗೆ? ಏನಾದರೂ ಆಗಲಿ, ಈ ಸಡವಳಿಯನ್ನೆಲ್ಲ ಚೆನ್ನಾಗಿಯೇ ನೋಡಬೇಕು; ಇದರಲ್ಲಿ ಅನೇಕ ರಹಸ್ಯಗಳು ಅಡಗಿ ಕೊಂಡಿರುವಂತೆ ಕಾಣುತ್ತದೆ; ಪ್ರಯತ್ನಮಾಡಿ ನೋಡಿದರೆ, ಸಕಾಲದಲ್ಲಿ ಎಲ್ಲವೂ ಬಯಲಿಗೆ ಬಂದೇ ಬರುತ್ತವೆ. ನೋಡೋಣ, ಡಾಕ್ಟರ ಮಹಾ ಶಯನು ಬಂದು ಏನ ಹೇಳುವನೋ!—ಎಂದು ಮುಂತಾಗಿ ಭಾವಿ ಸುತ್ತಿದ್ದನು.

ಅರಿಂದಮನು ಹೀಗೆ ಆಲೋಚನೆಮಾಡುತ್ತ ಕುಳಿತಿರುವ ಹೊತ್ತಿಗೆ ಸರಿಯಾಗಿ ಫೂಲಸಾಹೇಬನು, ನಿಶ್ಯಬ್ದವಾಗಿ, ಅಲ್ಲಿಗೆ ಬಂದನು. ಆಗ ಅವನು ಬಹುಮಟ್ಟಿಗೆ ಚಿಂತೆಯಿಂದ ಕೂಡಿರುವನಂತೆ ಕಂಡಿತು. ಅರಿಂದಮನು ಯಾವ ಮಾತನ್ನೂ ಆಡಲಿಲ್ಲ. ಫೂಲಸಾಹೇಬನು ತನ್ನ ತಪ್ಪನ್ನು ಒಪ್ಪಿಕೊಂಡು,—ಅರಿಂದಮಬಾಬೂ, ಏನೂ ತಿಳಿದುಕೊಳ್ಳ ಬೇಡಿ, ಬಹಳಹೊತ್ತಿನಿಂದ ತಮ್ಮೊಬ್ಬರನ್ನೇ ಕೂಡಿಸಿದ್ದೇನೆ ·· ಎಂದು ಹೇಳಿದನು.

ಅರಿಂದಮ—ಅದಕ್ಕಾಗಿ ನೀವೇನೂ ವ್ಯಥೆಪಡಬೇಕಾಗಿಲ್ಲ; ಮುಖ್ಯ ವಾಗಿ ಮನೆಯ ಹೆಂಗಸರು ಕೊಂಚಮಟ್ಟಿಗೆ ಸಮಾಧಾನಕ್ಕೆ ಬಂದರಷ್ಟೆ?

ಫೂಲಸಾಹೇಬ—ಹೌದು, ಅವರಿಗೆ ಒಂದು ವಿಧವಾಗಿ ಸಮಾಧಾನ ಹೇಳಿ, ಬಹುಮಟ್ಟಿಗೆ ಶಾಂತರನ್ನಾಗಿ ಮಾಡಿಬಂದೆ; ಮತಿಜೀಬಿಯು ನನಗೆ ದೂರಸಂಪರ್ಕೀಯಳಾದೊಬ್ಬ ಆತ್ಮೀಯಳು; ಇಂತಹ ಗುಣವತಿ ಯಾದ ಹೆಂಗಸು ಪ್ರಾಯಃ ಇನ್ನೆಲ್ಲಿಯೂ ಇರಲಾರಳು. ಅವಳಲ್ಲಿ ನನಗೆ ತುಂಬ ವಿಶ್ವಾಸ. ಎಲ್ಲಿ, ಕುಲಸಮ್? ಅಲ್ಲಿ ಎಲ್ಲಿಯೂ ಕಾಣಲಿಲ್ಲ. ಅವಳು ಪುನಃ ಅತ್ತು ರಗಳೆ ಮಾಡುವುದಕ್ಕೆ ಇಲ್ಲಿಗೆ ಬಂದಿದ್ದಳೇನು?

ಅರಿಂದಮನು ಮಂದಹಾಸದಿಂದ,—ಹಾಗೇನೂ ಇಲ್ಲ, ಅವಳು ಅತ್ತು ರಗಳೆಮಾಡುವುದಕ್ಕಾಗಿ ಇಲ್ಲಿಗೆ ಪುನಃ ಬರಲಿಲ್ಲ—ಎಂದು ನಿಜವನ್ನೇ ಹೇಳಿದನು.

ಫೂಲಸಾಹೇಬ—ಇನ್ನು ದಯೆಮಾಡಿ, ಒಟ್ಟಿಗೆ ಹೊರಟು ಬಿಡೋಣ.

ಅರಿಂದಮನು ಎದ್ದನು. ಇಬ್ಬರೂ ಅಲ್ಲಿಂದ ಹೊರಟು ನೇರವಾದ ಒಂದು ರಸ್ತೆಯನ್ನು ಹಿಡಿದರು.

* * * * * *

ಅದೂ ಇದೂ ಮಾತುಗಳಾಡುತ್ತ ಸ್ವಲ್ಪದೂರ ಬಂದಮೇಲೆ, ಫೂಲಸಾಹೇಬನು—ತಮ್ಮ ಪ್ರಯಾಣ ಎಲ್ಲಿಯವರೆಗೆ? ಈಗ ತಾವು ರಘುನಾಥಪುರಕ್ಕೇ ಹಿಂದಿರುಗುವಿರೇನು?—ಎಂದು ಅರಿಂದಮನನ್ನು ಕೇಳಿದನು.

ಅರಿಂದಮ—ಇಲ್ಲ, ಈಗ ನಮ್ಮ ಸ್ಥಳವಾದ ಕಾಮದೇವಪುರಕ್ಕೇ ಹೋಗುತ್ತೇನೆ.

ಫೂಲಸಾಹೇಬ—ಇನ್ನು ಕೆಲವು ದಿನಗಳತನಕ ಇಲ್ಲಿಯೇ ಇರುವ ಹಾಗೆಯೋ?

ಅರಿಂದಮ—ಹೌದು, ಒಂದು ಕೆಲಸವಿದೆ; ಇಲ್ಲಿಯೇ ಕೆಲವುದಿನ ನಿಲ್ಲಬೇಕಾಗುವುದೆಂದು ತೋರುತ್ತದೆ.

ಫೂಲಸಾಹೇಬ—ಕಾಮದೇವಪುರದಲ್ಲಿ ನಮ್ಮವರೊಬ್ಬಿಬ್ಬರು ರೋಗಿಗಳಿರುವುದರಿಂದ ನಾನೂ ಆಗಾಗ್ಗೆ ಅಲ್ಲಿಗೆ ಬರುತ್ತಲೇ ಇರುತ್ತೇನೆ. ಈ ಸಲ ಅಲ್ಲಿಗೆ ಬಂದಾಗ ತಮ್ಮನ್ನು ನೋಡಿಬರುವ ಪ್ರಯತ್ನ ಮಾಡುತ್ತೇನೆ.

ಅರಿಂದಮ—ತುಂಬ ಸಂತೋಷ.

ಅನಂತರ ಸ್ವಲ್ಪದೂರ ನಡೆದು ಫೂಲಸಾಹೇಬನು ಒಂದು ಹೊಗೆಯ ಸುತ್ತನ್ನು ತೆಗೆದು ಅದಕ್ಕೆ ಬೆಂಕಿ ಹೊತ್ತಿಸಿದನು. ಹಾಗೆಯೇ ಅರಿಂದಮನನ್ನ ನೋಡಿ,—ಮಹಾಶಯರಿಗೆ ಹೊಗೆಯಸುತ್ತು ಸೇದುವ ಅಭ್ಯಾಸವಿದೆಯೆ?—ಎಂದು ಕೇಳಿದನು.

ಅರಿಂದಮನು—ಆಗಾಗ ಸೇದುವ ವಾಡಿಕೆಯೇನೋ ಉಂಟು, ಆದರೆ, ಅದಿಲ್ಲದೆ ತೀರದು ಎನ್ನುವಷ್ಟು ಅಭ್ಯಾಸವಿಲ್ಲ—ಎಂದು ನಗುತ್ತಾ ಹೇಳಿದನು.

ಫೂಲಸಾಹೇಬ—ನನ್ನ ಇದೊಂದು ಸುತ್ತು ಸೇದಿರಿ? ಇದರ ರೀತಿಯೇ ಬೇರೆ–ಎಂಬುದು ಗೊತ್ತಾಗುವುದು.

ಹೀಗೆಂದು ಹೇಳಿ ಫೂಲಸಾಹೇಬನು ಜೇಬಿನಿಂದ ಇನ್ನೊಂದು ಸುತ್ತನ್ನು ತೆಗೆದು ಅರಿಂದಮನ ಕೈಗೆ ಕೊಟ್ಟನು.

ಅರಿಂದಮನು ಸುತ್ತನ್ನು ತೆಗೆದುಕೊಂಡು,—ಈಗ್ಗೆ ಇರಲಿ, ಇನ್ನೊಂದು ಸಮಯದಲ್ಲಿ ಉಪಯೋಗಿಸುತ್ತೇನೆ, ಈಗ ಶರೀರ ಸ್ಥಿತಿಯು ಅಷ್ಟು ಚೆನ್ನಾಗಿಲ್ಲ—ಎಂದು ಹೇಳಿದನು.

ಫೂಲಸಾಹೇಬ—ಒಳ್ಳೆಯದು, ತಮಗೆ ಬೇಕಾದಾಗ ಅದನ್ನು ಉಪಯೋಗಿಸಿ ನೋಡಿರಿ; ಇಂತಹ ಉತ್ಕೃಷ್ಟತರವಾದ ಸುತ್ತನ್ನು ತಾವು ಎಂದೂ ಉಪಯೋಗಿಸಿದ್ದಿಲ್ಲವೆಂದು ಆಗ ತಮಗೇ ವೇದ್ಯವಾಗುವುದು. ನನ್ನ ಸ್ವಂತ ಉಪಯೋಗಕ್ಕೋಸ್ಕರ ಈ ಸುತ್ತನ್ನು ನನ್ನ ಕೈಯ್ಯಾರ ತಯಾರಿಸಿದ್ದೇನೆ. ಇದರ ವಾಸನೆ ಇತರ ಸುತ್ತುಗಳ ವಾಸನೆಯ ಹಾಗಲ್ಲ. ಇತರ ಸುತ್ತುಗಳಲ್ಲಿ ಇಲ್ಲದೇ ಇರುವ ಅನೇಕ ಗುಣಗಳು ಇದರಲ್ಲಿ ಉಂಟು ; ಮುಖ್ಯವಾಗಿ ಬಾಯಿಯ ದುರ್ಗಂಧವೂ, ಹಲ್ಲಿಗೆ ಸಂಬಂಧಿಸಿದ ಯಾವುದೇ ರೋಗವಾದರೂ ಇದರಿಂದ ಸಂಪೂರ್ಣವಾಗಿ ನಿವಾರಿಸಲ್ಪಡುವುದು. ತಾವು ಇದೊಂದನ್ನು ಉಪಯೋಗಿಸುವುದರಿಂದ ಎಲ್ಲವೂ ನಿಮ್ಮ ಅನುಭವಕ್ಕೇ ಬರುತ್ತದೆ.

* * * * * *

ಅನಂತರ ಅವರು ಅದೂ ಇದೂ ಮಾತನಾಡುವುದರಲ್ಲಿ ಮತ್ತೂ ಸ್ವಲ್ಪ ದಾರಿ ಸಾಗಿತು. ಅವರಿಬ್ಬರೂ ಮಾತನಾಡುತ್ತಾ ಕಾಮದೇವಪುರದ ರಸ್ತೆಯ ಬಳಿಗೆ ಬಂದಾಗ,—ಡಾಕ್ಟರ ಬಾಬೂ, ನನಗಿನ್ನು ಅಪ್ಪಣೆಯೆ ?—ಎಂದು ಅರಿಂದಮನು ಕೇಳಿದನು.

ಫೂಲಸಾಹೇಬನು ಕುತ್ತಿಗೆಯನ್ನು ಆಡಿಸುತ್ತಾ, ಕೇವಲ ಸೌಜನ್ಯಭಾವವನ್ನು ತೋರ್ಪಡಿಸಿ, ಓಹೊ! ತಾವು ಈ ಮಾರ್ಗವಾಗಿಯೇ ಹೋಗಬೇಕು. ತಮ್ಮ ಪರಿಚಯವಾದ್ದರಿಂದ ತುಂಬ ಸಂತೋಷವಾಯಿತು. ತಾವು ದಯೆಮಾಡಿ, ಸಾಯಂಕಾಲವಾಗುತ್ತ ಬಂತು; ತಾವಿನ್ನೂ ಬಹುದೂರ ಹೋಗಬೇಕು—ಎಂದು ಹೇಳಿದನು.

ಫೂಲಸಾಹೇಬನು ತನ್ನ ಮನೆಯ ಕಡೆ ಹೊರಟನು. ಅರಿಂದಮನು ಆಲೋಚನಾಪರನಾಗಿ ಕಾಮದೇವಪುರದ ಹಾದಿ ಹಿಡಿದು ಬೇಗ ಬೇಗ ನಡೆಯುತ್ತಾ ಹೊರಟನು.

---

## ಆರನೆಯ ಪರಿಚ್ಛೇದ

### ಕುಲಸಮಯ ವಿಚಾರವಾಗಿ

ಫೂಲಸಾಹೇಬನು ಸಾಯಂಕಾಲವಾಗುತ್ತ ಬಂತೆಂದು ಹೇಳಿದಾಗ ಸಂಧ್ಯೆಯು ಕಳೆದೇ ಹೋಗಿದ್ದಿತು. ಈ ಸಮಯದಲ್ಲಿ ಕಾಮದೇವಪುರದ ದಾರಿ ಜನಶೂನ್ಯವಾಗಿತ್ತು. ಒಂದೊಂದು ಸಲ ಒಬ್ಬಿಬ್ಬರು ಹೋಗಿ ಬರುತ್ತಿರುವರು. ರಸ್ತೆಯ ಎರಡು ಪಕ್ಕಗಳಲ್ಲಿ ಚಿಕ್ಕವೂ ದೊಡ್ಡವೂ ಗಿಡಗಳು, ಪೊದೆಗಳು, ದೊಡ್ಡ ದೊಡ್ಡ ಮರಗಳು; ಕೆಲವು ಕಡೆ ದೊಡ್ಡದೊಡ್ಡ ಬಿದಿರುಮೆಳೆಗಳು ರಸ್ತೆಯ ಮೇಲ್ಭಾಗಕ್ಕೆ ಬಾಗಿ ನಿಂತು ಅಲ್ಲಿಯ ರಸ್ತೆಯನ್ನು ಸಂಪೂರ್ಣವಾಗಿ ಕತ್ತಲು ಮಾಡಿರುವುವು. ಬಿದಿರಿಗೆ ಬಿದಿರು ಉಜ್ಜುವುದರಲ್ಲಿ ಒಂದೊಂದು ಸಲ ವಿಕಟತರವಾದ ಶಬ್ದವಾಗುವುದು. ಆ ಅಂಧಕಾರದಲ್ಲಿ ನರಿಗಳು ಇತ್ತಕಡೆಯಿಂದ ಅತ್ತಕಡೆಗೂ ಅತ್ತಕಡೆಯಿಂದ ಇತ್ತಕಡೆಗೂ ರಸ್ತೆಯ ಮೇಲೆ ಓಡಾಡುವುವು; ಒಂದೊಂದು, ದೂರವಾದ ವನ ಮಧ್ಯಕ್ಕೆ ಹೋಗಿ ಅರಚುತ್ತಾ ತಾವು ಅಲ್ಲಿರುವೆವೆಂಬ ನಿನಾದವನ್ನು ದಿಗ್ದಿಗಂತಗಳವರೆಗೂ ಹರಡುತ್ತಿರುವುವು. ಇದರಿಂದ ತನ್ನ ನಿದ್ರೆಗೆ ಆತಂಕವಾಗುವುದನ್ನು ಕಂಡು,

ಸಮೀಪದ ಗ್ರಾಮಗಳಲ್ಲಿ ದಣಿದಿರುವ ನಾಯಿಗಳು ಸುಮ್ಮನಿರಬೇಕೆಂದು ನರಿಗಳಿಗೆ ಅಪ್ಪಣೆ ಮಾಡುವವೋ ಎನ್ನುವ ಹಾಗೆ ಕರ್ಕಶ ಕಂಠದಿಂದ ಗದರಿಸುತ್ತಾ ತಮ್ಮ ಯಜಮಾನ್ಯವನ್ನು ಬಾರಿ ಬಾರಿಗೂ ವ್ಯಕ್ತಪಡಿಸುತ್ತಿರುವುವು. ತಲೆಯ ಮೇಲ್ಭಾಗದಲ್ಲಿ ದಟ್ಟವಾದ ಬಿದಿರು ಮೊದೆ, ಅರಳಿ ಆಲ ಮುಂತಾದ ದೊಡ್ಡ ದೊಡ್ಡ ಮರಗಳ ದಟ್ಟವಾದ ಕೊಂಬೆಗಳು ಅವುಗಳ ಮೇಲ್ಭಾಗದಲ್ಲಿರುವ ಕಪ್ಪು ಮೋಡಗಳಿಂದ ತುಂಬಿರುವ ನೀರವವಾದ ಆಕಾಶ-ಸಂಧ್ಯೆಯೊಡನೆ ಸ್ವಾಗತ ಸಂಭಾಷಣೆ ಮಾಡುವ ಮೊದಲೇ ಅರಿಂದಮನು ಕಾಮದೇವಪುರದ ಮಾರ್ಗದಿಂದ ಹೋಗಿಬರುವುದಕ್ಕೆ ಅಪ್ಪಣೆಗೊಂಡು ಉತ್ಸಾಹಿಯಾಗಿರುವನು. ಆ ಅಂಧಕಾರಮಯವಾದ ದಾರಿಯಲ್ಲಿ ಪ್ರಯಾಣಮಾಡುತ್ತಿರುವಾಗಲೂ ಅರಿಂದಮನು ಕುಲಸಮೆ ಮತ್ತೂ ಫೂಲಸಾಹೇಬರ ವಿಚಾರವಾಗಿಯೇ ಆಲೋಚಿಸುತ್ತಲಿದ್ದನು. ಕುಲಸಮೆಯು ತನಗೆ ಫೂಲಸಾಹೇಬನ ವಿಚಾರವಾಗಿ ಏನೇನೋ ಹೇಳಿದಳು; ಆದರೆ ಫೂಲಸಾಹೇಬನು ಅಂತಹ ಭಯಂಕರ ಮನುಷ್ಯನೆಂದು ಹೇಗೂ ಕಾಣಲಿಲ್ಲ; ಫೂಲಸಾಹೇಬನು ಮೊದಲಿಂದ ಕಡೆಯತನಕ ಕೇವಲ ಮರ್ಯಾದವಂತನ ಹಾಗೆಯೇ ವ್ಯವಹರಿಸಿದ್ದಾನೆ. ಕುಲಸಮೆಯ ಮಾತು ಕೇಳಿದಾಗ, ದಾರಿಯಲ್ಲಿ ಒಂಟಿಗನಾದ ತನ್ನ ಮೇಲೆ ಫೂಲಸಾಹೇಬನು ಚೂರಿ ಅಥವಾ ಪಿಸ್ತೂಲನ್ನು ಹಿಡಿದಾಗಲೀ ಅಥವಾ ಮತ್ತೆ ಯಾವ ವಿಧದಿಂದಲಾಗಲೀ ತನಗೆ ವಿಪತ್ತುಂಟುಮಾಡಬಹುದೆಂದು ಅರಿಂದಮನು ಭಾವಿಸಿದ್ದನು. ಆದರೆ ಆ ಬಗೆಯ ಯಾವ ಪ್ರಯತ್ನವೂ ಅರಿಂದಮನ ದೃಷ್ಟಿಗೆ ಬೀಳಲಿಲ್ಲ; ಆದುದರಿಂದ, ಕುಲಸಮೆಯ ನುಡಿಗಳು ಕಾರಣಾಂತರದಿಂದ ಕೆಟ್ಟುಹೋಗಿರಬೇಕು; ಕಾರಣಾಂತರದಿಂದ ಫೂಲಸಾಹೇಬನ ಮೇಲೆ ಮಹಾ ರೋಷವುಂಟಾಗಿರಬೇಕು-ಎಂದು ಮನಸ್ಸಿನಲ್ಲಿಯೇ ಊಹಿಸಿದನು. ಏನಾದರಾಗಲಿ, ಫೂಲಸಾಹೇಬನ ವಿಚಾರವಾಗಿ ಈಗ ಆಲೋಚಿಸುವುದಕ್ಕೆ ಅವಕಾಶವಿಲ್ಲ. ಪ್ರಕೃತದಲ್ಲಿ ಮಾಡಬೇಕಾದ ಕೆಲಸಗಳು ಅನೇಕವಾಗಿರುವುದರಿಂದ ಅವುಗಳನ್ನು ಮೊದಲು ಮುಗಿಯಿಸಬೇಕಾಗಿದೆ ಎಂದೂ ಅಂದುಕೊಂಡನು.

ಯಥಾಸಮಯದಲ್ಲಿ ಕಾಮದೇವಪುರಕ್ಕೆ ಬಂದು, ಮನೆಗೆ ಹೋಗುವುದಕ್ಕೆ ಮೊದಲೇ ಅರಿಂದಮನು ಯೋಗೇಂದ್ರನಾಥನನ್ನು ನೋಡಬೇಕೆಂದು ಠಾಣೆಗೆ ಬಂದನು. ಆ ಸಮಯದಲ್ಲಿ ಯೋಗೇಂದ್ರನಾಥನು ಅಲ್ಲಿ ಕುಳಿತು ಅತ್ಯಾವಶ್ಯಕವಾದ ಒಂದೆರಡು ಕಾಗದಗಳನ್ನು ಬರೆಯಲು ಮನಗೊಟ್ಟಿದ್ದನು, ಅರಿಂದಮನನ್ನು ನೋಡಿ, ಲೇಖನಿಯನ್ನು ಸನ್ಯಕ್ಕೆ ಹಾಗೆಯೇ ಕೆಳಗಿಟ್ಟು ಆತುರದಿಂದ ಎದ್ದು, ಅರಿಂದಮನನ್ನು ಕುಳಿತುಕೊಳ್ಳಬೇಕೆಂದು ಹೇಳಿ ಆತನ ಹತ್ತಿರದಲ್ಲಿಯೇ ಇದ್ದ ಇನ್ನೊಂದು ಕುರ್ಚಿಯಮೇಲೆ ತಾನು ಕುಳಿತುಕೊಂಡನು; ಹಾಗೆಯೇ,—ಅರಿಂದಮಬಾಬೂ! ಹತಾತ್ಮಾ! ಒಂದುದೇನೋ ತಿಳಿಯಲಿಲ್ಲ. ಆ ಹುಡುಗಿಯ ಶವದೇಹದ ಮೊಕದ್ದಮೆಯ ವಿಚಾರ ಏನಾದರೂ ಸಾಧ್ಯವಾಯಿತೋ?—ಎಂದು ಪ್ರಶ್ನೆ ಮಾಡಿದನು.

ಅರಿಂದಮ—ಇಲ್ಲ, ಈವರೆಗೆ ಏನೂ ಮಾಡುವುದಕ್ಕಾಗಲಿಲ್ಲ.

ಯೋಗೇಂದ್ರ—ರೇವತಿಗೆ ಸಂಬಂಧಿಸಿದ ವಿಚಾರಗಳಲ್ಲಿ ಕೇಶವ ಸಂಬವನು ಯಾವ ಎನ್ನುವುದೇನಾದರೂ ಬಹಿರಂಗಪಟ್ಟಿತೋ?

ಅರಿಂದಮ—ಇಲ್ಲ, ಆಗಿದ್ದಪಕ್ಷದಲ್ಲಿ ಇಲ್ಲಿಗೆ ವರ್ತಮಾನ ಬಂದೇ ಬರುತ್ತಲಿದ್ದಿತು. ಆ ಮಾತು ಹಾಗಿರಲಿ, ಈಗ ನಾನು ಇನ್ನೊಂದು ವಿಚಾರವನ್ನು ಕೇಳಿ ತಿಳಿಯಬೇಕೆಂದು ಬಂದೆ; ಫೂಲಸಾಹೇಬನೆಂಬವನನ್ನು ನೀವು ಬಲ್ಲಿರಾ?

ಯೋಗೇಂದ್ರ—ಫೂಲಸಾಹೇಬನೇ? ಇಲ್ಲಿಯವರೆಲ್ಲರೂ ಆತನನ್ನು ಬಲ್ಲರು.

ಅರಿಂದಮ—ಬಲ್ಲರೂ ಅವನನ್ನೇಕೆ ಬಲ್ಲರೋ ಆ ಕಾರಣ ನಿಮಗೆ ತಿಳಿದಿದೆಯೇ?

ಯೋಗೇಂದ್ರ—ಆ ಮನುಷ್ಯನು ವೈದ್ಯವಿದ್ಯೆಯಲ್ಲಿ ತುಂಬಾ ಗಟ್ಟಿಗ. ಇಲ್ಲಿ ಅನೇಕರ ಮನೆಗಳಲ್ಲಿ ಫೂಲಸಾಹೇಬನು ಚಿಕಿತ್ಸೆಮಾಡಿದ್ದಾನೆ. ಇದೇನು ಅರಿಂದಮಬಾಬೂ, ತಾವು ಅವನ ಮಾತನ್ನು ಒಂದುನೂರು ತರನಾಗಿ ಕೇಳುತ್ತಿದ್ದೀರಲ್ಲ, ಕಾರಣವೇನು?

ಅರಿಂದಮ—ಮೊದಲು ನನ್ನ ಪ್ರಶ್ನೆಗೆ ಉತ್ತರ ಹೇಳೋಣಾಗಲಿ, ಅನಂತರ ನಿಮ್ಮ ಮಾತಿಗೆ ಜವಾಬು ಹೇಳುತ್ತೇನೆ. ನೀವು ತಮಾಬುದ್ದೀನ ನನ್ನು ಬಲ್ಲಿರಾ?

ಯೋಗೇಂದ್ರ—ತಿಳಿಯದೇ ಏನು, ಆತನೊಬ್ಬ ದೊಡ್ಡ ಜಮೀನು ದಾರ.

ಅರಿಂದಮ—ಆತನು ಅತುಲೈಶ್ವರ್ಯಶಾಲಿಯಂತೆ, ಹೌದೆ?

ಯೋಗೇಂದ್ರ—ಹೌದು; ಆತನ ವಿಚಾರವು ನನಗೆ ಕೊಂಚ ಕೊಂಚ ತಿಳಿದಿದೆ.

ಅರಿಂದಮ—ಹೇಳಿ ನೋಡೋಣ.

ಯೋಗೇಂದ್ರ—ಎರಡು ವರ್ಷಗಳಿಂದೀಚೆಗೆ, ಆತನ ಶರೀರಸ್ಥಿತಿ ಕೆಟ್ಟುದರಿಂದ ಆತನು ಈಗ ಹಾಸಿಗೆ ಹಿಡಿದಿರುವನು. ಇಷ್ಟರೊಳಗಾಗಿ ಆತನ ಹೆಂಡತಿ ಸತ್ತುಹೋದಳು; ಆದಾದಮೇಲೆ ಆತನು ಪುನಃ ಮದುವೆಯಾಗಲು ಇಷ್ಟಪಟ್ಟನು; ಆದರೆ ಆತನ ಮಗಳು ಮತ್ತೆ ಮದುವೆ ಮಾಡಿಕೊಳ್ಳದೇ ಇರುವ ಹಾಗೆ ಪ್ರಯತ್ನಮಾಡುತ್ತಿದ್ದಾಳೆ. ತಮಾಬುದ್ದೀನನಿಗೆ ತನ್ನ ಮಗಳಲ್ಲಿ ಅತಿಶಯವಾದ ಪ್ರೀತಿ. ತಾನು ಮದುವೆಯಾದ ವಿಚಾರವು ಅವಳಿಗೆ ಎಲ್ಲಿಯಾದರೂ ತಿಳಿದೀತೆಂದು ಭಾವಿಸಿ ರಹಸ್ಯವಾಗಿ ಮದುವೆಯಾದನು; ಅಲ್ಲದೆ ಆತನು ಯಾವಳನ್ನು ವಿವಾಹಮಾಡಿಕೊಂಡನೋ ಅವಳು ಈ ಡಾಕ್ಟರ್ ಫೂಲಸಾಹೇಬನಿಗೆ ಸಮೀಪ ಸಂಬಂಧಿಯಾದವರ ಮಗಳು. ಆ ಕಾರಣದಿಂದ ಈ ಮದುವೆಯ ಕಾರ್ಯಕ್ಕೆ ಫೂಲಸಾಹೇಬನೇ ಮುಂದಾಳಾಗಿ ಪ್ರಯತ್ನ ಮಾಡಿದನು. ಮದುವೆಯಾಗುವುದಕ್ಕೆ ಮೊದಲು ಒಳಗೊಳಗೇ ಸ್ವಸ್ಥನಾದ ತಮಾಬುದ್ದೀನನು ಒಂದು ಕುಶಲತೆಯ ಕೆಲಸವನ್ನು ಮಾಡಿಸಿದ್ದನು. ಅವನು ತನಗಾಗಿ ಸ್ವಲ್ಪವನ್ನು ಉಳಿಸಿಕೊಂಡು ಉಳಿದ ಚರಸ್ಥಿರ ಜಿಂದಗಿಯನ್ನೆಲ್ಲಾ ತನ್ನ ಮಗಳ ಹೆಸರಿಗೆ ದಾನಪತ್ರವನ್ನು ಬರೆದಿಟ್ಟಿರುವನು; ಇದಾದ ಕೊಂಚ ದಿನಗಳಲ್ಲಿಯೇ ಇದೆಲ್ಲವನ್ನೂ ಅವನ ಎರಡನೆಯ ಹೆಂಡತಿ ತಿಳಿದುಕೊಂಡಳು. ಅನಂತರ

ತಾನು ಆತ್ಮಹತ್ಯೆಮಾಡಿಕೊಳ್ಳುವುದಾಗಿ ಆಡಿಗಡಿಗೂ ಗಂಡನನ್ನು ಹೆದರಿಸುತ್ತಿದ್ದಳು; ಕಾರಣವೇನೆಂದರೆ,—ಮದುವೆಗೆ ಮೊದಲೇ ದಾನಪತ್ರವಾಗಿಹೋಗಿರುವುದರಿಂದ ಗಂಡನು ಸತ್ತನಂತರ ತನಗೆ ಒಂದು ಕವಡೆಯೂ ಸಿಕ್ಕುವ ಹಾಗಿಲ್ಲವೆಂದು. ಆದಕಾರಣ ಅವಳು ಒಂದೊಂದು ರಾತ್ರಿ ಹಗ್ಗ ಹಿಡಿದುಕೊಂಡು ಅಲೆದಾಡುತ್ತಿದ್ದಳು. ಒಂದೊಂದು ವೇಳೆ ಅವಳ ಪೆಟ್ಟಿಗೆಯಲ್ಲಿ ಅಫೀಮು ಸಹ ಇಟ್ಟಿರುತ್ತಿದ್ದಳು. ಇದರಿಂದ ತಮಿಜಾಬುದ್ದೀನನು ಪೂರಾ ಇಕ್ಕಟ್ಟಿಗೆ ಸಿಕ್ಕಿದನು. ನಾನು ಕೇಳಿದ್ದರಲ್ಲಿ ಇವೆಲ್ಲವೂ ಆದಮೇಲೆ ತಮಿಜಾಬುದ್ದೀನನು ತನ್ನ ಮಗಳನ್ನು ಸಮಾಧಾನಪಡಿಸಿ, ಎಷ್ಟೋ ಬಗೆಯಾಗಿ ಬುದ್ಧಿಹೇಳಿ ಒಂದುಲಕ್ಷ ರೂಪಾಯಿಗಳನ್ನು ಅವಳಿಂದ ಬೇಡಿ ತೆಗೆದುಕೊಂಡು ಆ ಹಣವು ತನ್ನ ಸಂತತಿಗೆ ಸೇರತಕ್ಕದೆಂದು ಮರಣಪತ್ರವನ್ನು ಬರೆದಿಟ್ಟನು.

---

## ಏಳನೆಯ ಪರಿಚ್ಛೇದ

### ಫೂಲಸಾಹೇಬನ ವಿಚಾರವಾಗಿ

ಅರಿಂದಮ—ತಮಿಜಾಬುದ್ದೀನನು ಸತ್ತುಹೋದನಷ್ಟೆ!

ಯೋಗೇಂದ್ರನಾಥನು ವಿಸ್ಮಯದಿಂದ—"ಏನು ಹೇಳಿದಿರಿ?"

ಅರಿಂದಮ—ಇಂದು ಸಂಜೆಗೆ ಮೊದಲು ಅವನು ನನ್ನ ಕೈ ಮೇಲೆಯೇ ಮೃತನಾದನು.

ಯೋಗೇಂದ್ರ—ಆಮೇಲಾಮೇಲೆ!

ಅರಿಂದಮ—ಆಮೇಲೇನು—ಈಗ ಅವನ ಮಗಳೇ ಸಮಸ್ತವಾದ ಸಂಪತ್ತಿಗೂ ಅಧಿಕಾರಿಣಿಯಾದಳು.

ಯೋಗೇಂದ್ರ—ಅದು ಆಗಬೇಕಾದ್ದೇ ಹಾಗೆ.

ಅರಿಂದಮ—ಆ ಆಸ್ತಿಯು ಒಟ್ಟು ಎಷ್ಟಾಗಬಹುದು?

ಯೋಗೇಂದ್ರ—ಸುಮಾರು ಇಪ್ಪತ್ತು ಲಕ್ಷ ರೂಪಾಯಿಗಳಾಗ ಬಹುದು.

ಅರಿಂದಮ—ಇಪ್ಪತ್ತು ಲಕ್ಷ! ಇಪ್ಪತ್ತು ಲಕ್ಷವೆ? ಒಳ್ಳೆಯದು; ಇಪ್ಪತ್ತು ಲಕ್ಷವೇ ಆಗಲಿ—ಫೂಲಸಾಹೇಬನಿಗೆ ಇನ್ನೂ ಮದುವೆಯಿಲ್ಲ ವೇನು?

ಯೋಗೇಂದ್ರ—ಮದುವೆಯಾಗಿರಬೇಕು, ಈಗ ಅವನ ಹೆಂಡತಿ ಸತ್ತುಹೋಗಿದ್ದರೂ ಇರಬಹುದು. ಈ ಪ್ರಶ್ನೆಗೆ ಈಗ ಕಾರಣವೇನು?

ಅರಿಂದಮ—ಕೇಳುವುದರಲ್ಲಿ ತಪ್ಪೇನು? ಹಠಾತ್ತಾಗಿ ಈ ಮಾತು ಜ್ಞಾಪಕಕ್ಕೆ ಬಂದಿತು; ಅದನ್ನೇ ಕುರಿತು ನಿಮ್ಮನ್ನು ಕೇಳಿದೆ.

ಯೋಗೇಂದ್ರ—ನನಗೆ ಇವೆಲ್ಲವನ್ನೂ ಮರೆಮಾಚುವುದು ನಿಮಗೆ ನ್ಯಾಯವೆ?

ಅರಿಂದಮ—ತಮಿಜುದ್ದೀನನ ಮಗಳನ್ನು ಈಗ ಫೂಲಸಾಹೇ ಬನು ಮದುವೆಯಾಗುವ ಪ್ರಯತ್ನದಲ್ಲಿದ್ದಾನೆ.

ಯೋಗೇಂದ್ರ—ಸರಿ, ಫೂಲಸಾಹೇಬನು ಬಹು ಚತುರ! ಅವನನ್ನು ನೋಡಿದರೇ ಅದು ಚೆನ್ನಾಗಿ ಗೊತ್ತಾಗುವುದು. ಆದರೆ ತಮಿಜುದ್ದೀ ನನ ಮಗಳ ತಲೆ ಸ್ವಲ್ಪ ನೆಟ್ಟಗಿಲ್ಲವೆಂದು ಕೇಳಿದ್ದೇನೆ.

ಅರಿಂದಮ—ಅದಿರಲಿ, ಫೂಲಸಾಹೇಬನು ನೋಡುವುದಕ್ಕೆ ಹೇಗಿ ರುವನೋ ಹೇಳಿ ಕೇಳೋಣ. ಅವನನ್ನು ನೋಡದವರೂ ಕೂಡ ಅವನನ್ನು ನೋಡಿದ ಕೂಡಲೇ ಅವನೇ ಇವನೆಂದು ಗುರ್ತಿಸುವಹಾಗೆ ಹೇಳಬೇಕು. ಆಗಾಗ್ಗೆ, ಪಲಾಯನಮಾಡಿದ ಕೊಲೆಪಾತಕಿಗಳನ್ನು ಹಿಡಿಯುವುದಕ್ಕೋಸ್ಕರ ರೂಪವರ್ಣನೆ ಮಾಡಿ ನಾಲ್ಕು ಕಡೆಗೂ ಇಸ್ತಿಹಾರು ಕಳುಹಿಸುವಿರಲ್ಲಾ ಈ ವರ್ಣನೆಯು ಕೂಡ 'ಠೀಕ್' ಹಾಗೆಯೇ ಇರಬೇಕು.

ಯೋಗೇಂದ್ರ—ಹೇಳುತ್ತೇನೆ; ಆದರೆ ತಮ್ಮ ಈ ಎಲ್ಲ ಮಾತುಗಳ ಅಭಿಪ್ರಾಯವೇನೆಂಬುವುದೇ ನನಗೆ ತಿಳಿಯುವ ಹಾಗಿಲ್ಲ.

ಅರಿಂದಮ—ಇನ್ನು ಮುಂದೆ ತಿಳಿಯುವಿರಿ. ಈಗ ಒಂದು ಸಲ ಫೂಲಸಾಹೇಬನ ರೂಪವರ್ಣನೆ ಮಾಡಿ, ನೋಡೋಣ.

ಯೋಗೇಂದ್ರ—ಮನುಷ್ಯನು ದಪ್ಪ.

ಅರಿಂದಮ—ದಪ್ಪ ಎಂದರೆ ಹೇಗೆ ಹೇಳಿರಿ, ಸಾಧಾರಣವಾಗಿ ಜನರು ದುಂಡು ದುಂಡಾಗಿರುವರಲ್ಲಾ ಆ ರೀತಿಯೋ, ಅಥವಾ ಗರಡೀ ಸಾಧಕಗೀಧಕಗಳನ್ನು ಮಾಡುವುದರಿಂದ ಮೈಪುಷ್ಟಿಯಾಗಿರುವುದಲ್ಲಾ ಹಾಗೆಯೊ ?

ಯೋಗೇಂದ್ರ—ಒಟ್ಟಿನಲ್ಲಿ ಒಂದು ಬಗೆಯಾಗಿ ದುಂಡು ದುಂಡಾಗಿರುವನೆಂದು ತಿಳಿಯಬಾರದೆ? ಎತ್ತರದಲ್ಲಿ ಸುಮಾರು ಐದೂವರೆ ಅಡಿಗಳಿಗೆ ಹೆಚ್ಚಿಲ್ಲ; ಗೌರವರ್ಣ, ವಯಸ್ಸು ನಾಲ್ವತ್ತರ ಹತ್ತಿರ ಹತ್ತಿರ, ಮುಖವು ಸ್ವಲ್ಪ ದುಂಡಾಗಿದೆ, ಕೆನ್ನೆಯ ಒಂದು ಮಗ್ಗುಲಲ್ಲಿ ಒಂದು ದೊಡ್ಡ ಕಲೆ ಇದೆ; ಮೂಗು ಸ್ವಲ್ಪ ಉದ್ದ-ನಸುನೀಳವಾಗಿದೆ, ದಟ್ಟವಾದ ಗಡ್ಡ, ಹನಸ್ಮುಖ, ತಲೆಗೂದಲು ಕುರುಚು ಕುರುಚು; ಆತನು ನಡೆಯುವಾಗ ತಲೆಯನ್ನು ಒಂದು ಪಕ್ಕಕ್ಕೆ ಬಾಗಿಸಿಕೊಂಡು ನಡೆಯುತ್ತಾನೆ; ಸರ್ವದಾ ಸವಿಮಾತನಾಡುವನು, ದೃಷ್ಟಿ ಬಹು ತೀಕ್ಷ್ಣವಾದದ್ದು, ಕಣ್ಣುಗಳು ಸಣ್ಣವಾಗಿ ಎತ್ತರದಲ್ಲಿರುವವು.

ಅರಿಂದಮ—ಸ್ವಲ್ಪ ಹೊತ್ತಿಗೆ ಮೊದಲು ಫೂಲಸಾಹೇಬನೂ ನಾನೂ ತುಂಬಾ ಹೊತ್ತು ಮಾತನಾಡುತ್ತಿದ್ದೆವು. ಮನುಷ್ಯನು ಬಹು ಮಿಷ್ಟ ಭಾಷಿ.

ಯೋಗೇಂದ್ರ—ಫೂಲಸಾಹೇಬನನ್ನು ತಾವು ನೋಡಿರುವಾಗ ಇನ್ನೂ ಅವನ ರೂಪವರ್ಣನೆ ಕೇಳಬೇಕೆಂಬ ಆವಶ್ಯಕತೆಯೇನು, ಅರಿಂದಮಬಾಬು ?

ಅರಿಂದಮ—ಏನೂ ಇಲ್ಲ.

ಯೋಗೇಂದ್ರ—ಆವಶ್ಯಕವಿಲ್ಲದಿದ್ದರೆ ಉಸಿರಾಡುವುದಕ್ಕೂ ಹಿಂದೆಗೆಯುವವರು ತಾವು, ಏನೂ ಇಲ್ಲವೆಂದು ಹೇಳುತ್ತಿದ್ದೀರಿ! ನಾನೇನು ತಮ್ಮನ್ನು ಕಾಣದವನೆ?

ಅರಿಂದಮ—ಏನೂ ಇಲ್ಲ, ಆದರೆ ಇಷ್ಟು ಮಾತ್ರ ತಿಳಿದಿರಿ; ಈಗ ಕೊಲೆಯ ಮೊಕದ್ದಮೆಯ ಕೆಲಸವಿಲ್ಲದಿದ್ದಪಕ್ಷದಲ್ಲಿ ನಾನು ಒಂದು ಬಾರಿ, ಡಾಕ್ಟರ್ ಫೂಲಸಾಹೇಬನ ಸಂಪೂರ್ಣ ಚರಿತ್ರೆಯನ್ನು ಚೆನ್ನಾಗಿ ತಿಳಿದುಕೊಳ್ಳುವ ಪ್ರಯತ್ನ ಮಾಡುತ್ತಲಿದ್ದೆ.

ಯೋಗೇಂದ್ರ—ಫೂಲಸಾಹೇಬನ ಮೇಲೆ ಹಠಾತ್ತಾಗಿ ತಮ್ಮ ಕೃಪಾದೃಷ್ಟಿ ಬಿದ್ದಿತೇಕೆ ?

ಅರಿಂದಮ—ಅವನು ಈಗ ತಮಿಜುದ್ದೀನನ ಮಗಳನ್ನು ಮದುವೆ ಮಾಡಿಕೊಂಡು ಆತನ ಐಶ್ವರ್ಯವನ್ನೆಲ್ಲಾ ಆಕ್ರಮಿಸುವ ಪ್ರಯತ್ನ ಮಾಡುತ್ತಿದ್ದಾನೆ.

ಯೋಗೇಂದ್ರ—ಫೂಲಸಾಹೇಬನು ಬಹು ಚತುರನಾದ್ದರಿಂದ ಅವನ ವಿಷಯದಲ್ಲಿ ಆ ಕೆಲಸವೇನೂ ಆಶ್ಚರ್ಯಕರವಾದದ್ದಲ್ಲ. ಆದರೆ ತಮಿಜುದ್ದೀನನ ಮಗಳಿಗೆ ಸ್ವಲ್ಪ ಬುದ್ಧಿ ನೆಟ್ಟಗಿಲ್ಲವೆಂದು ಹೇಳಿದೆ ನಲ್ಲಾ ?

ಅರಿಂದಮ—ನಿಮಗೂ ನನಗೂ ಎಷ್ಟರಮಟ್ಟಿಗೆ ಬುದ್ಧಿ ನೆಟ್ಟ ಗಿಲ್ಲವೋ ಅವಳಿಗೂ ಅಷ್ಟೇ; ಇದಕ್ಕಿಂತಲೂ ಹೆಚ್ಚೆಂದು ನನಗೆ ತೋರು ವುದಿಲ್ಲ. ನಾನು ಅವಳನ್ನು ನೋಡಿದ್ದೇನೆ; ಅವಳ ಹೆಸರು 'ಕುಲಸಮ್' ಎಂದು. ಯೋಗೇಂದ್ರ ಬಾಬೂ, ಕುಲಸಮ್‌ಯ ಹಣೆಯ ಬರೆಹವು ಈ ಮೂರು ತೆರಗಳಲ್ಲಿ ಒಂದು ಬಗೆಯಾಗಿ ಪರಿಣಮಿಸಿ ಬೇಗನೆ ಬಹಿರಂಗ ಪಡುವುದನ್ನು ನೀವೇ ಕಾಣುವಿರಿ. ಆದರೆ, ಕುಲಸಮಳು ಫೂಲಸಾಹೇ ಬನ ಪತ್ನಿಯಾಗುವಳು ; ಹಾಗಾಗದಿರುವುದಾದರೆ ಕುಲಸಮಳು ಸಾಯುವಳು ; ಅದೂ ಕೂಡ ಸಂಭವಿಸದಿದ್ದರೆ....

ಯೋಗೇಂದ್ರ—(ಮಾತು ಪೂರೈಸಗೊಡದೆ) ಹಾಗಾದರೆ ಏನಾಗುವಳು ?

ಅರಿಂದಮ—ಹಾಗಾದಪಕ್ಷದಲ್ಲಿ ಖಂಡಿತವಾಗಿ ತಿಳಿಯಿರಿ, ಅರಿಂದಮನಿಗೆ ಈ ಸಂದರ್ಭದಲ್ಲಿ ಸ್ವಲ್ಪ ಶಿರೋವೇದನೆಯಾಗಿಯೇ ಆಗು ವುದು ; ಅವನು ಕುಲಸಮಳನ್ನು ಈ ವಿಪತ್ತಿನಿಂದ, ಒಂದಲ್ಲ ಒಂದು ದಿನ, ಕಾಪಾಡಿಯೇ ಕಾಪಾಡುವನು.

---

# ಎಂಟನೆಯ ಪರಿಚ್ಛೇದ

## ಅರಿಂದಮನ ವಿಪತ್ತು

ಅರಿಂದಮನು ಯೋಗೇಂದ್ರನಾಥನಲ್ಲಿಂದ ಹೊರಟು ತನ್ನ ಮನೆಗೆ ಬಂದನು. ಬೀದಿಯ ಬಾಗಿಲು ಮುಚ್ಚಿ ಒಳಗಡೆ ಚಿಲಕಹಾಕಿತ್ತು. ಒಳಗಡೆಯಿಂದ ಗಂಭೀರವಾಗಿ ಕೇಳಬಂದ ಮಹಾಶಬ್ದಸಹಿತವಾದ ನಾಸಿಕಾಧ್ವನಿ (ಗೊರಕೆಗಳು)ಯು ಅರಿಂದಮನ ಸೇವಕನು ನಿದ್ರೆಮಾಡುತ್ತಿರುವನೆಂಬುದನ್ನು ಸೂಚಿಸಿತು. ಅರಿಂದಮನು ಬಹು ಪ್ರಯಾಸದಿಂದ ಸೇವಕನನ್ನು ಎಚ್ಚರಗೊಳಿಸಿದನು. ಅಂತರಂಗದಲ್ಲಿಯೇ ಬೇಸರಗೊಂಡ ಸೇವಕನು ಎದ್ದು ಅವಸರವಸರವಾಗಿ ಬಂದು ಬಾಗಿಲನ್ನು ತೆರೆದನು. ಅರಿಂದಮನು ಮಹಡಿಯ ಮೇಲಿರುವ ತನ್ನ ಶಯನ ಮಂದಿರಕ್ಕೆ ಹೋದನಲ್ಲದೆ, ಊಟಮಾಡುವುದಕ್ಕಾಗಿ ಮೊದಲು ಸಿದ್ಧನಾದನು. ದಿನವೆಲ್ಲಾ ಉಪವಾಸ ಮಾಡಿದುದರಿಂದ ಹೊಟ್ಟೆಯೊಳಗಣ ಅಗ್ನಿದೇವನು ತುಂಬಾ ಉಪದ್ರವ ಮಾಡತೊಡಗಿರುವನು ; ಬುದ್ಧಿವಂತನಾದ ಆ ಅಡಿಗೆಯ ಭಟ್ಟನು ಇದಕ್ಕೆ ಮೊದಲೇ ಆಹಾರ್ಯ ಪದಾರ್ಥಗಳೆಲ್ಲವನ್ನೂ ಆ ಕೊಠಡಿಯಲ್ಲಿ ಅಣಿಮಾಡಿಟ್ಟು ನಿರ್ವಿಘ್ನವಾಗಿ ತನ್ನ ನಿದ್ರೆಗೆ ಅನುಕೂಲ ಮಾಡಿಕೊಂಡಿದ್ದನು. ಅರಿಂದಮನು ಕೂಡ ಅದರಿಂದ ಆಗ ತುಂಬ ಅನುಕೂಲವಾಯಿತೆಂದು ಭಾವಿಸಿದನು ; ಆದಷ್ಟು ಬೇಗ ಊಟವನ್ನು ಮುಗಿಯಿಸಿ ಮಲಗಿದನು. ನಿದ್ದೆ ಬರಲಿಲ್ಲ; ಕುಲಸನ ಮತ್ತೂ ಫೂಲಸಾಹೇಬರ ವಿಚಾರಗಳನ್ನು ಕುರಿತು ಆಲೋಚನೆ ಮಾಡುತ್ತಾ ತುಂಬಾ ಉದ್ವಿಗ್ನನಾಗಿಬಿಟ್ಟನು. ಆಗ ಆತನು ಫೂಲಸಾಹೇಬನು ಕೊಟ್ಟ ಹೊಗೆಯ ಸುತ್ತಿಗೆ ಬೆಂಕಿಹೊತ್ತಿಸಿ ಸೇದಲುಪಕ್ರಮಿಸಿದನು. ಹಾಗೆಯೇ ಆಲೋಚಿಸತೊಡಗಿದನು. ನಿದ್ರೆಯ ಸುಳಿವೇ ಇಲ್ಲವಾಯಿತು. ಹಾಗೆಯೇ ಭಾವಿಸತೊಡಗಿದನು,—ನಾನು ಊಟ, ನಿದ್ದೆ, ವಿರಾಮಗಳನ್ನೆಲ್ಲಾ ಮರೆತು ರಾತ್ರೀ ಹಗಲು ಯಾರನ್ನು ಹುಡುಕಿಕೊಂಡು ಅಲೆಯುತ್ತಿದ್ದೇನೆಯೋ ಅವನು ಇನ್ನಾರೂ ಅಲ್ಲ-ಇದೇ ಫೂಲಸಾಹೇಬನೆಂದು ತೋರುತ್ತದೆ. ಅವನೇ ಆ ಕೊಲೆಪಾತಕಿ

ಎಂದೂ ತೋರುತ್ತದೆ. ಇಷ್ಟೊಂದು ಸಂಶಯ ಸಂದೇಹಗಳಿದ್ದರೂ ಆ ಹತ್ಯಾಕಾರಿಯು ಈ ಫೂಲಸಾಹೇಬನಲ್ಲದೆ ಮತ್ತಾರೂ ಅಲ್ಲವೆಂದು ನನ್ನ ಮನಸ್ಸು ಹೇಳುತ್ತಿದೆ—ಎಂದು.

ಹೀಗೆ ಆಲೋಚಿಸುತ್ತಿರುವಾಗ್ಗೆ ಹಠಾತ್ತಾಗಿ ಅವನ ಕಣ್ಣುಗಳು ಸೆಳೆಯ ತೊಡಗಿದುವು; ಸ್ವಲ್ಪ ತೂಕಡಿಕೆ ಬಂದ ಹಾಗಾಯಿತು, ತಲೆಯು ಒಂದು ಸಲ ಹಿಂದಕ್ಕೆ ತೂಗಿತು; ಆ ಕೂಡಲೇ ಒಂದು ಸಲ ಆಕಳಿಸಿದನು.

ಅರಿಂದಮನು—ಈಗ ಕೊಂಚ ನಿದ್ರೆ ಬರುವ ಹಾಗಿದೆ, ಆಕಾರದಲ್ಲಿ ಅನೇಕ ಭಾಗಗಳು ಒಂದಕ್ಕೊಂದು ತಾಳೆಯಾಗಿದೆ; ಎತ್ತರ ಐದೂವರೆ ಅಡಿ, ಪ್ರಶಸ್ತವಾದ ಎದೆ, ಭುಜಗಳು ಸ್ವಭಾವಕ್ಕೂ ವಿರೋಧವಾಗಿರು ವಷ್ಟು ಪ್ರಶಸ್ತವಾಗಿವೆ, ನಡುವು ಕೊಂಚ ತೆಳು, ವಯಸ್ಸು ನಾಲ್ವತ್ತಕ್ಕೆ ಮೀರಿದಂತೆ ತೋರುವುದಿಲ್ಲ—ಎಂದು ತನ್ನಲ್ಲಿಯೇ ಭಾವಿಸಿಕೊಳ್ಳು ತ್ತಿದ್ದನು.

ಇದಾದನಂತರ ಅರಿಂದಮನು ಇನ್ನೊಂದು ಸಲ ಆಕಳಿಸಿದನು. ಇದು ಮೊದಲನೆಯದಕ್ಕಿಂತಲೂ ಸ್ವಲ್ಪ ದೊಡ್ಡದೇಸರಿ. ಅರಿಂದಮನು ಮತ್ತೆ ಮೊದಲಿನಂತೆ ಮಾತನಾಡಿಕೊಳ್ಳುವುದಕ್ಕೆ ಆರಂಭಿಸಿದನು—ನೋಡುವುದಕ್ಕೆ ಗೌರವರ್ಣ, ಅಷ್ಟು ಉಜ್ವಲವಾಗಿಲ್ಲದಿದ್ದರೂ—ಆಗ ಇನ್ನೊಂದು ಆಕಳಿಕೆ ಬಂತು,—ಪರಿಷ್ಕಾರವಾಗಿಯೇನೋ ಇದೆ, ಅದರಲ್ಲಿ ಮುಖಕ್ಕಿಂತಲೂ ಕೈಗಳ ಬಣ್ಣವು ಸ್ವಲ್ಪ ಸ್ಪಷ್ಟವಾಗಿ ಕಾಣಿಸಿಕೊಳ್ಳುತ್ತದೆ—ಈ ಬಾರಿ ಭಾರಿಯಾದೊಂದು ಆಕಳಿಕೆಯೇ ಬಂದಿತು.

ಇದೇನು! ಇಂದು ಇಷ್ಟು ನಿದ್ರೆ ಬರುವುದಕ್ಕೇನು ಕಾರಣ? ಇದಕ್ಕೂ ಹಿಂದೆ, ಎಷ್ಟೋ ದಿನ ರಾತ್ರಿಯೆಲ್ಲಾ ನಿದ್ರೆಗೆಟ್ಟಿದ್ದೇನೆ, ಎಂದೂ ಹೀಗಾದುದಿಲ್ಲ—ಎಂದಂದುಕೊಂಡು ಅರಿಂದಮನು ಎದ್ದು ಕೊಠಡಿಯೊಳಗೇ ಸಂಚರಿಸಲು ಮೊದಲುಮಾಡಿದನು. ಆದರೂ ಮೊದ ಲಿನಹಾಗೆ ತನ್ನಲ್ಲಿ ತಾನೇ ಮಾತನಾಡಿಕೊಳ್ಳುತ್ತಲೇ ಇದ್ದನು.

—ಕೂದಲು ಕೊಂಚ ಒರಟು, ಅಚ್ಚ ಕಪ್ಪು—ಪುನಃ ಒಂದು ಆಕಳಿಕೆ ಬಂತು, ಅದಾದನಂತರ ಇನ್ನೊಂದು ; ಇನ್ನೂ ಒಂದು,—ಕೂದಲು ಉದ್ದದಲ್ಲಿಯೂ ಕೂಡ ಇಷ್ಟೇ—ಇನ್ನೂ ಒಂದು ಆಕಳಿಕೆ ಬಂತು,—ನಿಜವಾಗಿಯೂ ಈ ಪ್ರೊಲಸಾಹೇಬನೇ ಆ ಹುಡುಗಿಯನ್ನು ಕೊಂದು, ಹೆಣವನ್ನು ಪೆಟ್ಟಿಗೆಯಲ್ಲಿರಿಸಿ, ಕಳುಹಿಸಿಕೊಟ್ಟಿರುವನು.

ಅರಿಂದಮನು ಇನ್ನು ನಿಂತಿರಲಾಗಲಿಲ್ಲ; ಕುಳಿತುಕೊಂಡನು ; ಕೈಮೇಲೆ ತಲೆಯಿರಿಸಿಕೊಂಡು ತೂಕಡಿಸುತ್ತ ಕುಳಿತನು. ಒಂದರ ಮೇಲೊಂದು—ಅದರ ಮೇಲೆ ಇನ್ನೊಂದು—ಇನ್ನೂ ಒಂದು—ಹೀಗೆ ಒಂದೊಂದಾಗಿ ಆಕಳಿಕೆ ಬರುವುದಕ್ಕೆ ಮೊದಲಾಯಿತು.

ಆಲೋಚನಾಪರನಾದ ಅರಿಂದಮನು ತೂಕಡಿಸುತ್ತಿರುವಾಗಲೂ ಕೂಡ—ಪ್ರೊಲಸಾಹೇಬನಿಗೂ ಗಡ್ಡಮೀಸೆಗಳಿಲ್ಲ—ಆಕಳಿಕೆ ಬಂತು—ಮನುಷ್ಯನು ಎಷ್ಟರಮಟ್ಟಿಗೆ ಮೃದುಭಾಷಿಯಾಗಿರುವಂತೆ—ಪುನಃ ಆಕಳಿಕೆ ಬಂತು,—ತೋರುವುದೋ—ಪುನಃ ಆಕಳಿಕೆ,—ಅದರಿಂದ—ಪುನಃ ಒಂದು ಆಕಳಿಕೆ,—ಮನು—ಆಕಳಿಕೆ,—ತೋ—ಆಕಳಿಕೆ,—ರು—ಇನ್ನೂ ಒಂದು, ಕಡೆಗೆ ಅರಿಂದಮನು ಮಾತನಾಡಲಾರದೇ ಹೋದನು. ಆತನು ಅರ್ಧಮಟ್ಟಿಗೆ ಸೇದಿದ ಆ ಸುತ್ತನ್ನು ದೂರಹಾಕಿದನು. ಎರಡು ಕೈಗಳನ್ನೂ ತಲೆಯಮೇಲೆ ರುಜುಭಾವದಿಂದಿರಿಸಿಕೊಂಡು, ಎರಡು ಕೈಗಳ ಬೆರಳುಗಳನ್ನೂ ಒಂದಕ್ಕೊಂದು ಸೇರಿಸಿ ಹಿಡಿದುಕೊಂಡು, ತಲೆಯನ್ನೆತ್ತಿ ಸುಮ್ಮನೆ ಸೀನುವುದಕ್ಕೆ ಮೊದಲಿಟ್ಟನು. ಸೀನು ಒಂದರ ಮೇಲೆ ಒಂದು—ಒಂದರ ಸಂಗಡ ಇನ್ನೊಂದು; ಅದರ ಸಂಗಡಲೇ ಇನ್ನೂ ಒಂದು ; ಹೀಗೆ ಮೇಲೆ ಮೇಲೆ ಸೀನುವುದಕ್ಕೆ ಆರಂಭಿಸಿದನು. ಬಾಯಿ ಮುಚ್ಚುವುದಕ್ಕೆ ಅವನಿಗೆ ಸ್ವಲ್ಪವಾದರೂ ಅವಕಾಶವಿಲ್ಲ. ಕಣ್ಣು ಮುಚ್ಚುತ್ತ ಬಂದಿತು; ಬಲಾತ್ಕಾರದಿಂದ ಒಂದು ಸಲ ಕಣ್ಣು ತೆರೆದು ನೋಡಿದರೂ, ಯಾವುದೂ ಕಾಣಿಸುತ್ತಿಲ್ಲ. ಕೊಠಡಿಯಲ್ಲಿ ದೀಪ ಉರಿಯುತ್ತಿದ್ದರೂ ನಾಲ್ಕು ಕಡೆ ಕತ್ತಲೆ ಕವಿದಹಾಗೆ ತೋರುತ್ತಿರುವುದು; ಅರಿಂದಮನು ಕುರುಡನ ಹಾಗೆ ಕೈಯನ್ನು ಸವರಣೆಯಿಂದ ಹಾಸಿಗೆ

ಹುಡುಕಲೆತ್ನಿಸಿದನು. ಅವನ ಮಸ್ತಿಷ್ಕದೊಳಗೆ ಒಂದು ಬಗೆಯಾಗಿ ತೀವ್ರವಾದ ಯಾತನೆಯುಂಟಾಯಿತು; ಆತನ ಶರೀರವೆಲ್ಲವನ್ನೂ ನಿಸ್ತ್ರಾಣವು ಆವರಿಸಿತು; ಮತ್ತೆ ಯಾರಾದರೂ ಆಗಿದ್ದ ಪಕ್ಷದಲ್ಲಿ ಈ ವೇಳೆಗೆ ತಮ್ಮ ಭವಲೀಲೆಯನ್ನೇ ಮುಗಿಯಿಸಿಕೊಳ್ಳುತ್ತಿದ್ದರು. ಅರಿಂದಮನು,—ನಾನು ವಿಷವೇ ತಿಂದಿರಬೇಕು; ಇಲ್ಲವಾದರೆ ಹೀಗಾಗಲು ಕಾರಣವೇನು ? ಓಹೋ ! ಸರಿಹೋಯಿತು ! ಈ ಸುತ್ತಿನಲ್ಲಿ ಯಾವುದೋ ವಿಷವಿದೆ. ವಿಷ ಸರ್ವನಾಶ ! ನಿಜವಾಗಿಯೂ ಫೂಲ ಸಾಹೇಬನು ಮನುಷ್ಯರನ್ನು ಕೊಲ್ಲುವ ಪಿಶಾಚ. ಇದರಲ್ಲಿ ಸಂಶಯವೇ ಇಲ್ಲ. ಈಗ ಸರಿಯಾಗಿ ತಿಳಿಯಿತು. ಬಾಲಿಕೆಯನ್ನು ಕೊಂದವನು ಫೂಲಸಾಹೇಬನೊಬ್ಬನೇ. ಆ ಪಿಶಾಚನು ಒಂದು ದಿನ ಅರಿಂದಮನನ್ನೂ ಕೊಲ್ಲುತ್ತೇನೆ—ಎಂದು ಕಾಗದದಲ್ಲಿ ಬರದೇ ಇದ್ದನು. ಅವನು ತನ್ನ ಪ್ರತಿಜ್ಞೆಯನ್ನು ಶೀಘ್ರವಾಗಿಯೇ ಮುಗಿಯಿಸಿಕೊಂಡನು—ಎಂದು ಮುಂತಾಗಿ ಮೆಲ್ಲಗೆ ಹೇಳಿಕೊಂಡನು.

---

## ಒಂಭತ್ತನೆಯ ಪರಿಚ್ಛೇದ

### ಮೃತ್ಯುಮುಖದಲ್ಲಿ ಅರಿಂದಮ

ಕೊಠಡಿಯ ಒಂದು ಮೂಲೆಯಲ್ಲಿ ಒಂದು ಮೇಜು ಇದ್ದಿತು. ಅರಿಂದಮನು ತನ್ನೆರಡು ಕೈಗಳಿಂದಲೂ ಆ ಮೇಜಿನ ಒಂದು ಮೂಲೆಯನ್ನು ಭದ್ರವಾಗಿ ಹಿಡಿದುಕೊಂಡು ಎದ್ದು ನಿಂತನು. ಎರಡು ಮೂರು ಸಲ ಬಿದ್ದುಹೋಗುವಹಾಗೆ ಆಯಿತು. ಅಂತಹ ಅವಸ್ಥೆಯಲ್ಲಿ ಅಲ್ಲಿಯೇ ನಿಂತುಕೊಂಡಿದ್ದರೂ, ಮೇಜಿನಮೇಲೆ ಪ್ರಕಾಶಮಾನವಾದ ದೀಪ ಉರಿಯುತ್ತಿದ್ದರೂ ಅವನ ಕಣ್ಣುಗಳಿಗೆ ಕತ್ತಲೆ ಕವಿದ ಹಾಗೆಯೇ ಇದ್ದಿತು. ಹೇಗೂ ಆತನು ತನ್ನ ಸ್ವಾಭಾವಿಕ ಸ್ಥಿತಿಗೆ ಬರಲಾಗಲಿಲ್ಲ. ಆಕಳಿಕೆಯನ್ನು ತಡೆದು ನಿಲ್ಲಿಸುವ ಪ್ರಯತ್ನಮಾಡಿದನು—ಸಾಧ್ಯವಾಗಲಿಲ್ಲ. ಒಂದರ ಮೇಲೆ ಒಂದು, ಅದರ ಮೇಲೆ ಇನ್ನೊಂದು, ಅದರ

ಮೇಲೆ ಇನ್ನೂ ಒಂದು, ಈ ರೀತಿಯಾಗಿ ಆಕಳಿಕೆ ಬರುತ್ತಿದ್ದಿತು. ಆತನು ಮರ್ಮಾಂತಿಕವಾದ ಯಾತನೆಯಿಂದ ಹುಚ್ಚನ ಹಾಗಾಗಿಬಿಟ್ಟನು. ಹೇಳಿದನು—ಈಗ ಇಲ್ಲ, ಈಗಲೇ ಅಲ್ಲ, ಈಗ ಏತರಿಂದಲೂ ಸಾಯಲಾರೆ. ಸಾಯುವುದಕ್ಕೆ ಮೊದಲು, ಹೇಗಾದರೂ ಮಾಡಿ ಒಂದು ಕೆಲಸವನ್ನು ಮುಗಿಯಿಸಬೇಕು.—ಎಂದು ಹೇಳುತ್ತೆ ಹೇಳುತ್ತೆ ತೂಗಾಡಿಕೊಂಡು ಎದ್ದನು; ಕತ್ತಲೆ ಮನೆಯಲ್ಲಿರುವವನಹಾಗೆ ಆತನು ಕೈಸವರಣೆಯಿಂದಲೇ ಮೇಜಿನಲ್ಲಿದ್ದ ಒಂದು ಕಾಗದವನ್ನು ತೆಗೆದುಕೊಂಡನು. ಬಹುಕಷ್ಟದಿಂದ ಮಸಿ ಕುಡಿಕೆ ಮತ್ತೂ ಲೇಖನಿಗಳನ್ನು ಹುಡುಕಿ ತೆಗೆದು ಬರೆಯಲು ಕುಳಿತನು. ಏನು ಬರೆಯುತ್ತಿದ್ದನೋ ಕಾಣಿಸುತ್ತಿರಲಿಲ್ಲ; ಅಭ್ಯಾಸವಿದ್ದಮೇರೆ ಲೇಖಣಿಯನ್ನು ಓಡಿಸುತ್ತಲಿದ್ದನು. ಆತನು ಬರೆದುದರಲ್ಲಿ ಕೆಲವು ಅಕ್ಷರಗಳು ಬಲು ದೊಡ್ಡವಾಗಿಯೂ ಕೆಲವು ಬಹಳ ಚಿಕ್ಕವಾಗಿಯೂ, ಕೆಲವು ಅಕ್ಷರಗಳು ಒಂದಕ್ಕೊಂದು ಸಂಬಂಧವೇ ಇಲ್ಲದಹಾಗೂ ಇದ್ದುವು. ಸಾಲುಗಳು ತುಂಬ ವಕ್ರವಕ್ರ; ಅದು ಆತನ ಕೈಬರಹವೆಂದು ಹೇಳುವುದಕ್ಕೇ ಆಗುವಂತಿಲ್ಲ. ಆತನು ಬಹುಪ್ರಯಾಸದಿಂದ ಹೀಗೆ ಬರೆದನು:—

" ಯೋಗೇಂದ್ರಬಾಬು,

ಫೂಲಸಾಹೇಬನು ಬಹು ದುಷ್ಟ. ಸಾಧ್ಯವಾದಷ್ಟು ಜಾಗ್ರತೆ ಅವನನ್ನು ಹಿಡಿದುಹಾಕಿ. ಆ ಕೊಲೆಯಲ್ಲಿ ಅವನೇ ಆ ಬಾಲಿಕೆಯನ್ನು ಕೊಂದವನು. ಅವನು ಒಂದು ಹೊಗೆಸುತ್ತಿಗೆ ವಿಷ ಬೆರಸಿ ನನಗೆ ಕೊಟ್ಟಿದ್ದಾನೆ; ನಾನು ಅದರಲ್ಲಿ ಅರ್ಧದಮಟ್ಟಿಗೆ ಸೇದಿದೆ—ಪ್ರಾಯಶಃ ಬದುಕಲಾರೆ. ಫೂಲಸಾಹೇಬನನ್ನು ಬೇಗ ಹಿಡಿದುಹಾಕದಿದ್ದರೆ ಒಂದು ದಿನ ನಿನ್ನನ್ನೂ—"

ಮುಂದೆ ಬರೆಯಲು ಸಾಗಲಿಲ್ಲ. ಅವನ ಶರೀರವಾದ್ಯಂತವೂ ಶಕ್ತಿಹೀನವಾಗುತ್ತ ಬಂದಿತು; ಪೂರ್ತಿಯಾಗಿ ಬರೆದು ಮುಗಿಸದ ಆ ಕಾಗದಕ್ಕೇ ಅವನು ತನ್ನ ಕೈಬರೆಹವನ್ನೂ ಹಾಕಿ ಮುಗಿಯಿಸಿದನು. ಹಾಗೆಯೇ ಒಂದು ಲಕೋಟೆಯನ್ನೂ ಹುಡುಕಿ ಕಾಗದವನ್ನು ಅದ

ರಲ್ಲಿ ಹಾಕಿ ಮುಚ್ಚಿದನು. ಇನ್ನು ಒಂದು ಅಕ್ಷರ ಬರೆವುದಕ್ಕೂ ಅವನಿಗೆ ಶಕ್ತಿಯಿರಲಿಲ್ಲ. ಇನ್ನೂ ಮೇಲ್ವಿಳಾಸ ಬರೆಯುವುದು ಉಳಿದಿದೆ; ಬರುಬರುತ್ತ ಅವನಿಗೆ ಪ್ರಜ್ಞೆ ತಪ್ಪುತ್ತ ಬಂದಿತು; ಆಗ ಆತನಿಗೆ ಅಲುಗು ವುದಕ್ಕೂ ಶಕ್ತಿಯಿಲ್ಲ. ಕೈಕಾಲುಗಳು ಬೆರತುಕೊಂಡುಹೋದ ಹಾಗಾಯಿತು; ಆಗ ಅವನಿಗೆ ದಿಕ್ಕು ತೋರದೆ ಕೈಗೆ ಲೇಖನಿಯನ್ನು ಚುಚ್ಚಿಕೊಂಡನು; ಅದರ ದೆಸೆಯಿಂದ ಕೈಗೆ ನೋವು ಉಂಟಾಗಿ ಆಗ್ಗೆಮಟ್ಟಿಗೆ ಆ ದೌರ್ಬಲ್ಯವು ಸ್ವಲ್ಪ ಹಿಂದಾಯಿತು; ಲೇಖನಿಯ ಮುಳ್ಳು ಕೈಗೆ ಚುಚ್ಚಿಕೊಂಡೇ ಇದ್ದಿತು. ಅವನು ಇನ್ನೊಂದು ಲೇಖನಿ ಯನ್ನೆತ್ತಿಕೊಂಡು ಮೇಲ್ವಿಳಾಸವನ್ನು ಬರೆದನು. ಅವನು ಬರೆದು ದನ್ನು ಇತರರು ಸುಲಭವಾಗಿ ಓದುವುದಕ್ಕಾಗುವಂತೆ ಇದ್ದಿತೆಂದು ತೋರಲಿಲ್ಲ.

ಆ ಕಾಗದವನ್ನು ಆಗಲೇ ಸೇವಕನ ಮೂಲಕ ಯೋಗೇಂದ್ರನಾಥ ನಿಗೆ ಕೊಟ್ಟು ಕಳುಹಬೇಕೆಂದು ಅರಿಂದಮನು ಸೇವಕನನ್ನು ಕೂಗ ಲಾರಂಭಿಸಿದನು. ತನಗೆ ಗಂಟಲು ಸಹ ಕಟ್ಟಿಕೊಂಡಿದ್ದ ಸಂಗತಿ ಆತನಿಗೆ ತಿಳಿದದ್ದು ಆಗಲೇ. ಸೇವಕನು ಹತ್ತಿರದಲ್ಲಿಯೇ ನಿಂತಿದ್ದರೂ ಕೇಳ ಲಾರದ ಮಟ್ಟಿಗೆ ಕಂಠಸ್ವರವು ಕುಗ್ಗಿರುವಾಗ್ಗೆ, ಆ ಕೂಗನ್ನು ಕೇಳಿ ಬರಡನೆಯಂತಸ್ತಿನಲ್ಲಿ ನಿದ್ರೆಮಾಡುತ್ತಿರುವ ಸೇವಕನು ಎದ್ದು ಬರುವ ನೆಂದು ತೋರಲಿಲ್ಲ. ತನ್ನ ಕಂಠಸ್ವರವು ತನಗೇ ಕೇಳದೇ ಹೋದ್ದ ರಿಂದ ಅರಿಂದಮನು ಸೇವಕನನ್ನು ಕೂಗುವುದಕ್ಕೋಸ್ಕರ ತಾನೇ ಹೋಗಬೇಕೆಂದು ಆ ಕೊಠಡಿಯಿಂದ ಹೊರಡುವ ಪ್ರಯತ್ನಮಾಡಿ ದನು. ಇದಕ್ಕೆ ಮೊದಲು, ಊಟಮುಗಿಸಿಕೊಂಡು, ತಾನೇ ಬಾಗಿ ಲನ್ನು ಮುಚ್ಚಿ ಅಗಳಿಹಾಕಿದ್ದನಾದರೂ ಈಗ ಆತನಿಗೆ ಆ ಮುಚ್ಚಿದ ಬಾಗಿಲುಕೂಡ ಎಲ್ಲಿರುವುದೆಂಬುದು ಗೊತ್ತಾಗಲಿಲ್ಲ. ಅವನ ದೃಷ್ಟಿ ಶಕ್ತಿಯು ಸಂಪೂರ್ಣವಾಗಿ ನಷ್ಟವಾಗಿತ್ತು. ಒಂದು ಕಡೆ ಒಂದು ಕಿಟಕಿ ತೆರೆದಿತ್ತು. ಆತನು ಅದೇ ಬಾಗಿಲೆಂದು ಭಾವಿಸಿ ಅದರೊಳಗಿಂದ ಹೊರಕ್ಕೆ ಹೋಗಲು ಯತ್ನಿಸಿದನು; ಕೆನ್ನೆಗೆ ಪೂರಾ ಪೆಟ್ಟಾಯಿತು; ಆತನು ಆ

ಕಾಗದವನ್ನು ಆ ಕಿಟಕಿಯೊಳಗಿಂದ ಹೊರಗೆ ಬಿಸಾಡಿದನು. ಕಾಗದವು ಹೊರಗಡೆ ಕೈಸಾಲೆಯಲ್ಲಿ ಹೋಗಿ ಬಿತ್ತು. ಅರಿಂದಮನು ನಿಂತಲ್ಲಿಯೇ ಬಿದ್ದುಬಿಟ್ಟನು; ಸತ್ತವನ ಹಾಗೆ ಬಿದ್ದೇ ಇದ್ದನು.

ಈ ಸಮಯದಲ್ಲಿ ಯೋಗೇಂದ್ರನಾಥನು ಹಾಲಿನ ನೊರೆಯ ಹಾಗಿರುವ ಶುಭ್ರವಾದ ಹಾಸಿಗೆಯಲ್ಲಿ ಮಲಗಿ ಎಷ್ಟೋ ಸುಖಸ್ವಪ್ನಗಳನ್ನು ನೋಡುತ್ತಿದ್ದಿರಬಹುದು. ಹಾಗಿರುವಾಗ, ಇಂದು ಅವನ ಆಪ್ತ ಮಿತ್ರನಾದ ಅರಿಂದಮನು ಶತ್ರುವಿನ ಮೋಸಕ್ಕೆ ಒಳಗಾಗಿ, ಸಹಾಯ ಹೀನನಾಗಿ ಮೃತ್ಯುಮುಖದಲ್ಲಿರುವನೆಂಬುದು ಅವನಿಗೆ ಹೇಗೆ ತಾನೇ ತಿಳಿಯಬೇಕು?

---

## ಹತ್ತನೆಯ ಪರಿಚ್ಛೇದ

ಚಿಕಿತ್ಸಕನೋ ಅಥವಾ ಪ್ರತ್ಯಕ್ಷ ಮೃತ್ಯುದೇವತೆಯೊ?

ಮಾರನೆಯ ದಿನ ಬೆಳಿಗ್ಗೆ ಅಡಿಗೆಯ ಭಟ್ಟನು ಅಡಿಗೆಗೆ ಆವಶ್ಯಕವಾದ ಪದಾರ್ಥಗಳನ್ನು ಪೇಟೆಯಿಂದ ತರುವುದಕ್ಕೋಸ್ಕರ ಹಣ ತೆಗೆದುಕೊಳ್ಳಬೇಕೆಂದು ಎಂದಿನಂತೆ ಅರಿಂದಮನಲ್ಲಿಗೆ ಬಂದು ನೋಡಿದನು. ಇನ್ನೂ ಅರಿಂದಮನು ಎದ್ದಿಲ್ಲ; ಆತನು ಮಲಗುವ ಮನೆಯ ಬಾಗಿಲು ಮುಚ್ಚಿಯೇ ಇದೆ. "ಸ್ವಾಮಿ—ಸ್ವಾಮಿ!" ಎಂದು ಹೊರಗೆ ನಿಂದಲೇ ನಾಲ್ಕಾರು ಸಲ ಕೂಗಿದನು. ಯಾವ ಉತ್ತರವೂ ಇಲ್ಲ. ಬಾಗಿಲು ತಟ್ಟಿದನು, ಅದಕ್ಕೂ ಉತ್ತರವಿಲ್ಲ. ಆಗ ಕಿಟಕಿಯಿಂದ ನೋಡಿದನು. ಅರಿಂದಮನು ನೆಲದಮೇಲೆ ಬಿದ್ದಿರುವುದು ಕಾಣಿಸಿತು. ಆತನ ಹಣೆಯಲ್ಲಿ ಒಂದು ಕಡೆ ಗಾಯವಾಗಿ ರಕ್ತ ಬಂದಿದೆ; ಇದನ್ನು ನೋಡಿ ಅಡಿಗೆಭಟ್ಟನಿಗೆ ತುಂಬಾ ಭಯವಾಯಿತು. ಏನು ಮಾಡುವುದೋ, ತೋರಲಿಲ್ಲ. ಅವನು ಹಾಗೆ-ಹೀಗೆ ಆಲೋಚಿಸುತ್ತಿರುವಷ್ಟರಲ್ಲಿಯೇ ಅರಿಂದಮನು ಬರೆದಿದ್ದ ಕಾಗದವು ಅವನ ದೃಷ್ಟಿಗೆ ಬಿದ್ದಿತು; ಅವನಿಗೆ ಕೊಂಚಮಟ್ಟಿಗೆ ಓದುಬರೆಹ ತಿಳಿದಿದ್ದಕಾರಣ

ಒಂದಾದಮೇಲೆ ಇನ್ನೊಂದು ಅಕ್ಷರದಂತೆ ಸೇರಿಸಿ ಬಹು ಕಷ್ಟಪಟ್ಟು ಒಂದು ಮಾತು, ಅದಾದಮೇಲೆ ಇನ್ನೊಂದು ಮಾತು, ಹೀಗೆಯೇ ಮಾತಿಗೆ ಮಾತು ಜೋಡಿಸುತ್ತಾ ಮೇಲುವಿಳಾಸದ ಕೊಂಚ ಭಾಗವನ್ನು ಓದಿದನು; ಮಿಕ್ಕ ಭಾಗವನ್ನು ಓದಲಾರದೇ ಹೋದರೂ ಊಹಿಸಿ ತಿಳಿದುಕೊಂಡನು.

ಕಾಗದವನ್ನು ತೆಗೆದುಕೊಂಡು, ಕೆಳಗೆ ಬಂದು, ಗಾಢ ನಿದ್ರೆಯಲ್ಲಿದ್ದ ಸೇವಕನನ್ನು ಎಚ್ಚರಗೊಳಿಸಿದನು. ಮೊದಲು ಅವನನ್ನು ತಿರಸ್ಕರಿಸಿದನು; ಅನಂತರ ತನಗೆ ತಿಳಿದುದನ್ನು ಅವನಿಗೆ ಹೇಳಿ ಆ ಕಾಗದದೊಂದಿಗೆ ತಾನೇ ಯೋಗೇಂದ್ರನಾಥನನ್ನು ನೋಡಲು ಠಾಣೆಗೆ ಹೋದನು.

* * * * *

ಆ ಸಮಯದಲ್ಲಿ ಯೋಗೇಂದ್ರನಾಥನು ಠಾಣೆಯಲ್ಲಿರಲಿಲ್ಲ. ದರೋಗನೂ ಇಬ್ಬರು ಜಮಾದಾರರೂ ಕುಳಿತುಕೊಂಡಿದ್ದರು. ಅಡಿಗೆಯ ಭಟ್ಟನು ಅಲ್ಲಿಗೆ ಹೋಗಿ ಆ ಕಾಗದವನ್ನು ದರೋಗನ ವಶಕ್ಕೆ ಕೊಟ್ಟು ನಡೆದಿರುವುದನ್ನು ಸಂಕ್ಷೇಪವಾಗಿ ಹೇಳಿದನು. ಕೂಡಲೇ ದರೋಗನು ಒಬ್ಬ ಜಮಾದಾರನ ಕೈಯಲ್ಲಿ ಆ ಕಾಗದವನ್ನು ಕೊಟ್ಟು ಯೋಗೇಂದ್ರನಾಥನ ಮನೆಗೆ ಕಳುಹಿಸಿ ತಾನು ಅರಿಂದಮನನ್ನು ನೋಡಲು ಹೊರಟನು. ಮತ್ತೊಬ್ಬ ಜಮಾದಾರನು ಠಾಣೆಯ ರಕ್ಷಣೆಯ ಭಾರವನ್ನು ವಹಿಸಿಕೊಂಡು ಅಲ್ಲಿಯೇ ಕುಳಿತಿದ್ದನು.

ಅಡಿಗೆಯ ಭಟ್ಟನು ದರೋಗನನ್ನು ಅರಿಂದಮನ ಶಯನ ಗೃಹದ ಬಳಿಗೆ ಕರೆದುಕೊಂಡು ಬಂದನು. ದರೋಗನು, ಅರಿಂದಮನು ಆ ಕೊಠಡಿಯ ನೆಲದ ಮೇಲೆ ಕೆಳಮೊಗನಾಗಿ ಬಿದ್ದಿರುವುದನ್ನು ತೆರೆದಿದ್ದ ಕಿಟಕಿಯಿಂದ ನೋಡಿದನು; ಅವನಿಗೆ ಬಹಳ ಗಾಬರಿಯಾಯಿತು. ಒಡನೆಯೇ ಅವರು ಮುಚ್ಚಿದ್ದ ಬಾಗಿಲನ್ನು ಒಡೆದು ತೆರೆದರು. ದರೋಗನು, ನೊಟ್ಟಮೊದಲು ಅಡಿಗೆ ಭಟ್ಟ ಮತ್ತೂ ಸೇವಕ ಇವರ ಸಹಾಯದಿಂದ ಅರಿಂದಮನನ್ನು ಹತ್ತಿರದಲ್ಲಿನ ಹಾಸಿಗೆಯಲ್ಲಿ ಮಲಗಿ

ಸಿದನು; ಮೂಗಿನ ಬಳಿ ಕೈಯಿಟ್ಟು ನೋಡಿದನು, ಉಸಿರಾಡುತ್ತಿರಲಿಲ್ಲ; ಆದರೆ ಶರೀರವು ಶೈತ್ಯವಾಗಿರಲಿಲ್ಲ; ಸಾಧಾರಣ ಸ್ಥಿತಿಗಿಂತ ಸ್ವಲ್ಪ ಹೆಚ್ಚು ಬಿಸಿಯಾಗಿಯೇ ಇದ್ದಿತು. ಆದ್ದರಿಂದ ಇನ್ನೂ ಅರಿಂದಮನು ಮೃತನಾಗಿಲ್ಲವೆಂದೇ ಅವನು ಊಹಿಸಿದನು. ಹಾಗೆಯೇ ಒಡನೆ ಒಬ್ಬ ಡಾಕ್ಟರನನ್ನು ಕರೆದುಕೊಂಡು ಬರುವಂತೆ ದರೋಗನು ಅಡಿಗೆಯವನಿಗೆ ಹೇಳಿದನು.

ಅಡಿಗೆಯವನು ಓಡುತ್ತಾ ಹೋದನು. ಸ್ವಲ್ಪ ಹೊತ್ತಿನೊಳಗಾಗಿಯೇ ಅವನು ಒಬ್ಬ ವೈದ್ಯನನ್ನು ಸಂಗಡ ಕರೆದು ತಂದನು. ಚಿಕಿತ್ಸಕನು ಮತ್ತೆ ಯಾರೂ ಅಲ್ಲ, ಅದೇ ಡಾಕ್ಟರ್ ಫೂಲಸಾಹೇಬ. ದರೋಗನು ಅವನನ್ನು ಕಂಡು ಬಹು ಸಂತೋಷಪಟ್ಟು,—ಸದ್ಯಃ ತಾವು ದಯಮಾಡಿಸಿದ್ದು ತುಂಬಾ ಅನುಕೂಲವಾಯಿತು. ತಮ್ಮನ್ನು ನೋಡಿದ್ದರಿಂದ ಬಹಳ ಧೈರ್ಯವಾಯಿತು—ಎಂದನು.

ಫೂಲಸಾಹೇಬ—ಸರಿ, ನಾನು ಇಲ್ಲಿ ಒಬ್ಬ ರೋಗಿಯನ್ನು ನೋಡುವುದಕ್ಕೆ ಬಂದೆ. ದಾರಿಯಲ್ಲಿಯೇ ನಿಮ್ಮ ಕಡೆಯವನು ಬಂದು ಹೀಗೆಯೇ ಕರೆದುಕೊಂಡು ಬಂದನು. ಈಗ ಏನಾಗಿದೆ? ಹೇಳಿ ನೋಡೋಣ.

ದರೋಗನು ಅರಿಂದಮನನ್ನು ತೋರಿಸಿದನು. ಫೂಲಸಾಹೇಬನು ಅರಿಂದಮನನ್ನು ಪರೀಕ್ಷಿಸಿ ನೋಡತೊಡಗಿದನು; ಬಹಳ ಹೊತ್ತಿನ ನಂತರ ಒಂದು ನಿಟ್ಟುಸಿರಿಟ್ಟು,—ಇನ್ನು ನೋಡುವುದೇನು, ಮನುಷ್ಯನು ಸತ್ತುಹೋಗಿದ್ದಾನೆ—ಎಂದು ಹೇಳಿದನು.

ಸತ್ತುಹೋಗಿರುವನೆಂಬ ಮಾತನ್ನು ಕೇಳಿ ದರೋಗನು ಚಮಕಿತನಾದನು.—ಸತ್ತುಹೋದನೆ! ಎಂತಹ ವಿಪತ್ತು! ಯಾವ ರೋಗದಿಂದ ಈತನು ಹಠಾತ್ತಾಗಿ ಮೃತನಾದದ್ದು?—ಎಂದು ಪ್ರಶ್ನೆ ಮಾಡಿದನು.

ಫೂಲಸಾಹೇಬ—ಹೃದ್ರೋಗದಿಂದ ಹೀಗಾಗಿರಬೇಕು. ಚೆನ್ನಾಗಿ ಪರೀಕ್ಷಿಸಿ ನೋಡದೆ, ಹೀಗೆಯೇ ಸರಿ ಎಂದು ಖಂಡಿತವಾಗಿ ಹೇಳಲಾಗುವುದಿಲ್ಲ.

ದರೋಗ—ಇಷ್ಟು ಬಲಿಷ್ಠನಾದ ಈತನು ಹೃದ್ರೋಗದಿಂದ ಹಠಾತ್ತಾಗಿ ಸತ್ತುಹೋದನೆಂಬುದನ್ನು ನಂಬುವುದು ಹೇಗೆ?

ಫೂಲಸಾಹೇಬ—(ಹುಬ್ಬುಗಂಟಿಟ್ಟು) ನಾನು ಸುಳ್ಳು ಹೇಳುತ್ತೇನೆಯೆ?

ದರೋಗ—ಆತ್ಮಹತ್ಯೆ ಮಾಡಿಕೊಂಡಿಲ್ಲವಷ್ಟೆ?

ಫೂಲಸಾಹೇಬ—ಹಾಗಿದ್ದರೂ ಇರಬಹುದು; ಆದರೆ ಹಾಗೆ ಹೇಳುವುದಕ್ಕೆ ಯಾವ ಪ್ರಮಾಣವೂ ದೊರೆಯುವುದಿಲ್ಲ.

ದರೋಗ—ತಾವು ಪರೀಕ್ಷಿಸಿದ್ದರಲ್ಲಿ, ಈತನು ಮೃತನಾಗಿರುವ ವಿಷಯವಾಗಿ ಯಾವ ಸಂದೇಹವೂ ಇಲ್ಲವಷ್ಟೆ?

ಫೂಲಸಾಹೇಬ—ಇಲ್ಲ.

---

## ಹನ್ನೊಂದನೆಯ ಪರಿಚ್ಛೇದ

### ಮಿತ್ರನ ಕರ್ತವ್ಯ

ಇಷ್ಟು ಹೊತ್ತಿಗೆ ಸರಿಯಾಗಿ ಯೋಗೇಂದ್ರನಾಥನು ಅಲ್ಲಿಗೆ ಬಂದನು. ಅಲ್ಲಿಯ ಸ್ಥಿತಿಗತಿಗಳನ್ನು ಕಂಡು ಅವನ ದೇಹವೆಲ್ಲವೂ ಕಂಪಿಸಿತು. ಅವನಿಗೆ ಅರಿಂದಮನ ಕಾಗದ ಸಿಕ್ಕಿರಲಿಲ್ಲ, ಜಮಾದಾರನು ಕಾಗದವನ್ನು ತೆಗೆದುಕೊಂಡು ಅವನ ಮನೆಗೆ ಹೋಗಿ ಸೇರುವುದರೊಳಗಾಗಿಯೇ ಅವನು ಮನೆಯನ್ನು ಬಿಟ್ಟು ಹೊರಟಿದ್ದನು. ಠಾಣೆಗೆ ಹೋಗಿ ಅಲ್ಲಿ ಆ ಜಮಾದಾರನಿಂದ ಈ ವರ್ತಮಾನವನ್ನು ಕೇಳಿದವನಾಗಿ ಇಲ್ಲಿಗೆ ಬಂದಿರುವನು. ಇದರ ಕಾರಣವನ್ನು ಕುರಿತು ದರೋಗನನ್ನು ಕೇಳಲಾಗಿ, ಅವನು ತನಗೆ ತಿಳಿದಿದ್ದುದನ್ನೆಲ್ಲಾ ಯೋಗೇಂದ್ರನಾಥನಿಗೆ ಹೇಳಿದನು. ಅರಿಂದಮನ ಆ ಕಾಗದದ ವಿಚಾರವು ಜ್ಞಾಪಕಕ್ಕೆ ಬರಲಿಲ್ಲ.

ಯೋಗೇಂದ್ರನಾಥನು ಕೇವಲ ಚಿಂತಾಪರವಶನಾಗಿ ಫ್ರೂಲ ಸಾಹೇಬನನ್ನು ಕುರಿತು—ತಾವು ಅರಿಂದಮ ಬಾಬುಗಳನ್ನು ಹೇಗಾದರೂ ಮಾಡಿ ಬದುಕಿಸಲಾರಿರಾ?—ಎಂದು ಕೇಳಿದನು.

ಈ ಸ್ಥಿತಿಯಲ್ಲಿ ನಾನೇನೂ ಮಾಡಲಾರೆ—ಎಂದು ಫ್ರೂಲಸಾಹೇಬನು ಹೇಳಿದನು.

ಯೋಗೇಂದ್ರನಾಥ—ಹಾಗಾದರೆ ಈತನು ಬದುಕಿಲ್ಲ?

ಫ್ರೂಲಸಾಹೇಬ—ಇಲ್ಲ, ಹಾಗೆ ಇದ್ದ ಪಕ್ಷದಲ್ಲಿ ನಾನು ನಿಶ್ಶಬ್ದನಾಗಿ ಕುಳಿತಿರುತ್ತಿರಲಿಲ್ಲ. ಇನ್ನು ಪಾಪ, ಈಗ ಏನುಮಾಡುವುದಕ್ಕೂ ಉಪಾಯವಿಲ್ಲ.

ಯೋಗೇಂದ್ರನಾಥನು ದೀರ್ಘನಿಶ್ವಾಸಬಿಟ್ಟು,—ಹಾಗಾದರೆ ಮುಂದೆ ಗತಿ! ಡಾಕ್ಟರ ಬಾಬೂ, ಹಠಾತ್ತಾಗಿ ಹೀಗೆ ಮರಣ ಹೊಂದಲು ಕಾರಣವೇನು? ಅರಿಂದಮ ಬಾಬುಗಳು ಆತ್ಮಹತ್ಯ ಮಾಡಿಕೊಂಡಿರಬೇಕೆಂದು ತೋರುತ್ತದೆ—ಎಂದನು.

ಫ್ರೂಲಸಾಹೇಬ—ಅನುಮಾನವಾಗಿ ನಾನೇನೂ ಹೇಳಲಾರೆ; ಹೃದಯದ ವೇದನೆಯಿಂದಲೇ ಮರಣ ಹೊಂದಿರುವರೆಂದು ತೋರುತ್ತದೆ.

ಹೀಗೆ ಹೇಳಿ ಫ್ರೂಲಸಾಹೇಬನು ಯೋಗೇಂದ್ರನಾಥನ ಅಪ್ಪಣೆ ಪಡೆದು ಅಲ್ಲಿಂದ ಎದ್ದನು. ಹೋಗುವಾಗ ಇನ್ನೊಂದು ಕಡೆಗೆ ತಿರುಗಿಕೊಂಡು ಒಂದುಸಲ ನಕ್ಕನು; ಆದರೆ, ಹಿಂಸಾತೀಕ್ಷ್ಣವಾದ, ಬಹುಕಾಲದಿಂದ ಅವನಿಗೆ ದುರ್ಲಭವಾಗಿದ್ದ ಆ ಮಂದಹಾಸವನ್ನು ಯಾರೂ ನೋಡಲಿಲ್ಲ.

ಫ್ರೂಲಸಾಹೇಬನು ಹೊರಟುಹೋದ ಮೇಲೆ ಸ್ವಲ್ಪ ಹೊತ್ತಿನೊಳಗಾಗಿ ಯೋಗೇಂದ್ರನಾಥನು ಬಂದು ಪಾಲ್ಕಿಯನ್ನು ತರಿಸಿ ಆ ಅವಸ್ಥೆಯಲ್ಲಿರುವ ಅರಿಂದಮನನ್ನು ತನ್ನ ಮನೆಗೆ ಕರೆದುಕೊಂಡು ಹೋದನು.

ಅಲ್ಲಿ ಅರಿಂದಮನನ್ನು ಪ್ರಶಸ್ತವೂ ಪರಿಷ್ಕಾರವೂ ಆದೊಂದು ಕೊಠಡಿಯಲ್ಲಿ ಮಲಗಿಸಿದನು. ಮನೆಗೆ ಬಂದಮೇಲೆ, ಅರಿಂದಮನ ಕಾಗದವು ಸಿಕ್ಕಿದ್ದರಿಂದ ಯೋಗೇಂದ್ರನಾಥನು ಎಲ್ಲವನ್ನೂ ತಿಳಿದುಕೊಂಡನು. ಕೂಡಲೇ ಪ್ರಸಿದ್ಧರಾದ ಚಿಕಿತ್ಸಕರಿಗೆ ಹೇಳಿ ಕಳುಹಿಸಿದನು. ಅನಂತರ ತಾನೇ ಸ್ವಂತವಾಗಿ ಅರಿಂದಮನ ಮನೆಗೆ ಹೋಗಿ ಅರ್ಧ ಮುಟ್ಟಿಗೆ ಸೇದಿದ್ದ ವಿಷಪೂರ್ಣವಾದ ಆ ಹೊಗೆಯ ಬತ್ತಿಯನ್ನು ತೆಗೆದುಕೊಂಡು ಬಂದನು. ಕಲಿಕತ್ತೆಯಿಂದ ಮೂರು ನಾಲ್ಕು ಮಂದಿ ಪ್ರಸಿದ್ಧರಾದ ಡಾಕ್ಟರರನ್ನು ಬರಮಾಡಿಕೊಂಡಿದ್ದನು. ಅಂದಿನ ರಾತ್ರಿ, ಕಡೆಯ ಝಾಮದಲ್ಲಿ, ಮೂರು ಮಂದಿ ಪ್ರಖ್ಯಾತ ಡಾಕ್ಟರುಗಳು ಯೋಗೇಂದ್ರನಾಥನ ಮನೆಯಿಂದ ಕಲಿಕತ್ತಾಭಿಮುಖವಾಗಿ ಪ್ರಯಾಣಮಾಡಿದರು.

---

## ಹನ್ನೆರಡನೆಯ ಪರಿಚ್ಛೇದ

### ಕುಲಸಮುಳ ಉದ್ವೇಗ

ಬೆಳಗಾದ ಮೇಲೆ ಯೋಗೇಂದ್ರನಾಥನ ಮನೆಯ ಮುಂದೆ ಬಂದು ಪಾಲ್ಕಿ ಬಂದು ನಿಂತಿತು. ಅದರೊಳಗಿನಿಂದ, ಮುಖಪರದೆ ಹಾಕಿಕೊಂಡ ಯುವತಿಯೊಬ್ಬಳು ಹೊರಗೆ ಬಂದು ಮನೆಯೊಳಕ್ಕೆ ಪ್ರವೇಶ ಮಾಡಿದಳು. ಆಗ ಯೋಗೇಂದ್ರನಾಥನು ಮನೆಯಲ್ಲಿಯೇ ಇದ್ದನು. ಮನೆಯ ಅಂಗಳದಲ್ಲಿ ಅವಳು ಯೋಗೇಂದ್ರನಾಥನನ್ನು ನೋಡಿದಳು. ರಮಣಿಯು ಯೋಗೇಂದ್ರನಾಥನನ್ನು ಕಂಡು ವ್ಯಗ್ರಭಾವದಿಂದ "ಅವರಿಗೆ ಹೇಗಿದೆ" ಎಂದು ಕೇಳಿದಳು.

ಯೋಗೇಂದ್ರನಾಥನು ವಿಸ್ಮಿತನಾಗಿ,—"ಯಾರಿಗೆ ಹೇಗಿದೆ?" ನೀವು ಯಾರ ವಿಚಾರವಾಗಿ ಮಾತನಾಡುತ್ತಿದ್ದೀರಿ?—ಎಂದು ಕೇಳಿದನು.

ರಮಣಿ—ಅರಿಂದಮನು ಬಾಬುಗಳ ವಿಚಾರವಾಗಿ. ಅವರು ಬದುಕಿಲ್ಲವೇನು?

ಯೋಗೇಂದ್ರ—ಡಾಕ್ಟರ ಫ್ರೂಲಸಾಹೇಬನು ಹಾಗೆ ಹೇಳಿ ಹೋದನು.

ರಮಣಿ—(ಕ್ರೋಧದಿಂದ) ಯಾರು, ಡಾಕ್ಟರ್ ಫ್ರೂಲಸಾಹೇಬನೆ? ಅವೇ ಪಿಶಾಚನೆ? ಹಾಗಾದರೆ ಅರಿಂದಮ ಬಾಬುವನ್ನು ಕೊಂದು ಹಾಕಿದವನು ಅವನೇ.

ಯೋಗೇಂದ್ರ—ಸರಿ! ನೀವು ಯಾರು?

ರಮಣಿ—ನಾನು ಕುಲಸಮೆ—ತಮಿಜುದ್ದೀನನ ಮಗಳು.

ಹೀಗೆಂದು ಹೇಳಿ ಕುಲಸಮೆಯು ಮೇಲ್ಮುಸುಕನ್ನು ತೆಗೆದು ಹಾಕಿ, ಹೇಳಿದಳು:—ನಾನು ಮೊದಲೇ ಎಲ್ಲವನ್ನೂ ತಿಳಿದುಕೊಂಡು, ಅರಿಂದಮ ಬಾಬುಗಳಿಗೆ ಎಚ್ಚರಿಕೆ ಕೊಟ್ಟಿದ್ದೆನು! ಅಯ್ಯೋ! ಆತನು ನನ್ನನ್ನು ಹುಚ್ಚಿ ಎಂದು ಭಾವಿಸಿ ನನ್ನ ಮಾತು ನಂಬದೆ ಹೋಗಿರಬೇಕು.

ಯೋಗೇಂದ್ರನಾಥ—ಅರಿಂದಮ ಬಾಬುಗಳನ್ನು ಡಾಕ್ಟರ್ ಫ್ರೂಲಸಾಹೇಬನು ಕೊಂದು ಹಾಕಿದನೆಂಬುದು ನಿಮಗೆ ಹೇಗೆ ತಿಳಿಯಿತು?

ಕುಲಸಮೆ—ನಾನು ಫ್ರೂಲಸಾಹೇಬನ ಮುಖ ನೋಡಿದ ಮಾತ್ರದಿಂದ, ಅವನ ಮನೋಭಾವವನ್ನು ಚೆನ್ನಾಗಿ ತಿಳಿಯಬಲ್ಲೆ; ತಾವೂ ನನ್ನ ಮಾತನ್ನು ನಂಬುವುದಿಲ್ಲವೇನು?

ಯೋಗೇಂದ್ರ—ಯಾತಕ್ಕೆ ನಂಬಕೂಡದು? ನೀವು ಏನಹೇಳುವುದಕ್ಕೆ ಬಂದಿದ್ದೀರೋ ಹೇಳಿರಿ.

ಕುಲಸಮೆ—ಅರಿಂದಮ ಬಾಬುಗಳು ಫ್ರೂಲಸಾಹೇಬನ, ಆ ವಿಷ ಬೆರತ ಹೊಗೆಯ ಸುತ್ತನ್ನು ಸೇದಿದರೋ?

ಯೋಗೇಂದ್ರ—ಹೂಂ.

ಕುಲಸಮೆ—(ಅಧೀರಳಾಗಿ) ಎಂತಹ ಸರ್ವನಾಶವಾಯಿತು! ಅವರು ಎಲ್ಲಿ? ನನ್ನನ್ನು ಅವರ ಸಮೀಪಕ್ಕೆ ಕರೆದುಕೊಂಡು ನಡೆಯಿರಿ, ಅವರಿಗೆ ಈಗ ಹೇಗಿದೆ?

ಯೋಗೇಂದ್ರ—ನೀವು ಅಲ್ಲಿಗೆ ಹೋಗಿ ಮಾಡುವುದೇನು ?

ಕುಲಸಮೆ—ನಾನು ಅವರನ್ನು ಬದುಕಿಸುತ್ತೇನೆ. ಅವರು ಮೃತ್ಯು ಮುಖದಲ್ಲಿದ್ದ ನನ್ನನ್ನು ಕಾಪಾಡಿದರು; ಈ ಸಂದರ್ಭದಲ್ಲಿ ನಾನು ಅವರಿಗಾಗಿ ನನ್ನ ಎಲ್ಲ ಪ್ರಯತ್ನವನ್ನೂ ಮಾಡುತ್ತೇನೆ.

ಯೋಗೇಂದ್ರ—ನೀವು ಈಗ ಆತನನ್ನು ಯಾವರೀತಿಯಿಂದ ಬದುಕಿಸಲಾಪಿರಿ ?

ಕುಲಸಮೆ—ಅವರು ಇನ್ನೂ ಮೃತರಾಗಿಲ್ಲ—ಆ ವಿಷದಿಂದ ಸತ್ತವರಹಾಗಿರುತ್ತಾರೆ. ಈಗ ಅವರನ್ನು ನೋಡಿದರೆ ಎಂತಹ ಪಂಡಿತೋತ್ತಮರೇ ಆಗಲಿ, ಅವರು ಬದುಕಿರುವರೆಂದು ಹೇಳಲಾರರು. ನಾನು ಈ ವಿಷದ ಸಂಬಂಧವಾದ ವಿಷಯಗಳನ್ನು ಫೂಲಸಾಹೇಬನಿಂದಲೇ ಕೇಳಿದ್ದೇನೆ. ಇದನ್ನು ನಿವಾರಿಸುವ ಔಷಧದ ಹೆಸರನ್ನುಕೂಡ ಅವನಿಂದಲೇ ತಿಳಿದಿದ್ದೇನೆ. ಒಂದು ದಿನ ನಮ್ಮ ಬಲತಾಯಿಗೆ ಈ ವಿಚಾರವನ್ನು ಕುರಿತು ಹೇಳುತ್ತಿದ್ದನು, ನಾನು ರಹಸ್ಯವಾಗಿದ್ದುಕೊಂಡು ಎಲ್ಲವನ್ನೂ ಕೇಳಿ ತಿಳಿದುಕೊಂಡಿದ್ದೇನೆ.

ಯೋಗೇಂದ್ರ—ಆತನು ಸಾಯಲಿಲ್ಲ; ಬಹುಪ್ರಯಾಸದಿಂದ ಬದುಕಿಕೊಂಡನು.

ಇದನ್ನು ಕೇಳಿ ಕುಲಸಮೆಯ ತಲೆಯಮೇಲೆ ಸುಖಮಯವಾದ ಸಿಡಿಲು ಬಿದ್ದಹಾಗಾಯಿತು. ನಿರತಿಶಯವಾದೊಂದು ಆನಂದದಿಂದುಂಟಾದ ವಿದ್ಯುತ್ಪ್ರವಾಹವು ಅವಳ ಶರೀರದಲ್ಲೆಲ್ಲಾ ಪ್ರವಹಿಸಿ, ಅವಳ ತಲೆಯೊಳಗೆ ಸಂಚಾಲನಗೊಳ್ಳುತ್ತಿರುವಂತೆ ತೋರಿತು. ಆ ಹೊತ್ತಿಗೆ ಸರಿಯಾಗಿ ಅರಿಂದಮನು ಅವಳೆದಿರಾಗಿ ಬಂದು ನಿಂತನು. ಅರಿಂದಮನ ಮುಖವು ಮ್ಲಾನವಾಗಿದೆ; ಕಾಂತಿಹೀನವಾಗಿದೆ; ದೇಹವು ಕೃಶವಾಗಿದೆ; ಕಣ್ಣುಗಳೆರಡೂ ಗುಣಿಗಿಳಿದಿವೆ. ನೋಡಿದರೆ ಅರಿಂದಮನೇ ಅಲ್ಲವೆನ್ನುವ ಹಾಗಿದೆ; ಕಾಂತಿಯುಕ್ತವಾಗಿಯೂ ಬಲಪೂರ್ಣವಾಗಿಯೂ ಇದ್ದ ಅಂತಹ ಶರೀರಕ್ಕೆ ಯಾರೋ ಮಸಿ ಬಳಿದುಬಿಟ್ಟಿದ್ದಾರೆ. ಅರಿಂದಮನು,—ಏನು ಕುಲಸಮೆ ! ನನ್ನನ್ನು ನೋಡು

ವೃದಕ್ಕಾಗಿ ಬಂದೆಯಾ? ನಾನು ಸಾಯಲಿಲ್ಲ; ಚೆನ್ನಾಗಿಯೇ ಇದ್ದೇನೆ. ಇಷ್ಟು ಶ್ರಮಪಟ್ಟುಕೊಂಡು ನೀನೇಕೆ ಇಷ್ಟುದೂರ ಬಂದೆ?—ಎಂದು ಮಂದಹಾಸದೊಡನೆ ಕೇಳಿದನು.

ಕುಲಸಮ್—ತಾವು ಒಂದು ದಿನ ನನಗೋಸ್ಕರ ನಿಮ್ಮ ಪ್ರಾಣವನ್ನು ವಿಪತ್ತಿಗೆ ಈಡುಮಾಡಿದ್ದಿರಿ; ನಾನು ತಮಗೆ ಇಂತಹ ತೊಂದರೆ ಸಂಭವಿಸಿರುವುದೆಂಬುದನ್ನು ಕೇಳಿದ್ದರಿಂದ ಒಂದು ಸಲ, ನೋಡಿಕೊಂಡಾದರೂ ಹೋಗೋಣವೆಂದು ಬಂದೆ, ಇದೇನು ಮಹಾಪ್ರಮಾದ?

ಅರಿಂದಮ—ಕುಲಸಮ್, ನಾನು ನಿನ್ನಿಂದ ಕೆಲವು ಸಂದರ್ಭಗಳನ್ನು ಕೇಳಿ ತಿಳಿದುಕೊಳ್ಳಬೇಕಾಗಿದೆ.

ಕುಲಸಮ್—ಹೇಳಿರಿ, ನಾನು ತಮ್ಮಲ್ಲಿ ಒಂದು ಅಕ್ಷರವನ್ನೂ ಮರೆಮಾಚುವುದಿಲ್ಲ. ನಾನು ತಾಯಿತಂದೆಗಳಿಲ್ಲದ ತಬ್ಬಲಿ, ನಿಮ್ಮ ಮರೆಹೊಕ್ಕಿದ್ದೇನೆ; ತಮ್ಮಿಂದ ನನಗೆ ಅನೇಕವಾಗಿ ಉಪಕಾರವಾದೀತೆಂದು ನಂಬಿದ್ದೇನೆ. ತಾವು ನನ್ನನ್ನು ಈ ವಿಪತ್ತಿನಿಂದ ಉದ್ಧಾರಮಾಡದಿದ್ದರೆ, ನನಗೆ ಬೇರೆ ಮಾರ್ಗವೇ ಇಲ್ಲ. ನಾನು ಈಗ ಭಯಂಕರವಾದ ಮತ್ತೊಂದು ಕಷ್ಟಕ್ಕೆ ಸಿಕ್ಕಿದ್ದೇನೆ; ಇನ್ನು ಎರಡು ಮೂರು ದಿವಸಗಳೊಳಗಾಗಿ, ನಾನು ಫೂಲಸಾಹೇಬನನ್ನು ಮದುವೆಯಾಗಲು ಸಮ್ಮತಿಸದ ಪಕ್ಷದಲ್ಲಿ, ಅವರು ನನ್ನನ್ನು ಕೊಂದುಬಿಡುತ್ತಾರೆ. ಅವರು ಈ ರೀತಿಯಾಗಿ ಇಂದು ಆಲೋಚನೆ ಮಾಡುತ್ತಿದ್ದ ಸಮಯದಲ್ಲಿ ನಾನು ರಹಸ್ಯವಾಗಿದ್ದುಕೊಂಡು ಅವರ ಮಾತುಕತೆಗಳನ್ನು ಬಹುದೂರ ಕೇಳಿದೆ.

ಅರಿಂದಮ—ಅವರುಗಳು ಎಂದರೆ ಯಾರು ಯಾರು? ನೀನು ಮತ್ತೆ ಯಾರ ಸುದ್ದಿ ಹೇಳುತ್ತಿರುವೆ?

ಕುಲಸಮ್—ಇನ್ನೊಬ್ಬಳು, ನನ್ನ ಆ ರಾಕ್ಷಸಿಯಾದ ಮಲತಾಯಿ.

ಅರಿಂದಮ—ಅವಳು ಕೂಡ ಈ ದುರಾಲೋಚನೆಗೆ ಒಳಗಾಗಿರುವಳೇನು?

ಕುಲಸಮೆ—ಇಷ್ಟರ ಮೋಸ-ಕೃತ್ರಿಮಗಳೆಲ್ಲವೂ ಅವಳವೇ, ಫೂಲಸಾಹೇಬನು ನಿಮಿತ್ತಮಾತ್ರನು. ನನ್ನ ಬಲಿತಾಯಿಯನ್ನು ಕೇವಲ ಸಾಮಾನ್ಯಳೆಂದು ಭಾವಿಸಬೇಡಿ. ಅವಳು ಮಾಡಲಾರದಂತಹ ಭಯಂಕರ ಕೃತ್ಯವು ಪ್ರಪಂಚದಲ್ಲಿಯೇ ಇಲ್ಲ. ನಮ್ಮ ಬಲಿತಾಯಿ ಫೂಲಸಾಹೇಬನ ಅಕ್ಕನ ಮಗಳಂತೆ. ಫೂಲಸಾಹೇಬನು ಕಪಟೋಪಾಯಗಳಿಂದ, ನಮ್ಮ ತಂದೆಗೆ ತನ್ನ ಆ ಅಕ್ಕನ ಮಗಳನ್ನು ಮದುವೆ ಮಾಡಿಕೊಟ್ಟನು; ಆದರೆ ಫೂಲಸಾಹೇಬನಿಗೂ ನಮ್ಮ ಬಲಿತಾಯಿಗೂ ಇರುತ್ತಿರುವ ವಿಶ್ವಾಸವನ್ನು ನೋಡಿದರೆ, ಮನಸ್ಸಿಗೆ ತುಂಬಾ ಅಸಹ್ಯವಾಗುತ್ತದೆ. ಅವಳು ಕುಲೀನರ ಮನೆಯ ಹೆಣ್ಣುಮಗಳೆಂದು ತೋರುವದಿಲ್ಲ.

ಅರಿಂದಮ—ನೀನು ರಹಸ್ಯವಾಗಿದ್ದುಕೊಂಡು ನಿನ್ನೆಯ ದಿನ ಕೇಳಿದುದೇನು? ನನ್ನ ವಿಚಾರವಾದ ಪ್ರಸ್ತಾಪವೇನಾದರೂ ಬಂದಿದ್ದಿತೊ?

ಕುಲಸಮೆ—ಮೊದಲು ನಿಮ್ಮ ಪ್ರಸ್ತಾಪವೇ ನಡೆಯಿತು. ಫೂಲಸಾಹೇಬನು ತನಗೆ ವಿಷ ಬೆರೆತ ಮತ್ತನ್ನು ಕೊಟ್ಟು ಉಪಾಯವಾಗಿ ನಿಮ್ಮನ್ನು ಮೃತ್ಯುಮುಖಕ್ಕೆ ಒಳಪಡಿಸುವನು; ಅದರಿಂದ ಅವನು ನಮ್ಮ ಬಲಿತಾಯಿಯೊಡನೆ ನಗುತ ನಗುತ ಮಾತನಾಡುತ್ತಿದ್ದನು. ಅದಾದಮೇಲೆ ನನ್ನನ್ನು ಹೇಗೆ ಮುಳುಗಿಸಬಹುದು, ಯಾವ ರೀತಿಯಿಂದ ನನ್ನ ಐಶ್ವರ್ಯವೆಲ್ಲವನ್ನೂ ವಂಚಿಸಿ ತೆಗೆದುಕೊಳ್ಳಬಹುದು, ಈ ಎಲ್ಲ ವಿಚಾರಗಳನ್ನೂ ಕುರಿತು ರಹಸ್ಯವಾದ ಪರಾಮರ್ಶೆಗಳಾಗತೊಡಗಿದುವು. ಕಟ್ಟಕಡೆಯಲ್ಲಿ, ಅವರ ಕಾರ್ಯಸಿದ್ಧಿಯಾಗುವದಕ್ಕೆ ನನ್ನನ್ನು ಕೊಲೆ ಮಾಡಬೇಕಾಗಿ ಬಂದಲ್ಲಿ ಅದನ್ನು ಕೂಡ ಮಾಡಿಯೇ ಬಿಡಬೇಕೆಂದು ನಿಷ್ಕರ್ಷೆಯಾಯಿತು. ವಿಧಾತನು ಫೂಲಸಾಹೇಬರೂಪಿಯಾದ ಪಿಶಾಚಿಯನ್ನು ಮನುಷ್ಯ ವರ್ಗದಲ್ಲಿ ಏತಕ್ಕೆ ಸೇರಿಸಿದನೋ ತಿಳಿಯದು. ಇದೇ ಫೂಲಸಾಹೇಬನು ಕರುಣಾಮಯನಾದ ನಮ್ಮ ತಂದೆಯನ್ನು ಕೊಲೆ ಮಾಡಿದನು; ಸ್ನೇಹಮಯಿಯಾದ ತಾಯನ್ನು ಕೊಲೆ ಮಾಡಿದನು;

ನನಗಿದ್ದ ಒಬ್ಬನೇ ಅಣ್ಣನನ್ನೂ ಕೊಲೆ ಮಾಡಿದನು; ಯಾರಿಗೂ ತಿಳಿಯದಹಾಗೆ, ಯಾರೂ ಊಹಿಸಲಾಗದ ಹಾಗೆ, ಇಷ್ಟು ಮಂದಿಯನ್ನೂ ಕೊಲೆ ಮಾಡಿಬಿಟ್ಟನು; ಒಟ್ಟಿನಲ್ಲಿ ಮೂರು ಜೀವಗಳು ಈ ಕೊಲೆಪಾತಕನ ವಿಷದ ದೆಸೆಯಿಂದ ಈ ಜಗತ್ತನ್ನು ಬಿಟ್ಟು ಎಲ್ಲಿಗೋ ಹೊರಟು ಹೋದುವು. ಈ ಪಿಶಾಚನು ಯಾವ ವಿಷದ ದೆಸೆಯಿಂದ ಅವರುಗಳನ್ನು ಕೊಂದುಹಾಕಿದನೋ ಅದರಿಂದ ಮನುಷ್ಯನು ಒಂದೇ ದಿನದಲ್ಲಿ ಸಾಯುವುದಿಲ್ಲ—ಕೊಂಚಕೊಂಚವಾಗಿ ಕ್ಷಯಿಸಿ ಸಾಯುವನು; ಕೇವಲ ನನ್ನ ಪ್ರಯತ್ನದಿಂದಲೇ ನಮ್ಮ ತಂದೆ ಇದುವರೆಗೂ ಜೀವದಿಂದಿದ್ದನು. ನಮ್ಮ ಬಲತಾಯಿ, ನಮ್ಮ ತಂದೆ ಕುಡಿಯುವ ನೀರಿನ ಸಂಗಡ ಪ್ರತಿದಿನವೂ ವಿಷವನ್ನು ಬೆರಸಿಡುತ್ತಿದ್ದಳು. ನನಗೆ ಅವಕಾಶ ದೊರೆತಾಗಲೆಲ್ಲ ಆ ನೀರನ್ನು ಚೆಲ್ಲಿಬಿಟ್ಟು, ಕುಡಿಯುವುದಕ್ಕೆ ಬೇರೆ ನೀರು ಕೊಡುತ್ತಿದ್ದೆನು. ಎಲ್ಲ ದಿವಸಗಳಲ್ಲಿಯೂ ಅವಕಾಶ ದೊರೆಯುತ್ತಿರಲಿಲ್ಲ; ನಮ್ಮ ತಂದೆ ಹಾಸಿಗೆ ಹಿಡಿದು ಮಲಗಿದನಾದರೂ ಈವರೆಗೂ ಬದುಕಿದ್ದುದು ನನ್ನ ಪ್ರಯತ್ನದಿಂದಲೇ; ಇಲ್ಲವಾಗಿದ್ದಿದ್ದರೆ ಒಂದು ತಿಂಗಳೊಳಗಾಗಿಯೇ ಆತನು ಇಹಲೋಕವನ್ನು ಬಿಟ್ಟು ಹೋಗಬೇಕಾಗಿರುತ್ತಿದ್ದಿತು. ವಿಷವನ್ನು ಕುಡಿದೂ ಕೂಡ ತಂದೆ ಇಷ್ಟು ದಿನಗಳವರೆಗೆ ಬದುಕಿದ್ದುದನ್ನು ಕಂಡು ಫೂಲಸಾಹೇಬನೂ ನಮ್ಮ ಬಲತಾಯಿಯೂ ಬಹುವಾಗಿ ಆಲೋಚನಾಪರರಾದರು. ಇಬ್ಬರಿಗೂ ಆಲೋಚನೆ ಮಾಡುವುದೇ ಕೆಲಸವಾಯಿತು; ಮಧ್ಯೇ ಮಧ್ಯೇ ವಿಷದ ಪರಿಮಾಣವನ್ನು ಹೆಚ್ಚಿಸಿ ಕೊಡುತ್ತಿದ್ದರು. ಒಂದು ದಿನ ತಂದೆಯೊಡನೆ ಈ ಪ್ರಸ್ತಾಪವನ್ನು ಮಾಡಿದೆ. ಆತನು ಹೇಗೆ ಸರಳ ಸ್ವಭಾವದವನೋ ಹಾಗೆಯೇ ಇತರರೂ ಸರಳ ಸ್ವಭಾವದವರೆಂದು ಭಾವಿಸಿರುತ್ತಿದ್ದನು. ಪರಮ ಪಾತಕಿಯಾದ ಫೂಲಸಾಹೇಬನಲ್ಲಿಯೂ ನನ್ನ ಆ ರಾಕ್ಷಸಿಯಾದ ಬಲತಾಯಿಯ ಮೇಲೆಯೂ ಆತನಿಗೆ ಅಪಾರವಾದ ವಿಶ್ವಾಸವಿದ್ದಿತು. ಆತನು ನನ್ನ ಮಾತನ್ನು ನಂಬಲಿಲ್ಲ; ಕೇಳಿದವನೇ ನಕ್ಕು ಪರಿಹಾಸಮಾಡಿಬಿಟ್ಟನು. ಅಕಟಾ! ನಾನು ಎಂತಹ ಹತಭಾಗಿನಿ, ಇಷ್ಟು ಮಾಡಿಯೂ ತಂದೆಯನ್ನು ಉಳಿಸಿಕೊಳ್ಳಲಾರದೇ ಹೋದೆ!

ಕುಲಸಮೆಯು ವಿಸ್ತಾರವಾದ ಎರಡು ಕಣ್ಣುಗಳಲ್ಲಿಯೂ ಕಣ್ಣೀರು ತುಂಬುತ್ತ ಬಂದಿತು. ಸೆರಗಿನಿಂದ ಮುಖವನ್ನು ಮುಚ್ಚಿಕೊಂಡು ಕುಲಸಮೆಯು ಆಕುಲ ಹೃದಯದಿಂದ ಅಳುವುದಕ್ಕೆ ಉಪಕ್ರಮಿಸಿದಳು.

---

## ಹದಿಮೂರನೆಯ ಪರಿಚ್ಛೇದ

### ಕುಲಸಮೆಯ ದುಃಖ ಮತ್ತು ಕ್ರೋಧ

ಅರಿಂದಮನು ಅವಳನ್ನು ಸಮಾಧಾನಪಡಿಸುತ್ತಾ "ಕುಲಸಮ್, ನಡೆದುಹೋದುದನ್ನು ಕುರಿತು ಹಂಬಲಿಸುವುದರಿಂದ ಏನೂ ಫಲವಿಲ್ಲ. ಈಗ ಇವೆಲ್ಲಕ್ಕೂ ಸರಿಯಾದ ಪ್ರತೀಕಾರವಾಗುವಂತೆ ಮಾಡಬೇಕಲ್ಲವೆ? ನಿಮ್ಮ ತಂದೆ, ತಾಯಿ ಮತ್ತು ಅಣ್ಣ ಇವರುಗಳನ್ನು ಕೊಂದುಹಾಕಿದ ಆ ಪಾತಕಿಯು ಯಾವುದರಿಂದ ಬಿಡುಗಡೆ ಹೊಂದಲಾರನೋ ಅಂತಹುದನ್ನು ಮಾಡುವುದೊಂದೇ ಈಗ ನಿನ್ನ ಕರ್ತವ್ಯವಲ್ಲವೆ? ಅವನಿಗೆ ಸರಿಯಾದ ಪ್ರತೀಕಾರವನ್ನು ಮಾಡುವುದಿಲ್ಲವೇ?" ಎಂದು ಕೇಳಿದನು.

ಕುಲಸಮೆಯು ಕಣ್ಣೊರಸಿಕೊಂಡು, ಮುಖವನ್ನೆತ್ತಿ ಅರಿಂದಮನ ಮುಖವನ್ನು ಅರೆಗಳಿಗೆಯವರೆಗೆ ಕ್ರೋಧ-ವಿಸ್ಫಾರಿತ-ನೇತ್ರಗಳಿಂದ ನೋಡುತ್ತಿದ್ದಳು. ಅನಂತರ ಹೇಳಿದಳು—ಸರಿಯಾದ ಪ್ರತೀಕಾರ ಮಾಡುವುದು ಹಾಗಿರಲಿ—ಆ ಪಾಪಿಯ ಶರೀರದಲ್ಲಿ ಒಂದು ಘಾಯ ಮಾಡುವುದಕ್ಕಾದರೂ ಸರಿ, ನನ್ನ ಸರ್ವಸ್ವವನ್ನೂ ವೆಚ್ಚ ಮಾಡುತ್ತೇನೆ. ಘೂಲಸಾಹೇಬನು ನಂದನದಂತೆ ಇದ್ದ ನಮ್ಮ ಸಂಸಾರವನ್ನು ಸ್ಮಶಾನ ಮಾಡಿಬಿಟ್ಟನು ; ಈಗ ನನ್ನನ್ನು ಕೊಲ್ಲುವುದು ಸಾಧ್ಯವಾದರೆ ಆ ಪಿಶಾಚನಿಗೆ ನಿಷ್ಕಂಟಕವಾದೀತು. ನಮ್ಮ ಮನೆಯಲ್ಲಿ ಇನ್ನೂ ಒಬ್ಬಾತನಿದ್ದನು. ಆತನ ಹೆಸರು ಸಿರಾಜುದ್ದೀನನೆಂದು. ಈಗ್ಗೆ ಒಂದು ತಿಂಗಳಾಯಿತು; ಇದೇ ಪಿಶಾಚನು ನಮ್ಮ ಬಲತಾಯಿಯ ಸಂಗಡ ಆಲೋಚನೆ ಮಾಡಿ ಆತನನ್ನು ಎಲ್ಲಿಯೋ ಮರೆಮಾಡಿದ್ದಾನೆ. ಇದುವರೆಗೆ ಆತನ ವರ್ತ-

ಮಾನವೇ ಇಲ್ಲ. ತಂದೆಗೆ ಆತನಲ್ಲಿ ತುಂಬಾ ವಿಶ್ವಾಸವಿದ್ದಿತು. ಆತನಿಗೆ ಫೂಲಸಾಹೇಬನ ಯೋಗ್ಯತೆ ತಿಳಿಯಲು ಸಾಧ್ಯವಾಗಲೇ ಇಲ್ಲ; ಫೂಲಸಾಹೇಬನ ತಂತ್ರದಿಂದ ಆ ಕೆಲಸವಾಯಿತೆಂದು ಆತನು ಒಂದು ಸಲವಾದರೂ ಸಂಶಯಪಡಲಿಲ್ಲ. ತಾನೇ ಹಾಸಿಗೆ ಹಿಡಿದನು; ಏನ ಮಾಡಿಯಾನು? ಆತನನ್ನು ಹುಡುಕಿಸಬೇಕೆಂದು ಫೂಲಸಾಹೇಬನಿಗೇ ಹೇಳಿದನು. ಕಾರ್ಯತಃ ಏನೂ ಆಗಲಿಲ್ಲ. ಆದರೆ, ಫೂಲಸಾಹೇಬನು ಆತನನ್ನು ನಿರ್ಬಂಧದಲ್ಲಿಟ್ಟಿರುವನೆಂದು ಮಾತ್ರ ಹೇಳಬಲ್ಲೆ; ಇನ್ನೂ ಆತನನ್ನು ಕೊಂದುಹಾಕಿಲ್ಲ. ಪ್ರಸಿದ್ಧ ಠಕಾಯತನಾದ ಕಾಕೂರಾಯನ ಬಳಿ ಆತನನ್ನು ಬಂದಿಯನ್ನಾಗಿ ಇರಿಸಿದ್ದರೂ ಇರಿಸಿರಬಹುದು—ಎಂದಳು.

ಅರಿಂದಮ—ಅದು ನಿನಗೆ ಏನಾಗಬೇಕು?

ಕುಲಸಮ್—ಸಿರಾಜುದ್ದೀನನ ತಂದೆ ವಸೀರುದ್ದೀನನು ನನ್ನ ತಂದೆಯ ಜಮೀನುದಾರಿಯಲ್ಲಿ ಮುಖ್ಯ ನಾಯಬನಾಗಿದ್ದನು; ವಸೀರುದ್ದೀನನು ಮಾತ್ರವೇ ಏಕೆ? ವಸೀರುದ್ದೀನನ ತಂದೆ, ತಾತ ಮುಂತಾದ ಪೂರ್ವಿಕರೆಲ್ಲರೂ ನನ್ನ ಜಮೀನ್ದಾರಿಯಲ್ಲಿ ನಾಯಬರಾಗಿದ್ದುಕೊಂಡು ಬಹಳ ಹಣವನ್ನು ಸಂಪಾದಿಸಿದವರು. ವಸೀರುದ್ದೀನನು ನನ್ನ ತಾತಂದಿರ ಕಾಲದಿಂದ ಕೆಲಸಮಾಡಿಕೊಂಡು ಬಂದವನು. ಆತನ ಕುಟುಂಬದಲ್ಲಿ ಏಕಮಾತ್ರ ಪುತ್ರನಾದ ಸಿರಾಜುದ್ದೀನನ ವಿನಾ ಯಾರೂ ಇರಲಿಲ್ಲ. ವಸೀರುದ್ದೀನನು ಮೃತನಾಗಿ ಈಗ್ಗೆ ಹದಿನೈದು ವರ್ಷವಾಯಿತು; ಆಗ ಆತನ ಮಗನ ವಯಸ್ಸು ಹತ್ತು ವರ್ಷ. ಸಾಯುವಾಗ ವಸೀರುದ್ದೀನನು ಸಿರಾಜುದ್ದೀನನನ್ನು ನನ್ನ ತಂದೆಗೆ ಒಪ್ಪಿಸಿ ಹೋದನು; ಸಿರಾಜುದ್ದೀನನು ಬಹು ನಮ್ರನೂ, ವಿನಯವಂತನೂ, ವಿಧೇಯನೂ ಆಗಿದ್ದುದರಿಂದ ಸ್ವಲ್ಪ ದಿನಗಳೊಳಗಾಗಿಯೇ ಆತನು ನನ್ನ ತಂದೆಯ ವಿಶ್ವಾಸಕ್ಕೆ ಸಂಪೂರ್ಣ ಭಾಜನನಾದನು. ತಂದೆಯು ತನ್ನ ಮಗನು ಹೇಗೋ ಹಾಗೆ ಆತನನ್ನೂ ಪ್ರೀತಿಸುತ್ತಿದ್ದನು. ನನ್ನ ತಂದೆ ಸಿರಾಜುದ್ದೀನನ ರಕ್ಷಣಾಪೇಕ್ಷೆಗಾಗಿಯಾಗಲೀ ವಿದ್ಯಾಭ್ಯಾಸದ ವೆಚ್ಚಕ್ಕಾಗಲೀ ಆತನ ಪಿತರಾರ್ಜಿತವಾದ ಆಸ್ತಿಯಲ್ಲಿ ಒಂದು

ಕವಡೆಯನ್ನೂ ತೆಗೆದುಕೊಂಡದ್ದಿಲ್ಲ; ಸ್ವಂತ ವೆಚ್ಚದಿಂದಲೇ ಎಲ್ಲವನ್ನೂ ನಡಿಸಿಕೊಡುತ್ತಿದ್ದನು. ಸಿರಾಜುದ್ದೀನನು ಈವರೆಗೆ ಕಲಿಕತ್ತೆಯಲ್ಲಿರುವ ಪ್ರಸಿದ್ಧನಾದ ಚಿತ್ರಗಾರನ ಹತ್ತಿರ ಚಿತ್ರ ವಿದ್ಯೆಯನ್ನು ಕಲಿಯುತ್ತಿದ್ದನು; ಅದಕ್ಕಾಗಿ ಕೊಡಬೇಕಾದ ವೇತನ, ಮನೆಯ ಬಾಡಿಗೆ ಮುಂತಾದುವುಕ್ಕೋಸ್ಕರ ತಿಂಗಳಿಗೆ ಸುಮಾರು ಐವತ್ತು ರೂಪಾಯಿಗಳಾಗುತ್ತಿದ್ದುವು. ಇದನ್ನು ಕೂಡ ಆತನಿಗೆ ಕೊಡುತ್ತಿದ್ದರು. ಸಿರಾಜುದ್ದೀನನು ಈವರೆಗೂ ಕಲಿಕತ್ತೆಯಲ್ಲಿರುತ್ತಿದ್ದನಷ್ಟೆ; ಮಧ್ಯೆ ಮಧ್ಯೆ ಇಲ್ಲಿಗೂ ಬರುತ್ತಿದ್ದನು; ಮೂರುನಾಲ್ಕು ದಿನಗಳ ಮಟ್ಟಿಗೆ ಇಲ್ಲಿದ್ದು ಹೋಗುತ್ತಿದ್ದನು. ಫೂಲಸಾಹೇಬನ ದೆಸೆಯಿಂದ ನಮ್ಮ ಸಂಸಾರವು ಕ್ರಮಕ್ರಮವಾಗಿ ಧ್ವಂಸವಾಗುತ್ತಿರುವುದನ್ನು ಆತನು ತಿಳಿದಿದ್ದನು; ಆ ವಿಚಾರವಾಗಿ ನಮ್ಮ ತಂದೆಗೆ ಎಷ್ಟೋ ಸಲ ಎಚ್ಚರಿಕೆ ಕೊಡುತ್ತಿದ್ದನು. ಮಾಯಾವಿಯಾದ ಫೂಲಸಾಹೇಬನ ಮೋಹಮಂತ್ರದಿಂದ ವ್ಯಾಮೋಹಿತ ನಮ್ಮ ತಂದೆಯು ಫೂಲಸಾಹೇಬನ ಮೇಲೆ ಕೊಂಚವಾದರೂ ಕಾಠಿಣ್ಯವನ್ನು ತೋರದಮಟ್ಟಿಗೆ ಮೃದುವಾಗಿಹೋಗಿದ್ದನು; ಹಾಗಿದ್ದರೂ ಸಿರಾಜುದ್ದೀನನು ಇಲ್ಲಿಗೆ ಬಂದಾಗಲೆಲ್ಲ ಫೂಲಸಾಹೇಬನ ವಿಚಾರವಾಗಿ ತಂದೆಗೆ ಅನೇಕ ಸಂಗತಿಗಳನ್ನು ಹೇಳುತ್ತಿದ್ದನು.

ಅರಿಂದಮ—ಇದೊಂದು ಕಾರಣದಿಂದಲೇ ಫೂಲಸಾಹೇಬನು ಆತನನ್ನು ಬಂದಿಯನ್ನಾಗಿ ಮಾಡಿದನೋ, ಅಥವಾ ಇನ್ನೂ ಏನಾದರೂ ಉದ್ದೇಶ್ಯವಿದ್ದಿತೋ?

ಇನ್ನೂ ಒಂದು ಉದ್ದೇಶ್ಯವುಂಟು. ಪ್ರಾಯಶಃ ಅದೇ ಮುಖ್ಯವಾದುದೆಂದು ತೋರುತ್ತದೆ—ಎಂದು ಹೇಳಿ ಕುಲಸಮಳು ಕೊಂಚ ಮಟ್ಟಿಗೆ ಲಜ್ಜಿತಳಾಗಿ ತಲೆ ತಗ್ಗಿಸಿದಳು.

ಅರಿಂದಮ—ಅದಾವುದು ?

ಕುಲಸಮ ಉತ್ತರ ಹೇಳಲಿಲ್ಲ. ಹಾಗೆಯೇ ತಲೆ ತಗ್ಗಿಸಿಕೊಂಡು ಸುಮ್ಮನೆ ನಿಂತುಕೊಂಡಿದ್ದಳು. ಅರಿಂದಮನು—ನಾಚಿಗೆ ಪಟ್ಟು ನನ್ನಲ್ಲಿ ಯಾವ ವಿಚಾರವನ್ನೂ ಮರೆಮಾಚಬೇಡ—ಎಂದು ಹೇಳಿದನು.

ಕುಲಸಮೆಯು ತಲೆ ತಗ್ಗಿಸಿದವಳಾಗಿಯೇ—ಆತನಿಗೆ ನನ್ನನ್ನು ಕೊಟ್ಟು ಮದುವೆಯಾಗುವುದಾಗಿ ಮಾತು ನಡೆದಿತ್ತು—ಎಂದಳು.

ಅರಿಂದಮ—ನಾನೂ ಹಾಗೆಯೇ ಊಹಿಸಿದೆ. ಡಕಾಯಿತನಾದ ಕಾಳೂರಾಯನಲ್ಲಿ ಈಗ ಅವನು ಬಂದಿಯಾಗಿದ್ದಾನೆ—ಎಂದು ನಿನಗೆ ಯಾರು ಹೇಳಿದರು?

ಕುಲಸಮೆ—ಒಂದು ದಿನ ನನ್ನ ಬಲಿತಾಯಿ ಫೂಲಸಾಹೇಬನಿಗೆ ಈ ರೀತಿಯಾಗಿ ಸಲಹೆ ಕೊಡುತ್ತಿದ್ದಳು. ನಾನು ಮರೆಯಾಗಿದ್ದು ಕೊಂಡು ಕೇಳಿದೆ.

ಅರಿಂದಮ—ಕಾಳೂರಾಯನು ಮಹಾ ಪರಾಕ್ರಮಶಾಲಿಯಾದ ಮನುಷ್ಯ. ಅವನಿಂದ ಸಿರಾಜುದ್ದೀನನನ್ನು ಬಿಡಿಸಿ ತರುವುದೆಂದರೆ ಸಾಮಾನ್ಯವಾದ ಕೆಲಸವಲ್ಲ; ಆದರೂ ನಾನು ಆತನನ್ನು ಬಿಡಿಸಿ ತರಲು ಸಾಧ್ಯವಾದಮಟ್ಟಿಗೂ ಪ್ರಯತ್ನ ಮಾಡುತ್ತೇನೆ. ಈವರೆಗೆ ಯಾವ ಪತ್ತೇದಾರನೂ ಕಾಳೂರಾಯನನ್ನು ಸೆರೆಹಿಡಿಯಲಾಗಲಿಲ್ಲ. ಅವನನ್ನು ಹಿಡಿದುಹಾಕುವುದು ಹಾಗಿರಲಿ, ಅವನು ಯಾವ ಸ್ಥಳದಲ್ಲಿ ಇದ್ದುಕೊಂಡು ಡಕಾಯಿತಿ ಮಾಡುವನೆಂಬುದನ್ನು ಸಹ ಯಾರೂ ಕಂಡುಹಿಡಿಯಲಾಗಲಿಲ್ಲ. ಅನೇಕರು ಅವನನ್ನು ಹಿಡಿವುದಕ್ಕೆಂದು ಹೋಗಿ ಅವನಿಗೇ ಬಲಿಯಾಗಿ ಹೋಗಿದ್ದಾರೆ. ನಾನೂ ಸಹ ಅವನನ್ನು ಹಿಡಿದುಹಾಕುವುದಕ್ಕಾಗಿ ಅನೇಕಾವರ್ತಿ ಅನೇಕವಾಗಿ ಪ್ರಯತ್ನಮಾಡಿ ನೋಡಿದೆ; ಆದರೆ ಕಾರ್ಯತಃ ಏನೂ ಮಾಡಲಾಗಲಿಲ್ಲ.

ಇದನ್ನು ಕೇಳಿ ಕುಲಸಮೆಯ ಮುಖವು ಕಾಂತಿಹೀನವಾಯಿತು. ಅವಳು ಕಾಳೂರಾಯನ ಅಖಂಡ ಪ್ರತಾಪವನ್ನು ಅರಿಂದಮನಿಂದಲೇ ಕೇಳಿದಳು. ಅವರಿಂದ ಅವನ ದೆಸೆಯಿಂದ ಸಿರಾಜುದ್ದೀನನು ಎಂದಾದರೂ ಬಿಡುಗಡೆ ಹೊಂದಬಹುದು ಎಂಬ ಆಸೆಗೆ ಅವಳ ಹೃದಯದಲ್ಲಿ ಸ್ಥಳವಿಲ್ಲವಾಯಿತು; ನಿರಾಸೆಯಿಂದುಂಟಾದ ಅಪರಿಹಾರ್ಯವಾದ ಮಹಾವ್ಯಥೆಯಿಂದ ಅವಳ ಹೃದಯವು ಬಹುವಾಗಿ ಆವರಿಸಲ್ಪಟ್ಟಿತು.

ಕುಲಸಮುಳಿಗೆ ಸಿರಾಜನಲ್ಲಿ ಎಷ್ಟರ ಪ್ರೀತಿಯಿದ್ದಿತೆಂಬುದನ್ನು ಅವಳೇ ಅರಿತಿರಲಿಲ್ಲ; ಆ ಪ್ರೀತಿ ಎಂಬುದು ಉದ್ದಾಮವಾದುದು, ಪರಿಪೂರ್ಣವಾದುದು, ಗಾಢವಾದುದು—ಆದರೆ, ಅದು ಬಹುಚಂಚಲವೂ ಅಸ್ಥಿರವೂ ಆದ ಯೌವನದ ದೆಸೆಯಿಂದ ಹುಟ್ಟಿ, ಮತ್ತೆಷ್ಟು ಅಸ್ಥಿರವಾದ, ಇನ್ನೆಷ್ಟು ಚಂಚಲ ಸ್ವಭಾವವುಳ್ಳ ಆವೇಗಮಯವಾದ ಕೇವಲ ಮದಿರೋಚ್ಛ್ವಾಸವಲ್ಲ; ಅವಳ ಆ ಪ್ರೀತಿಯು ಅವಳ ಜೀವಿತ ಕಾಲದಲ್ಲೆಲ್ಲಾ ಸ್ವಲ್ಪ ಸ್ವಲ್ಪವಾಗಿ, ಆಟಪಾಟಗಳಲ್ಲಿಯೂ, ಹಾಸ್ಯ ಪರಿಹಾಸಗಳಲ್ಲಿಯೂ, ಮಾತು ಕತೆಗಳಲ್ಲಿಯೂ ಉಂಟಾದ ಒಂದು ಬಗೆಯ ಪ್ರಬಲವಾದ ಆತ್ಮೀಯತೆಯ ಮೂಲಕ ದಿನೇ ದಿನೇ ಅವಳ ಹೃದಯವನ್ನು ಕೊಂಚ ಕೊಂಚವಾಗಿಯೇ ತುಂಬಿ ಪೂರ್ಣವಾಗಿದ್ದಿತು. ಈವರೆಗೂ ಕುಲಸಮುಳಿಗೆ ಅದರ ಬಂದು ವಿಸರ್ಗಗಳೊಂದೂ ಗೊತ್ತಾಗಿರಲಿಲ್ಲ. ಅವಳಿಗೆ ಅದರಿಂದ ಅಷ್ಟೇನೂ ಕೊರತೆಯಿಲ್ಲ. ಕುಲಸಮುಳ ಅಪಾರ್ಥಿವವಾದ, ಅಗಾಧವಾದ, ಬಹು ಸರಳವಾದ ಮನೋವೃತ್ತಿಯು, ದೃಢಸಂಕಲ್ಪದಿಂದ ಪ್ರೇಮದ ಮೋಹಿನೀಮೂರ್ತಿಯಂತೆ ಆಗ ಯೌವನ ವನಪ್ರಾಂತದಲ್ಲಿ ಆಶ್ರಯಹೊಂದಬೇಕೆಂದು ಅಪೇಕ್ಷೆಪಟ್ಟಿದ್ದಿತೋ—ಆ ಸಿರಾಜುದ್ದೀನನು ಈ ವಿಚಾರವನ್ನೆಲ್ಲಾ ತಿಳಿದಿದ್ದುದೂ ಅಲ್ಲದೆ ತನ್ನ ಹೃದಯದ ಎಲ್ಲ ಬಾಗಿಲುಗಳನ್ನೂ ತೆರೆದು, ಅವಳಿಗೋಸ್ಕರವಾಗಿ ತನ್ನ ಹೃದಯವನ್ನೇ ಸರ್ವದಾ ತೆಗೆದಿಟ್ಟಿದ್ದನು. ಇಷ್ಟೇ ಕುಲಸಮುಳಿಗೆ ಯಥೇಷ್ಟವಾಗಿ ತೋರಿತು.

ಕುಲಸಮುಳು ಭಯದಿಂದ—ಹಾಗಾದರೆ, ಆತನ ಬಿಡುಗಡೆಗೆ ಯಾವ ಉಪಾಯವೂ ಇಲ್ಲವೆ?—ಎಂದು ಅರಿಂದಮನನ್ನು ಕೇಳಿದಳು.

ಅರಿಂದಮ—ಈಗಿರುವ ರೀತಿಯಲ್ಲಿ ಯಾವ ಮಾರ್ಗವೂ ಕಂಡು ಬರುವುದಿಲ್ಲ. ಆತನನ್ನು ಬಿಡಿಸುವುದಕ್ಕೋಸ್ಕರವಾಗಿ ನಾನು ಕೂಡಲೇ ಪ್ರಯತ್ನ ಮಾಡುತ್ತೇನೆ. ಫೂಲಸಾಹೇಬನು ನಿಮ್ಮ ಬಲತಾಯಿಯೊಂದಿಗೆ ಮತ್ತಾವ ವಿಷಯದಲ್ಲಾದರೂ ಆಲೋಚನೆ ಮಾಡುವುದನ್ನು ಕೇಳಿಬಲ್ಲೆಯಾ? ಕಾಮದೇವಪುರದ ಠಾಣೆಗೆ ಒಬ್ಬ ಹುಡುಗಿಯ ಶವ

ವಿದ್ದ ಮರದ ಪೆಟಾರಿಯೊಂದು ಕಳುಹಿಸಿಕೊಟ್ಟ ವಿಚಾರವಾಗಿ ಅವರಿಬ್ಬರೂ ಯಾವಾಗಲಾದರೂ ಮಾತನಾಡಿದ್ದುಂಟೆ?

ಕುಲಸಮ್—ಮೂರು ನಾಲ್ಕು ದಿನಗಳಾಗಿರಬಹುದು. ಒಂದು ದಿನ ಫ್ರೂಲಸಾಹೇಬನು ನಮ್ಮ ಬಳಿತಾಯಿಗೆ ಇಂತಹುದೇ ಒಂದು ವಿಷಯವಾಗಿ ಏನೇನೋ ಹೇಳುತ್ತಿದ್ದನು; ನನಗೆ ಅದು ಅಷ್ಟು ಚೆನ್ನಾಗಿ ಗೊತ್ತಾಗಲಿಲ್ಲ. ಆ ಮಾತುಗಳಾಡುತ್ತಿರುವಾಗ ಅವರಿಬ್ಬರೂ ತುಂಬಾ ನಗುತ್ತಿದ್ದರು.

ಅರಿಂದಮ್—ಆ ಸಂದರ್ಭದಲ್ಲಿ ಅವನು ಯಾರ ಹೆಸರನ್ನಾಗಲೀ ಹೇಳಿದನೋ?

ಕುಲಸಮ್—ಮೂರು ನಾಲ್ಕು ಜನರ ಹೆಸರು ಹೇಳಿದರು. ಆ ಹೆಸರುಗಳನ್ನು ಅದಕ್ಕೆ ಮೊದಲು ನಾನು ಯಾರ ಬಾಯಲ್ಲಿಯೂ ಕೇಳಿರಲಿಲ್ಲ.

ಅರಿಂದಮ್—ಹೆಸರುಗಳು ಜ್ಞಾಪಕವಿದೆಯೆ?

ಕುಲಸಮ್—ಇದೆ, ಗೋರಾಚಂದ, ಗೋಪಾಲಚಂದ್ರ.

ಇನ್ನು ಯಾರು? ಮೂರು ನಾಲ್ಕು ಮಂದಿಯ ಹೆಸರು ಕೇಳಿದೆ ನೆಂದು ಹೇಳಿದೆಯಲ್ಲ?

ಇನ್ನೆರಡು ಹೆಂಗಸರ ಹೆಸರುಗಳು; ಬಂಗಾಳೀ ಹೆಂಗಸರ ಹೆಸರು ನನಗೆ ಚೆನ್ನಾಗಿ ಜ್ಞಾಪಕವಿರುವುದಿಲ್ಲ. ಅದೂ ಅಲ್ಲದೆ ಆ ಎರಡು ಹೆಸರುಗಳೂ ಏನೋ ಹೊಸ ಮಾದರಿಯವಾಗಿದ್ದುವು.

ರೇವತಿಯೆ? ರೋಹಿಣಿಯೆ?

ಹಾ, ತಾವು ಸರಿಯಾಗಿ ಹೇಳಿದಿರಿ! ಈ ಎರಡು ಹೆಸರುಗಳನ್ನೂ ಆಗ ಅವರಿಂದ ಕೇಳಿದ್ದೆನು, ಈಗ ಚೆನ್ನಾಗಿ ನೆನಪಾಯಿತು.

ಆಗ, ಅರಿಂದಮನನ್ನು ಬಹುವಾಗಿ ಭ್ರಮೆಗೊಳಿಸಿದ್ದ, ಸಂಪೂರ್ಣ ವಾಗಿಯೂ ರಹಸ್ಯಮಯವಾದ ತೊಡಕಿನ ಸಮಸ್ಯೆಯ ದುರ್ಭೇದ್ಯ ವಾದ ಪರದೆಯೊಂದು ಹಠಾತ್ತಾಗಿ ಅವನ ದೃಕ್ಪಥದಿಂದ ಸರಿದು

ಹೋದಹಾಗಾಯಿತು. ಅರಿಂದಮನು ಸ್ತಂಭಿತನಾದನು. ಆತನು ಕುಲಸಮಯನ್ನು ಕುರಿತು,–ಈಗ ನೀನು ಮನೆಗೆ ಹೋಗಬೇಡ, ಇಲ್ಲಿಯೇ ಇರು; ಸಾಯಂಕಾಲಕ್ಕೆ ಮುಂಚಿತವಾಗಿಯೇ ನಾನು ನಿನ್ನನ್ನು ನಿಮ್ಮ ಮನೆಯಲ್ಲಿ ಬಿಟ್ಟು ಬರುತ್ತೇನೆ—ಎಂದು ಹೇಳಿದನು.

ಏತಕ್ಕೆ?

ಅನಂತರ ಅದನ್ನು ತಿಳಿಯುವೆ.

ಯೋಗೇಂದ್ರನಾಥನು ಕುಲಸಮಯನ್ನು ಅಂತಃಪುರದಲ್ಲಿ ಹೆಂಗಸರ ಬಳಿ ಬಿಟ್ಟುಬಂದನು; ಅನಂತರ ಅರಿಂದಮನನ್ನೂ ಕರೆದುಕೊಂಡು ಠಾಣೆಯ ಕಡೆ ಹೊರಟನು.

---

## ಹದಿನಾಲ್ಕನೆಯ ಪರಿಚ್ಛೇದ

### ರಹಸ್ಯಾಲೋಚನೆ

ಠಾಣೆಯೊಳಗೆ ಒಂದು ನಿರ್ಜನವಾದ ಕೊಠಡಿಯಲ್ಲಿ ಕುಳಿತುಕೊಂಡು ಯೋಗೇಂದ್ರನಾಥನೂ ಅರಿಂದಮನೂ ರಹಸ್ಯಾಲೋಚನೆ ಮಾಡತೊಡಗಿದರು. ಸುಮಾರು ಅರ್ಧ ಗಂಟೆಯ ನಂತರ ಇಬ್ಬರೂ ಹೊರಕ್ಕೆ ಬಂದರು. ಯೋಗೇಂದ್ರನಾಥನು ಒಬ್ಬ ದರೋಗನನ್ನು ಕರೆದು, ಆ ಬಟ್ಟೆಬರೆಗಳನ್ನು ತೆಗೆದುಹಾಕಿ ವೇಷಾಂತರವನ್ನು ಅವಲಂಬಿಸುವಂತೆ ಅಪ್ಪಣೆ ಮಾಡಿದನು. ಯಾರೇ ಆಗಲಿ ನೋಡಿದ ಕೂಡಲೇ ಗುರ್ತಿಸಲಾಗದ ಹಾಗೆ ತಾನೂ ಕೂಡ ವೇಷವನ್ನು ಮರೆಸಿಕೊಂಡನು. ಅರಿಂದಮನು ಅದೇ ವೇಷದಲ್ಲಿಯೇ ಇದ್ದನು. ಒಡನೆಯೇ ಆ ಮೂವ್ವರೂ ಒಂದು ಗಾಡಿಯಲ್ಲಿ ಕುಳಿತು ಬಹು ಜಾಗ್ರತೆಯಾಗಿ ಫೂಲಸಾಹೇಬನ ಮನೆಯ ಕಡೆ ಹೊರಟರು. ಹೋಗುವಾಗ ಯೋಗೇಂದ್ರನಾಥನು ಪೋಲೀಸಿನವನನ್ನು ಕರೆದು, ಇನ್ನು ಸ್ವಲ್ಪ ಹೊತ್ತಿಗೆ ಫೂಲಸಾಹೇಬನ ಮನೆಯ ಹತ್ತಿರ, ಒಂದು ರಹಸ್ಯ ಸ್ಥಳದಲ್ಲಿ, ಹತ್ತು ಮಂದಿ ಪೋಲೀಸಿನವರು ಬಂದಿರತಕ್ಕುದೆಂದು ಹೇಳಿ ಹೋದನು.

ಯಥಾ ಸಮಯದಲ್ಲಿ ಎಲ್ಲರೂ ಬಂದು ಫೂಲಸಾಹೇಬನ ಮನೆ ಸೇರಿದರು. ಫೂಲಸಾಹೇಬನ ಮನೆಯೇನೂ ಸಾಮಾನ್ಯವಾದ್ದಲ್ಲ; ಎರಡಂತಸ್ತಿನ ಉಪ್ಪರಿಗೆ. ಅಂದವಾಗಿಯೂ ರಮ್ಯವಾಗಿಯೂ ಸುಸಜ್ಜಿತವಾಗಿಯೂ ಇದೆ. ಮುಂಭಾಗದಲ್ಲಿ ಒಂದು ಸಣ್ಣ ಹೂದೋಟ. ತೋಟದಲ್ಲಿ ಜಾತಿಗೆ ಒಂದೆರಡರಂತೆ ಅನೇಕ ವಿಧವಾದ ಪುಷ್ಪವೃಕ್ಷಗಳು. ಆ ತೋಟದ ಹಾದಿಯಲ್ಲಿ ಒಬ್ಬ ಮಾಲಿ ಕುಳಿತಿದ್ದನು. ಅವನನ್ನು ಕುರಿತು ಯೋಗೇಂದ್ರನಾಥನು—ಡಾಕ್ಟರ್ ಬಾಬುಗಳು ಇದ್ದಾರೇನು? ಎಂದು ಕೇಳಿದನು.

ಉಪ್ಪರಿಗೆಯಲ್ಲಿದ್ದಾರೆ. ಸ್ವಲ್ಪ ಹೊತ್ತಿಗೆಲ್ಲಾ ಕೆಳಕ್ಕೆ ಬರುತ್ತಾರೆ—ಎಂದು ಮಾಲಿ ಹೇಳಿದನು.

ಹೊರಭಾಗದಲ್ಲಿ ಸುಸಜ್ಜಿತವಾಗಿದ್ದ ಒಂದು ಬೈಠಕಖಾನೆಯಲ್ಲಿ ಮೂರು ಮಂದಿಯೂ ಹೋಗಿ ಕುಳಿತುಕೊಂಡರು. ಆಗ ಅಲ್ಲಿ ಮತ್ತೆ ಯಾರೂ ಇರಲಿಲ್ಲ. ಅರಿಂದಮನು ಸುಮ್ಮನೆ ಒಂದೇ ಕಡೆ ಬಹಳ ಹೊತ್ತು ಕುಳಿತಿರತಕ್ಕವನಲ್ಲ. ಅವನು ಸದ್ದುಮಾಡದೆ ಉಪ್ಪರಿಗೆಗೆ ಹೋದನು. ಅಲ್ಲಿ ಹೋಗಿ ನೋಡಿದನು. ಬಾಗಿಲು ಮುಚ್ಚಿದ್ದ ಒಂದು ಕೊಠಡಿಯಲ್ಲಿ ಎರಡು ವ್ಯಕ್ತಿಗಳು ಮಾತನಾಡುತ್ತಿದ್ದುದು ಕೇಳಿಸಿತು. ಆ ಇಬ್ಬರನ್ನೂ ಅವನು ಆಗ ನೋಡುವುದಕ್ಕಾಗದಿದ್ದರೂ ಕಂಠಸ್ವರದಿಂದ ಅವರಿಬ್ಬರನ್ನೂ ಚೆನ್ನಾಗಿ ಗುರ್ತಿಸಿದನು; ಒಬ್ಬನು ಫೂಲಸಾಹೇಬ, ಇನ್ನೊಬ್ಬನು ಅಂದಿನ ಗೋರಾಚಾಂದ. ಅವರು ಮಾತನಾಡುತ್ತಿದ್ದ ಕೊಠಡಿಯ ಬಾಗಿಲನ್ನು ಬೆರಳಿನಿಂದ ಮೆಲ್ಲಗೆ ತಳ್ಳಿ ನೋಡಿದನು; ಅದನ್ನು ಮುಚ್ಚಿ ಒಳಗೆ ಅಗಳಿ ಹಾಕಿದ್ದಿತು. ಅರಿಂದಮನು ಬಾಗಿಲ ಮೇಲೆ ಕಿವಿಯಿಟ್ಟು ಅವರ ಮಾತುಕತೆಗಳನ್ನು ಆಲೈಸಿ ಕೇಳುತ್ತಿದ್ದನು.

ಫೂಲಸಾಹೇಬ—ಏನೆಂದು ಭಾವಿಸಿದೆ, ಅತ್ತ ಕಡೆಯ ಕೆಲಸಗಳೆಲ್ಲವನ್ನೂ ಮುಗಿಯಿಸಿಕೊಂಡು ಬರಲಾಗಲಿಲ್ಲವೆ?

ಗೋರಾಚಾಂದ—ಈಗ ಅದನ್ನು ಪೂರ್ತಿಮಾಡುವ ಕೆಲಸವು ಸಾಮಾನ್ಯವೇನೂ ಅಲ್ಲ.

ಫೂಲ.—ನೀನು ಸಹಾಯಕನಾಗಿದ್ದು, ಜುಮುಲೆ ಸಹಕರಿಸುತ್ತಿದ್ದಾಳೆ; ಹೀಗಿದ್ದೂ ಆ ಕೆಲಸವನ್ನು ಪೂರ್ತಿಮಾಡುವುದು ಕಷ್ಟವೆಂದು ಹೇಳಿದರೆ ಇನ್ನು ಸುಲಭವಾಗುವುದು ಯಾವುದು?

ಗೋರಾ.—ಜುಮುಲೆಯು ಸಹಾಯವಿಲ್ಲದೆ ಇದ್ದಿದ್ದರೆ ನೀವು ಇಷ್ಟು ಬೇಗ ಇಷ್ಟೊಂದು ಕೆಲಸಗಳನ್ನು ಮಾಡುವುದು ಎಂದಿಗೂ ಸಾಧ್ಯವಲ್ಲವೆಂದು ತೋರುತ್ತದೆ.

ಫೂಲ.—ಜುಮುಲೆಯೇ ನನ್ನ ಬಲಗೈ. ಆ ಕಾರಣದಿಂದಲೇ ತಂತ್ರಮಾಡಿ ನಾನು ಮೊದಲೇ ತಮೀಜುದ್ದೀನನ ಹೆಂಡತಿಯನ್ನು ಕೊಂದು ಅವಳ ಸ್ಥಾನದಲ್ಲಿ ಜುಮುಲೆಯನ್ನು ಮತಿಜೀಜಯನ್ನಾಗಿ ಮಾಡಿ ಕುಳ್ಳಿರಿಸಿದ್ದೇನೆ. ಅನಂತರ ಜುಮುಲೆಯು ಭರವಸೆಯು ಮೇಲೆಯೇ ತಮೀಜುದ್ದೀನನ ಗೃಹಕೃತ್ಯದಲ್ಲಿ ನನಗೆ ಸರ್ವಾಧಿಕಾರವುಂಟಾದದ್ದು. ಇಷ್ಟಾದರೂ ಜುಮುಲೆಯನ್ನು ನಂಬಿಕೊಂಡಿರುವುದಕ್ಕೆ ನನ್ನ ಅಂತರಂಗವು ಇಷ್ಟಪಡುವುದಿಲ್ಲ. ಅವಳು ನನಗೆ ಒಬ್ಬ ಉಪಪತ್ನಿಯೇ ವಿನಾ ಮತ್ತೇನೂ ಇಲ್ಲ. ಅದೂ ಅಲ್ಲದೆ ಅವಳ ತೀಕ್ಷ್ಣಬುದ್ಧಿಯೂ, ಅವಳ ಸಾಹಸವೂ, ಅವಳ ಪರಾಕ್ರಮವೂ ಅನೇಕವೇಳೆ ನನ್ನನ್ನು ಮೀರಿಸಿವೆ; ಆದ್ದರಿಂದ ಅವಳು ನನಗೆಂದಾದರೂ ಮೋಸಮಾಡಿಯಾಳೆಂದು ಭಯವಾಗುತ್ತದೆ.

ಗೋರಾ.—ಒಬ್ಬ ಹೆಂಗಸು ನಿಮ್ಮನ್ನು ವಂಚಿಸುವುದೇ? ಅದಕ್ಕಾಗಿ ತಾವು ಇಷ್ಟು ಭಯಪಡುವುದೇ? ಕೇಳಿ ನಗೆ ಬರುತ್ತದೆ.

ಫೂಲ.—ಜುಮುಲೆಯು ಸಾಮಾನ್ಯ ಹೆಂಗಸೆಂದು ತಿಳಿಯಬೇಡ. ಜುಮುಲೆಗೆ ಇರುವ ಶಕ್ತಿ, ಜುಮುಲೆಗೆ ಇರುವ ಮನೋದಾರ್ಢ್ಯ ಇವು ಅನೇಕ ಮಂದಿ ಗಂಡಸರಿಗೂ ಇಲ್ಲ. ಅವಳು ಮಾಡಲಾರದ ಕೆಲಸ ಒಂದೂ ಇಲ್ಲ. ಜುಮುಲೆಯು ಸಹಾಯವಿರದಿದ್ದರೆ ತಮೀಜುದ್ದೀನನ

ಮನೆಯಲ್ಲಿ ಇಷ್ಟು ಸುಲಭವಾಗಿ ಮೂರು ಮಂದಿಯನ್ನು ಮೃತ್ಯುವಿಗೆ
ತುತ್ತಾಗುವಂತೆ ಮಾಡುವ ಭರವಸೆಯೇ ನನಗೆ ಇರುತ್ತಿರಲಿಲ್ಲ. ಆ
ಮೂರು ಕೊಲೆಗಳೂ ಎಷ್ಟು ನಿರಾತಂಕವಾಗಿ ನಡೆದುವೋ ನೀನೇ
ಆಲೋಚಿಸಿ ನೋಡು; ಯಾರೊಬ್ಬರಿಗೂ ತಿಳಿಯಲಿಲ್ಲ—ಇತರರಿಗೆ
ಸಂದೇಹಿಸುವುದಕ್ಕೂ ಆಸ್ಪದವಿಲ್ಲ. ಹೀಗೆ ಯಾರಿಗೂ ತಿಳಿಯದ ಹಾಗೆ
ಕೊಲೆ ಮಾಡುವುದಕ್ಕಾಗಿ ನೂರೆಂಟು ಬಗೆಯ ವಿಷಗಳು ನನ್ನಲ್ಲಿವೆ;
ತವಿರಾಜುದ್ದೀನನ ಮನೆಯಲ್ಲಿ ಯಾವ ವಿಷವನ್ನು ಉಪಯೋಗಿಸಿದೆನೋ
ಅದನ್ನು ದಿನಕ್ಕೆ ಒಂದು ತೊಟ್ಟಿನಂತೆ ಕುಡಿಯುವ ನೀರಿಗೆ ಬೆರೆಯಿಸಿ
ಕೊಟ್ಟರೆ ಸಾಕು—ಮನುಷ್ಯನು ಆರು ತಿಂಗಳೊಳಗಾಗಿ ಸಾಯುತ್ತಾನೆ.
ಅವನು ಬಹು ಬಲಶಾಲಿಯಾಗಿ ಇದ್ದರೆ ಎಂಟು ತಿಂಗಳವರೆಗೂ
ತಡೆಯುವುದು. ಹೆಂಗಸರಿಗೆ ನಾಲ್ಕು ತಿಂಗಳಿಗಿಂತ ಹೆಚ್ಚಾಗಿ ಕೊಡ
ಬೇಕಾಗುವುದಿಲ್ಲ. ಆದರೆ ಕೆಲಸವು ಬೇಗ ಕೈಗೂಡಬೇಕಾದರೆ ದಿನ
ವೊಂದಕ್ಕೆ ಎರಡು ತೊಟ್ಟು ಅಥವಾ ಮೂರು ತೊಟ್ಟು ಬೇಕಾದರೂ
ಹಾಕಿ ಕೊಡಬಹುದು. ಅದಕ್ಕಿಂತ ಹೆಚ್ಚಾಗಿ ಪ್ರಯೋಗಮಾಡುವುದು
ಸಾಧ್ಯವಿಲ್ಲ. ಪ್ರಯೋಗಿಸಿದರೆ ನೀರು ಸ್ವಲ್ಪ ಕಹಿಯಾಗುವುದು. ಹೊಗೆ
ಬತ್ತಿಯಲ್ಲಿ ಬೆರೆಯಿಸಿ ಕೊಟ್ಟು ಅರಿಂದಮನನ್ನು ಕೊಂದೆನಲ್ಲ!—ಆ ವಿಷ
ದಿಂದ ಹತ್ತು ಗಂಟೆಗಳೊಳಗಾಗಿ, ಅವನು ಎಷ್ಟೇ ಬಲವಂತನಾಗಿದ್ದರೂ
ಸರಿ,—ಖಂಡಿತವಾಗಿಯೂ ಸಾಯುವನು.

ಗೋರಾಚಾಂದ—ಅರಿಂದಮನನ್ನು ಕೊಂದುಹಾಕಿದ್ದರಿಂದ ಇನ್ನು
ನಮ್ಮ ಕೆಲಸಗಳಿಗೆಲ್ಲಕ್ಕೂ ನಿರಾತಂಕವಾದ ಹಾಗೆಯೇ. ಈಗ ಇನ್ನು
ಯಾರಿಗೆ ಭಯಪಡಬೇಕು?

ಫೂಲ.—ಅರಿಂದಮನು ಸಾಮಾನ್ಯನಲ್ಲ. ಇಂದಲ್ಲದಿದ್ದರೂ, ಇನ್ನು
ನಾಲ್ಕು ದಿನಗಳಲ್ಲಿ ಸಾಧ್ಯವಾಗದೆ ಇದ್ದಿದ್ದರೂ, ಒಂದಾನೊಂದು
ಕಾಲದಲ್ಲಿ ಅವನು ನನ್ನನ್ನು ಹಿಡಿದುಹಾಕಬಲ್ಲವನಾಗಿದ್ದನು. ಆ ಮನುಷ್ಯ
ನಿಗೆ ಬುದ್ಧಿ ಬಲು ಚುರುಕು; ಹೀಗೆಂದು ಹೇಳಿ ಅವನಿಗೆ ನಾನು ಅರಗಳಿ
ಗೆಯೂ ಭಯಪಟ್ಟವನಲ್ಲ. ಇಂತಹ ಹತ್ತು ಮಂದಿ ಅರಿಂದಮರು

ಸೇರಿ ಬಂದರೂ ಫೂಲಸಾಹೇಬನು ಅದನ್ನು ಕಂಡು ಭಯಪಡುತ್ತಿರಲಿಲ್ಲ. ಅದೃಷ್ಟ ಬಲದಿಂದ, ಭಯವೆಂದರೇನು ಎಂಬುದನ್ನೇ ಫೂಲಸಾಹೇಬನು ಅರಿಯನು.

ಗೋರಾ.—ಅರಿಂದಮನು ಕೇವಲ ಬುದ್ಧಿವಂತನು ಮಾತ್ರವೇ ಅಲ್ಲ; ಬಹಳ ಬಲವಂತನೂ ಹೌದು! ಆ ದಿನ ಅವನನ್ನು ಕೊಲ್ಲಬೇಕೆಂದುಕೊಂಡು ಆ ವನಭೂಮಿಗೆ ಕರೆದುಕೊಂಡು ಹೋದಾಗ ಅವನ ಅನುಭವವು ಚೆನ್ನಾಗಿ ಬಂದಿತು. ಎಂಥವನೇ ಆಗಲಿ ನನ್ನನ್ನು ಅಷ್ಟು ಬೇಗನೆ "ಚಿತ್" * ಮಾಡುವನೆಂದು ನಾನು ತಿಳಿದಿರಲಿಲ್ಲ. ಅದೆಲ್ಲಿಯಾದರೂ ಹೋಗಲಿ, ಆ ಸಮಯದಲ್ಲಿ ಯದುನಾಥಗೋಸ್ವಾಮಿಯ ಕಾಗದವನ್ನು ಅರಿಂದಮನೇ ನನ್ನಿಂದ ತೆಗೆದುಕೊಂಡಿರಬೇಕೆಂದು ತೋರುತ್ತದೆ; ಆ ಕಾಗದದಲ್ಲಿ ಅನೇಕ ವಿಚಾರಗಳು ಸ್ಪಷ್ಟವಾಗಿ ಬರೆದಿತ್ತು. ಅದರಿಂದಲೇ ಅವನು ರೇವತಿಯ ಮಾತಾಮಹನಿ (ತಾಯಿಯ ತಂದೆ) ಗೆ ವರ್ತಮಾನಕೊಟ್ಟು ರೇವತಿಯನ್ನು ಯದುನಾಥನ ಮನೆಯಿಂದ ಹೊರಡಿಸಿಕೊಂಡು ಹೋದನು.

ಫೂಲಸಾಹೇಬ—ನೀನು ತಪ್ಪು ತಿಳಿದಿರುವೆ. ರೇವತಿ ಅಜ್ಜನ ಮನೆಗೆ ಹೋದಳೆಂಬ ಮಾತು ಕೇವಲ ನಟನೆ. ರೇವತಿಯನ್ನು ಹುಡುಕುವುದಕ್ಕಾಗದಿರುವುದಾದರೆ ನಿಜಸ್ಥಿತಿ ಗೊತ್ತಾಗುವಹಾಗಿಲ್ಲ. ಅರಿಂದಮನನ್ನೇ ಈ ಪ್ರಪಂಚದಿಂದ ಹೊರಡಿಸಿದ್ದಾದಮೇಲೆ ಈಗ ಇನ್ನೇತರ ಭಯ? ಇನ್ನು ಎಲ್ಲ ಕೆಲಸಗಳನ್ನೂ ನಿರಾತಂಕವಾಗಿ ಬೇಗ ಬೇಗ ಮುಗಿಯಿಸಬಹುದು.

ಗೋರಾಚಾಂದ—ರೇವತಿಯನ್ನು ಹುಡುಕಿ ಪತ್ತೆ ಮಾಡದಿದ್ದರೆ, ಗೋಪಾಲಚಂದ್ರನಿಂದ ಒಂದು ಕಾಸೂ ಸಿಗುವಹಾಗಿಲ್ಲ.

ಫೂಲಸಾಹೇಬ—ಅದು ಗೊತ್ತು, ಆ ವಿಷಯದಲ್ಲಿ ನಾನು ಪ್ರಯತ್ನವನ್ನೇ ಮಾಡುತ್ತಿಲ್ಲವೆಂದು ತಿಳಿದಿರುವೆಯಾ! ನಾನು ಎಲ್ಲ ವಿಚಾರ

* "ಚಿತ್ ಎಂದರೆ" ಕುಸ್ತಿ ಅಥವಾ ಮಲ್ಲಯುದ್ಧದಲ್ಲಿ ಇದಿರಾಳಿಯ ಹಿಡಿತಕ್ಕೆ ಸಿಕ್ಕಿ ಬಿಡಿಸಿಕೊಳ್ಳಲಾರದೆ ಮೇಲು ಮುಖವಾಗಿ ಬೀಳುವುದು.

ಗಳನ್ನೂ ಶೋಧನಮಾಡುತ್ತಿದ್ದೇನೆ. ಇದುವರೆಗೆ ಅರಿಂದಮನು ಕೇಶವಚಂದ್ರನನ್ನು ಹುಡುಕಿಕೊಂಡು ಅಲೆಯುತ್ತಿದ್ದುದನ್ನೂ ಬಲ್ಲೆ; ಆದರೆ, ಆ ಕೇಶವಚಂದ್ರನು ಇತ್ತಕಡೆ ಫೂಲಸಾಹೇಬನ ಆಕಾರದಲ್ಲಿ ಅವನ ಇದಿರಾಗಿಯೇ ಸಂಚರಿಸುತ್ತಿದ್ದನೆಂಬುದು ಆ ಮಂಕು ನಾಂಬ್ರಾಣಿ ತಿಳಿಯಲಾರದೇ ಹೋದನು.

ಇದೆಲ್ಲವನ್ನೂ ಕೇಳಿ ಅರಿಂದಮನು ವಿಸ್ಮಿತನಾದದ್ದೇನೋ ಉಂಟು;—ಆದರೆ ಬಹು ಕೊಂಚ ಮಟ್ಟಿಗೆ. ಏತಕ್ಕೆಂದರೆ, ಹೀಗೆಯೇ ಇರಬೇಕೆಂದು, ಇದಕ್ಕೆ ಮೊದಲೇ, ಅರಿಂದಮನು ಊಹಿಸಿಯೇ ಇದ್ದನು. ಈ ಮಾತನ್ನು ಕೇಳಿದಮೇಲೆ ಅರಿಂದಮನು ಬಾಗಿಲಿಗೆ ಕಿವಿಗೊಟ್ಟು, ಗಟ್ಟಿಯಾಗಿ ಉಸಿರನ್ನೂ ಆಡಿಸದೆ, ಏಕಾಗ್ರಮನನಾಗಿ ಅವರ ಮಾತು ಕತೆಗಳನ್ನು ಕೇಳತೊಡಗಿದನು.

ಗೋರಾಚಾಂದ—ಈಗ ಕುಲಸಮಳು ನಿಮ್ಮನ್ನು ಮದುವೆ ಯಾಗಲು ಒಪ್ಪದೇಹೋದರೆ, ನೀವು ತುಂಬ ಇಕ್ಕಟ್ಟಿಗೆ ಸಿಕ್ಕಿದ ಹಾಗಾಗುತ್ತದೆ.

ಫೂಲಸಾಹೇಬ—ಒಪ್ಪದೇ ಹೋದರೆ, ಅವರ ತಂದೆ, ತಾಯಿ, ಅಣ್ಣ ಮುಂತಾದವರು ಎಲ್ಲಿಗೆ ಹೋದರೋ ಅಲ್ಲಿಗೆ ಕುಲಸಮೆಯನ್ನೂ ಕಳುಹಿಸುತ್ತೇನೆ.

ಗೋರಾ.—ಕುಲಸಮೆಯನ್ನು ಕೊಲ್ಲುವುದರಿಂದ ಒಂದು ತೊಂದರೆಗೆ ಸಿಕ್ಕಿಬೀಳುವ ಸಂಭವವುಂಟು.

ಫೂಲ.—ಏನೂ ಇಲ್ಲ. ಅಂತಹುದೇನೂ ಇಲ್ಲ. ಯಾರಿಗಾದರೂ ತಿಳಿಯುವ ಹಾಗೆ ಕೆಲಸ ಮಾಡುತ್ತೇನೇನು? ಹಾ—ಹಾ—ಹಾ! (ಎಂದು ನಗುತ್ತಾ) ಹಾಗಾದಮೇಲೆ ನೀನೂ ಕೂಡ ನನ್ನ ಸ್ವಭಾವವನ್ನು ಚೆನ್ನಾಗಿ ತಿಳಿದುಕೊಂಡಿಲ್ಲವೆಂದು ತೋರುತ್ತದೆ. ಹಗಲನ್ನು ರಾತ್ರಿಯನ್ನಾಗಿ ಮಾಡಬಲ್ಲೆ, ರಾತ್ರಿಯನ್ನೇ ಹಗಲು ಮಾಡಬಲ್ಲೆ; ಇಂತಹ ಸಾಮರ್ಥ್ಯವು ಫೂಲಸಾಹೇಬನಲ್ಲಿ ಬೇಕಾದಷ್ಟು ಉಂಟು.

ಗೋರಾ.—ನಾನು ಅದನ್ನು ಚೆನ್ನಾಗಿ ಬಲ್ಲೆ. ಸಿರಾಜುದ್ದೀನ ನನ್ನು ಎಷ್ಟು ದಿನ ಅಲ್ಲಿ ಇಟ್ಟಿರಬೇಕು?

ಫೂಲ.—ಎಷ್ಟು ದಿನ ಆವಶ್ಯಕವೋ ಅಷ್ಟು ದಿನ.

ಗೋರಾಚಾಂದ—ಕುಲಸಮೆಯನ್ನು ಮೊದಲು ಮದುವೆ ಯಾಗಿ, ಆನಂತರ ಅವನನ್ನು ಬಿಟ್ಟುಬಿಡುವಿರೇನು?

ಫೂಲ.—ಅದು ಇನ್ನೂ ನಿಶ್ಚಯವಿಲ್ಲ; ಒಂದುವೇಳೆ ಸಿರಾಜನೂ ಸಾಯಬಹುದು. ಅವನನ್ನು ಈವರೆಗೇ ಕೊಂದುಹಾಕದಿರುವುದಕ್ಕೆ ಒಂದು ಕಾರಣವಿದೆ. ಕೇವಲ ಕುಲಸಮಳಿಗಾಗಿ ನಾನು ಅವನನ್ನು ಅಲ್ಲಿ ನಿರ್ಬಂಧಿಸಿಟ್ಟಿಲ್ಲ. ಇದರಲ್ಲಿ ನನ್ನದು ಇನ್ನೂ ಒಂದು ಗೂಢವಾದ ಅಭಿಪ್ರಾಯವುಂಟು.

ಗೋರಾ.—ಆ ಅಭಿಪ್ರಾಯವೆಂಥಾದ್ದೊ?

ಫೂಲ.—ಕ್ರಮೇಣ ತಿಳಿಯುವೆ—ಈಗ ಬೇಡ.

ಹೀಗೆಂದು ಹೇಳಿ ಫೂಲಸಾಹೇಬನು ಮೇಲಕ್ಕೆದ್ದನು; ಎದ್ದವನೇ —ನೀನು ಕುಳಿತುಕೋ, ನಾನು ಕೆಳಗೆ ಹೋಗಿ ಬೇಗನೆ ಬರುತ್ತೇನೆ. ಎಂದನು.

---

## ಹದಿನೈದನೆಯ ಪರಿಚ್ಛೇದ

### ಫೂಲಸಾಹೇಬನು ಬಂದಿಯಾದನು

ಈಗ ಅರಿಂದಮನು ಅವಸರವಸರದಿಂದ ಕೆಳಗಿನ ಬೈಠಖಾನೆಗೆ ಬಂದನು. ಅಲ್ಲಿ ಛದ್ಮವೇಷಿಗಳಾದ ಯೋಗೇಂದ್ರನಾಥನೂ ದರೋಗನೂ ಕುಳಿತಿದ್ದರು. "ಏನಾಯಿತು?" ಎಂದು ಇಬ್ಬರೂ ಅರಿಂದಮನನ್ನು ಕೇಳಿದರು.

"ಡಾಕ್ಟರು ಬರುತ್ತಿದ್ದಾನೆ" ಎಂದು ಹೇಳಿ ಅರಿಂದಮನು ಅಲ್ಲಿಯೇ ಇದ್ದ ಒಂದು 'ಬೇಂಚಿನ' ಮೇಲೆ, ಕಾಲುನೀಡಿ ಮಲಗಿದನು.

ಹಾಗೆಯೇ, ಆ ಸಮಯದಲ್ಲಿ ಅವರು ಹೇಗೆ ನಡೆದುಕೊಳ್ಳಬೇಕೆಂಬು ದನ್ನೂ ಸೂಚಿಸಿದನು. ಅದಾದನಂತರ ಹೊರಗಡೆ ಹೆಜ್ಜೆಯ ಸದ್ದಾದು ದನ್ನು ಕೇಳಿ ಒಂದು ಕಡೆಗೆ ಮುಖವನ್ನು ತಿರುಗಿಸಿಕೊಂಡು ಕಣ್ಣು ಮುಚ್ಚಿದನು.

ಅಷ್ಟರಲ್ಲಿಯೇ ಡಾಕ್ಟರ್ ಫೂಲಸಾಹೇಬನು ಬೈಠಖಾನೆಯ ಬಾಗಿಲಿಗೆ ಬಂದನು.

ಛದ್ಮವೇಷಿಯಾದ ದರೋಗನು ಡಾಕ್ಟರನ್ನು ಕುರಿತು,—ನಾವು ಬಹು ದೂರದಿಂದ ಬಂದಿದ್ದೇವೆ; (ಅರಿಂದಮನನ್ನು ತೋರಿಸಿ) ಇವನಿಗೆ ಮೂರ್ಚ್ಛಾರೋಗವಿದೆ; ದಿನವೊಂದಕ್ಕೆ ಎರಡುಸಲ, ಮೂರುಸಲ ಮೂರ್ಚ್ಛೆ ಹೋಗುತ್ತಾನೆ; ಇದುವರೆಗೂ ಸರಿಯಾಗಿದ್ದವನು—ಇಲ್ಲಿಗೆ ಬಂದನಂತರ ರೋಗಪೀಡಿತನಾಗಿದ್ದಾನೆ; ಒಳ್ಳೆಯದೇ ಆಯಿತು, ರೋಗದ ಸ್ವಭಾವವನ್ನು ಕುರಿತು ನಾವು ವಿವರಿಸಿ ಹೇಳುವುದೇ ತಪ್ಪಿತು. ತಾವೇ ರೋಗಿಯನ್ನು ನೋಡಿ ಚಿಕಿತ್ಸೆಯ ಮಾಡಬಹುದಷ್ಟೆ? ಎಂದು ಹೇಳಿದನು.

ಫೂಲಸಾಹೇಬನು ಯಾವ ಮಾತನ್ನೂ ಆಡದೆ ಅರಿಂದಮನ ಕಡೆಗೆ ಮುಂದರಿದನು. ಸಮೀಪಗತನಾದನು, ನೋಡಿದನು—ಗುರ್ತಿಸಿದನು; ಆಲೋಚಿಸುವುದಕ್ಕೂ ಆಗದಷ್ಟುಗೆ ಚಮತ್ಕೃತನಾಗಿ ಎರಡು ಹೆಜ್ಜೆ ಹಿಂದಕ್ಕೆ ಸರಿದು ನಿಂತನು. ಮುಖ ಭಾವವೂ, ಕಣ್ಣಿನ ಭಾವವೂ ಮಾರ್ಪಟ್ಟುವು. ಅವನು ಕ್ಷಣಕಾಲದವರೆಗೆ ಸ್ತಂಭಿತನಾದನು. ಒಡನೆಯೇ ಅತ್ಯವಸರಗೊಂಡು ಕಿಸೆಯೊಳಗಿನಿಂದ ಹರಿತವಾಗಿರುವ ಉದ್ದವಾದ ಚೂರಿಯನ್ನು ತೆಗೆದು, ಅರಿಂದಮನ ಎದೆಯಲ್ಲಿ ನಟ್ಟ ಬೇಕೆಂದು ಮೇಲಕ್ಕೆ ಎತ್ತಿದನು. ಕಿಟಕಿಯಿಂದ ಬಂದ ಸೂರ್ಯ ರಶ್ಮಿಯು ಸೋಂಕಿ ಚೂರಿಯು ಥಳಥಳಿಸಿತು. ಹಿಂಭಾಗದಲ್ಲಿದ್ದ ಯೋಗೇಂದ್ರನಾಥನು ಎರಡು ಕೈಗಳಿಂದಲೂ ಫೂಲಸಾಹೇಬನ ಆ ಕೈಯನ್ನು ಬಲವಾಗಿ ಹಿಡಿದುಕೊಂಡುಬಿಟ್ಟನು. ಅರಿಂದಮನು ಎದ್ದು ಅವನ ಇನ್ನೊಂದು ಕೈಯನ್ನು ತನ್ನೆರಡು ಕೈಗಳಿಂದಲೂ ಅದುಮಿ

ಹಿಡಿದುಕೊಂಡನು. ದರೋಗನು ಸಾಧ್ಯವಾದಮಟ್ಟಿಗೂ ಅವರಿಬ್ಬರಿಗೆ ಸಹಾಯಮಾಡುತ್ತ ಬಂದನು; ಆ ಕೊಠಡಿಯೊಳಗೆ ಆ ನಾಲ್ಕು ಮಂದಿಯ ಹಿಗ್ಗಾಮುಗ್ಗಾ ತುಳಿದಾಟಕ್ಕೆ ಆರಂಭವಾಯಿತು. ಫೂಲಸಾಹೇಬನು ಸಾಮಾನ್ಯನಲ್ಲ,—ಪೂರಾ ಬಲವಂತ; ಅರಿಂದಮ, ಯೋಗೇಂದ್ರನಾಥ ಮತ್ತೂ ದರೋಗ ಈ ಮೂವರು ಸೇರಿದರೂ ಅವನನ್ನು ಬೇಗನೆ ಬಂದಿಯನ್ನಾಗಿ ಮಾಡಲಾಗಲಿಲ್ಲ. ಆ ಕೊಠಡಿಯಲ್ಲಿ ವಿಪರೀತವಾದ ಬಡಿದಾಟಕ್ಕೇ ಆರಂಭವಾಯಿತು. ಸುಮಾರು ಅರ್ಧ ಘಂಟೆಯ ನಂತರ, ಆ ಮೂರು ಮಂದಿ ಪೋಲೀಸಿನವರು, ಪ್ರಬಲ ಪ್ರಯತ್ನದಿಂದಲೂ, ಅತ್ಯುತ್ಸಾಹದಿಂದಲೂ, ಬಹು ಪರಿಶ್ರಮದಿಂದಲೂ ಫೂಲಸಾಹೇಬನ ಕೈಗೆ ಮೂರು ಜೊತೆ ಕೈಕೋಳಗಳನ್ನು ಭದ್ರವಾಗಿ ತೊಡಿಯಿಸಿದರು.

## ಫೂಲಸಾಹೇಬನು ಬಂದಿಯಾದನು

ಅನಂತರ ಗೋರಾಚಾಂದನನ್ನು ಹುಡುಕಿದರು. ಅವನು ದೊರೆಯಲಿಲ್ಲ. ಅವನು ಹೊರಗಡೆಯಾಗುತ್ತಿದ್ದ ಗದ್ದಲವನ್ನು ಕೇಳಿ, ಇದಕ್ಕೆ ಮೊದಲೇ, ಹಿಂಭಾಗದ ಒಂದು ಕಿಟಿಕಿಯನ್ನು ಮುರಿದು, ತನ್ನ ಪಲಾಯನದ ಪಥವನ್ನು ಪರಿಷ್ಕಾರಮಾಡಿಕೊಂಡು ಹೋಗಿದ್ದನು.

ಅರಿಂದಮನು ಮುಗುಳು ನಗೆಯಿಂದ "ವಿನಯ್ದಾ ಡಾಕ್ಟರ ಬಾಬೂ, ಅರಿಂದಮನು ಸತ್ತಿಲ್ಲವೆಂಬುದು ಈಗ ತಿಳಿಯಿತೆ?—ಮೊದಲಿನ ಹಾಗೆಯೇ ಬದುಕಿದ್ದಾನೆಂಬುದು ಗೊತ್ತಾಯಿತೆ?" ಎಂದು ಪರಿಹಾಸ ಮಾಡಿ ಕೇಳಿದನು.

ಅರಿಂದಮನ ಮಾತನ್ನು ಕೇಳಿ ಫೂಲಸಾಹೇಬನ ಮುಖದಲ್ಲಿ ಬಹುದಿನದಿಂದ ರೂಢಿಗೆ ಬಂದ, ಕುಟಿಲ ಭಾವದಿಂದ ಕೂಡಿದ, ಅಪೂರ್ವ ರಹಸ್ಯಮಯವಾದ, ಹಾಗೆಯೇ ಅಮಂಗಳ ಸೂಚಕವಾದ ಮಂದಹಾಸವು ಕಾಣಿಸಿತು. ಅವನು ಆ ನಗೆಯೊಡನೆ ದರ್ಪಸಹಿತನಾಗಿ,—ಫೂಲಸಾಹೇಬನು ಬದುಕಿರುವವರೆಗೆ ಅರಿಂದಮನು

ಸಾಯದಿದ್ದರೂ ಸಾಯುವುದಕ್ಕೆ ಏಳಂಬವಾಗದು.—ಆವರೆಗೆ, ತಾನು ನಿರಾಪದನೆಂದು ಅರಿಂದಮನು ಭಾವಿಸುವುದಾದರೆ ಅದು ಕೇವಲ ಭ್ರಮೆ—ಎಂದು ಮೆಲ್ಲಗೆ ಹೇಳಿದನು. ಅನಂತರ ತಲೆಯನ್ನೆತ್ತಿಕೊಂಡು, —ಕೇಳಯ್ಯಾ ಅರಿಂದಮಾ! ಎಂದಾದರೂ ಸರಿ, ಎಂತಹ ಕೌಶಲ ದಿಂದಾದರೂ ಸರಿ, ನಿಮ್ಮಗಳ ಕೈಯಿಂದ ತಪ್ಪಿಸಿಕೊಂಡುಹೋದೆ ನಾದರೆ, ಇದೇ ಫೂಲಸಾಹೇಬನು ಮತ್ತ್ರಷ್ಟು ಕಠೋರತರಭಾವದಿಂದ, ಇನ್ನೂ ಆಶ್ಚರ್ಯಕರವಾದ ಕೌಶಲದೊಡನೆ ನಿನ್ನನ್ನು ಮೃತ್ಯು ಮುಖಕ್ಕೆ ತುತ್ತು ಮಾಡುವನೆಂಬುದು ನಿನಗೆ ಅನುಭವದಿಂದ ಗೊತ್ತಾ ಗಲಿ—ಎಂದು ಹೇಳಿ ಕಬ್ಬಿಣದ ಕೈಕೋಳಗಳಿಂದ ಬಂಧಿಸಿದ ಕೈ ಗಳೆರಡನ್ನೂ ಕೋಪದಿಂದ ಮೇಲಕ್ಕೆತ್ತಿದನು. ಕೈಕೋಳಗಳಿಗೆ ಪರಸ್ಪರ ಪೆಟ್ಟುತಗಲಿ ಒಡನೊಡನೆ ಝುಣ್ ಝುಣ್ ಶಬ್ದವಾಯಿತು.

ಎಲ್ಲರೂ ಸೇರಿ ಫೂಲಸಾಹೇಬನನ್ನು ಠಾಣೆಯ ಕಡೆಗೆ ಕರೆದು ಕೊಂಡು ಹೊರಟರು. ಈ ಮೊದಲೇ ಯೋಗೇಂದ್ರನಾಥನು ಬರಹೇಳಿದ್ದ ಹತ್ತು ಮಂದಿ ಪೋಲೀಸಿನವರು ಇವರಿಗೆ ಇದಿರಾಗಿ ಬಂದರು.

ಅರಿಂದಮನು ಒಬ್ಬ ಪೋಲೀಸಿನವನನ್ನೂ ಆ ದರೋಗನನ್ನೂ ಜತೆಯಲ್ಲಿ ಕರೆದುಕೊಂಡು ಕುಲಸಮುಳ ಮನೆಯ ಕಡೆ ಹೊರಟನು. ಮಿಕ್ಕವರೆಲ್ಲರೂ ಫೂಲಸಾಹೇಬನನ್ನು ಕರೆದುಕೊಂಡು ಠಾಣೆಗೆ ನಡೆದರು.

---

## ಹದಿನಾರನೆಯ ಪರಿಚ್ಛೇದ

### ಜುಮಲೆಯು ಬಂದಿಯಾದಳು

ಫೂಲಸಾಹೇಬನು ಬಂದಿಯಾದನು, ಅವನು ಕೊಲೆಪಾತಕಿ, ಅವನು ದಸ್ಯು, ಅವನು ಮೋಸಗಾರ ಮತ್ತೂ ಅವನು ಭಯಂಕರ ಪಿಶಾಚ; ಅವನನ್ನು ಖಂಡಿತವಾಗಿಯೂ ಗಲ್ಲಿಗೆ ಹಾಕಿಯೇ ಹಾಕುವರು—ಎಂಬ ಈ ಸುದ್ದಿಯು ಸ್ವಲ್ಪ ಕಾಲದೊಳಗಾಗಿ ನಾಲ್ಕು

ಕಡೆಯೂ ಹಬ್ಬಿ ಹರಡಿತು. ಜುಮುಲಿ ಉರಫ್ ಮತಿಜೀಬಿಯು ಮನೆ ಯಲ್ಲಿಯೇ ಕುಳಿತು ಈ ಸುದ್ದಿಯನ್ನು ಕೇಳಿದಳು. ಮೊದಲು ನಂಬ ಲಿಲ್ಲ; ಕೇಳಿ ನಕ್ಕುಬಿಟ್ಟಳೇ ಹೊರತು ಆ ಮಾತನ್ನು ಮನಸ್ಸಿಗೆ ತೆಗೆದು ಕೊಳ್ಳಲೇ ಇಲ್ಲ. ಅನಂತರ ಅನೇಕರ ಬಾಯಲ್ಲಿ ಇದೊಂದೇ ವರ್ತಮಾನ ವನ್ನು ಕೇಳಿದಮೇಲೆ ನಂಬಲೇಬೇಕಾಗಿ ಬಂದಿತು. ಆಗ ಅವಳು ತನ್ನ ಶಯನ ಮಂದಿರಕ್ಕೆ ಹೋಗಿ, ಬಾಗಿಲನ್ನು ಮುಚ್ಚಿ, ಒಳಗಡೆ ಅಗಳಿ ಹಾಕಿಕೊಂಡು, ಚರುಗಾಳಿಗೆ ಸಿಕ್ಕಿದ ಮಾಧವೀ ಲತೆಯಂತೆ ನಿಸ್ತೇಜ ವಾದ ತನ್ನ ಶರೀರವನ್ನು ಪ್ರಶಸ್ತವಾದ ಹಾಸುಗೆಯಮೇಲೆ ಹರಹಿದಳು. ಬಗೆ ಬಗೆಯಾದ ಕೆಟ್ಟ ಭಾವನೆಗಳಿಂದ ಅವಳ ಹೃದಯವು ಉಪದ್ರುತ ಗೊಂಡುದೂ ಅಲ್ಲದೆ ಅತ್ಯಾಚಾರಕ್ಕೂ ಈಡಾಯಿತು.

ಈ ವೇಳೆಗೆ ಸರಿಯಾಗಿ, ಆ ಮುಚ್ಚಿದ್ದ ಬಾಗಿಲಮೇಲೆ ಹೊರಗಿ ನಿಂದ ಯಾರೋ ಕೈತಟ್ಟಿ, "ಗುಂ ಗುಂ" ಶಬ್ದವಾಗತೊಡಗಿತು. ಜುಮುಲಿಯು ಗಾಬರಿಯಿಂದ ಎದ್ದು ಕುಳಿತಳು. (ನಾವು ಜುಮುಲಿ ಯನ್ನು ಇನ್ನು ಮುಂದೆ ಮತಿಜೀಬಿ ಎಂದು ಹೇಳದೆ ಇಲ್ಲಿಂದಾಚೆಗೆ ಜುಮುಲಿ ಎಂದೇ ಹೇಳುವೆವು.) ಜುಮುಲಿಯು ದೃಢ ಸ್ವರದಿಂದ "ಯಾರದು?" ಎಂದು ಕೇಳಿದಳು.

ಹೊರಗಡೆಯಿಂದ, "ನಾನು, ಅಮಿನಾ" ಎಂದು ಹೆಂಗಸಿನ ಕಂಠದಿಂದ ಉತ್ತರ ಬಂದಿತು.

ಅಮಿನಾ ಎಂಬುವಳು ತಮಿಜುದ್ದೀನನ ಸಂಸಾರಕ್ಕೆ ಸೇರಿದ ಯುವತಿಯಾದ ದಾಸಿ. ಆದರೆ ಅವಳು ದಾಸಿಯಹಾಗೆ ಇರುತ್ತಿರಲಿಲ್ಲ. ಅವಳು ತನ್ನ ಬುದ್ಧಿ-ಕುಶಲತೆಯಿಂದ ತನ್ನ ಯಜಮಾನನ ಮಗಳಿಗೆ ಸಂಗಾತಿಯಾಗಿದ್ದಳು.

ಜುಮುಲಿ—ಯಾತಕ್ಕೆ? ಏನು ಬೇಕೆ?

ಅಮಿನಾ—ಬಾಗಿಲು ತೆರೆಯಿರಿ, ಹೇಳುತ್ತೇನೆ. ಅನೇಕ ವಿಷಯ ಗಳಿವೆ.

ಜುಮಲೆ ಎದ್ದು ಬಾಗಿಲನ್ನು ತೆರೆದಳು ; ನೋಡಿದಳು. ಹಜಾರವನ್ನು ದಾಟಿ, ಬಾಗಿಲ ಬಳಿಯಲ್ಲಿಯೇ ಅರಿಂದಮ, ಒಬ್ಬ ದರೋಗ, ಒಬ್ಬ ಪೋಲೀಸಿನವ—ಇಷ್ಟು ಮಂದಿ ಭಯಂಕರಾಕಾರದಿಂದ ನಿಂತಿದ್ದಾರೆ. ಆಮಿನಾ ನಗುತ್ತಾ ಓಡಿಹೋಗಲು ಪ್ರಯತ್ನಿಸಿದಳು. ಇದೆಲ್ಲವನ್ನೂ ಕಂಡುದೇ ತಡ, ಜುಮಲೆಯ ಮೈ ನಡುಗಿತು. ಫೂಲಸಾಹೇಬನು ಸಿಕ್ಕಿಬಿದ್ದುದರಿಂದ ಎಲ್ಲ ವಿಷಯಗಳೂ ಬಹಿರಂಗಗೊಂಡಿರುವುದೆಂದು ಅವಳು ತಿಳಿದಳು. ಸಾಲದುದಕ್ಕೆ ಆಮಿನಳು ಯುಕ್ತಿಯಿಂದ ಅವಳನ್ನು ಪೋಲೀಸರಿಗೆ ಹಿಡಿದುಕೊಟ್ಟಿರುವಳು! ಇದನ್ನೂ ಅವಳು ಊಹಿಸಿದಳು. ದಾರುಣವಾದ ಕ್ರೋಧದಿಂದ ಅವಳ ಮುಖವೂ ಕಣ್ಣುಗಳೂ ಕೆಂಪೇರಿದುವು ; ಕಣ್ಣುಗಳು ಬೆಂಕಿಯ ಕೆಂಡದ ಹಾಗೆ ಜ್ವಲಿಸತೊಡಗಿದುವು. ಜುಮಲೆಯು ಯಾವ ಮಾತನ್ನೂ ಆಡಲಾರದೇ ಹೋದಳು ; ಆ ಕ್ಷಣವೇ,—ಈ ಅಂಶವನ್ನು ಓದುವುದಕ್ಕೆ ಪಾಠಕರಿಗೆ ಎಷ್ಟು ಸಮಯ ಬೇಕಾಗುವುದೋ ಅದರ ಶತಾಂಶದಲ್ಲಿ ಒಂದಂಶವೂ ಇಲ್ಲವೆನ್ನುವಷ್ಟರೊಳಗಾಗಿ—ಜುಮಲೆಯು ಬೇಗನೆ ಹೋಗಿ ಆಮಿನಳ ಕೇಶರಾಶಿಯನ್ನು ಎಡದ ಕೈಯಿಂದ ಹಿಡಿದೆಳೆದಳು. ಸಂಗಡಲೇ ಇನ್ನೊಂದು ಕೈಯಿಂದ ನಡುವಿನಲ್ಲಿ ಮುಚ್ಚಿರಿಸಿಕೊಂಡಿದ್ದ, ಹದವಾಗಿ ಸಾಣೆಹಿಡಿದು ಮೊನೆಯಾಗಿದ್ದ ಉದ್ದವಾದೊಂದು ಚಾಕನ್ನು ಹೊರಕ್ಕೆ ತೆಗೆದು, ಅವಳ ಎದೆಯಲ್ಲಿ ಸಂಪೂರ್ಣವಾಗಿ ನಟ್ಟುಬಿಟ್ಟಳು. ಅದು ಹೃದಯವನ್ನು ಭೇದಿಸಿಕೊಂಡು ಬೆನ್ನಿನಲ್ಲಿ ಕಾಣಿಸಿಕೊಂಡಿತು. ಜುಮಲೆಯು ಆಲಸ್ಯವಾಡದೆ ಚಾಕನ್ನು ಸೆಳೆದುಕೊಂಡಳು. "ಅಪ್ಪಾ, ಅಮ್ಮಾ, ಹೋದೆನಲ್ಲೇ!" ಎಂದು ಹೇಳುತ್ತ, ಆಮಿನಾ ಅಲ್ಲಿಯೇ ಬಿದ್ದುಬಿಟ್ಟಳು. ರಕ್ತದಲ್ಲಿ ತೊಯಿದ ಅವಳ ಶರೀರವು ರಕ್ತದ ಕೋಡಿಯಲ್ಲಿ ಹೊರಳಾಡುತ್ತಿದ್ದಿತು. ಹಾಗೆಯೇ ರಕ್ತವು ಪ್ರಬಲ ವೇಗದಿಂದ ಹರಿದುಬಂದು ಆ ಕೊಠಡಿಯ ಅನೇಕ ಭಾಗಗಳನ್ನು ತೊಯಿಸಿತು. ಆ ಸಮಯದಲ್ಲಿ ಆ ಪಿಶಾಚಿಯ ಇದಿರಿಗೆ ಹೋಗುವುದು ಎಷ್ಟು ಭಯಂಕರವೆಂಬುದನ್ನು ಪಾಠಕರು ಸುಲಭವಾಗಿ ಊಹಿಸಬಲ್ಲರು. ದರೋಗನೂ ಪಹರೆಯವನೂ ಭಯಪಟ್ಟು ಎರಡು ಹೆಜ್ಜೆ ಹಿಂದಕ್ಕೆ ಸರಿದರು. ಅರಿಂದಮನು ಈ ಸಮಯ

ದಲ್ಲಿ ಭಯಪಟ್ಟರೆ ನಡೆಯುವುದಿಲ್ಲ, ಅದರಿಂದ ಕೆಡಕಾಗುವ ಸಂಭವ ಒಂದರೂ ಬಂದೀತು,—ಎಂದು ಊಹಿಸಿ, ಜುಮುಲೆಯು ಆಮೀನಳ ಹೃದಯದಿಂದ ಬಾಕನ್ನು ಎಳೆದು ಹಿಡಿದುಕೊಂಡಕೂಡಲೆ, ಅರಿಂದಮನು ಓಡಿಹೋಗಿ ಬಾಕಿನೊಂದಿಗೆ ಅವಳ ಕೈಗಳನ್ನು ಭದ್ರವಾಗಿ ಹಿಡಿದು ಕೊಂಡನು. ದರೋಗನೂ ಪಹರೆಯವನೂ ಆಗ ಆತುರಗೊಂಡು ಜುಮುಲೆಯ ಕೇಶರಾಶಿಯನ್ನು ಹಿಡಿದು ಎಳೆಯತೊಡಗಿದರು. ಆದರೆ ಜುಮುಲೆಯು ಆಗ ಕೆಲಸಮಾಡಲಾಗದ ಬಲಗೈಯಿಂದ ಆ ಬಾಕನ್ನು ಎಡದ ಕೈಗೆ ತೆಗೆದುಕೊಂಡು ತಿರುಹುತ್ತಾ ಅರಿಂದಮನಿಗೆ ಗಾಯ ಪಡಿಸುವ ಪ್ರಯತ್ನ ಮಾಡಿದಳು. ಅದು ಅರಿಂದಮನಿಗೆ ತಗಲದೆ ಗುರಿತಪ್ಪಿ ಪಕ್ಕದಲ್ಲಿ ನಿಂತಿದ್ದ ಪಹರೆಯವನ ನಡುವಿಗೆ ತಗಲಿ ನಾಟಿ ಕೊಂಡಿತು. ಎರಡು ಕೈಗಳಿಂದಲೂ ಗಾಯವನ್ನು ಅದುಮಿ ಹಿಡಿದು ಕೊಂಡು ಆಮೀನಳಂತೆ ಅವನೂ ರಕ್ತದಿಂದ ತೊಯ್ದ ದೇಹದಿಂದ ನೆಲದಮೇಲೆ ಬಿದ್ದು ಒದೆದಾಡತೊಡಗಿದನು. ಆಗ ದರೋಗನು ಎರಡು ಕೈಗಳಿಂದಲೂ ಜುಮುಲೆಯ ಕೈಯನ್ನು ಬಾಕಿನ ಸಮೇತವಾಗಿ ಹಿಡಿದು ಕೊಂಡನು. ಅರಿಂದಮನು ಬಲಾತ್ಕಾರವಾಗಿ ಅವಳ ಕೈಯಿಂದ ಬಾಕನ್ನು ಕಸರಿಕೊಂಡನು. ಹೀಗೆ ಮಾಡುವುದರಲ್ಲಿ ಅವನ ಕೈಗೂ ಒಂದೆರಡು ಕಡೆ ಗಾಯವಾಗಿ ರಕ್ತ ಸೋರತೊಡಗಿತು; ಅರಿಂದಮನು ಗಾಯದಕಡೆ ಗಮನಸಿಡದೆ, ಜುಮುಲೆಯ ಕೈಗೆ ಒಂದು ಜತೆ ಕೈಕೋಳ ಗಳನ್ನು ತೊಡಿಸಿಬಿಟ್ಟನು.

## ಜುಮುಲೆಯು ಬಂದಿಯಾದಳು

ಇದಕ್ಕೆ ಮೊದಲು ಅರಿಂದಮನು ಜುಮುಲೆಯನ್ನು ಹಿಡಿಯುವುದು ಎಷ್ಟು ಸುಲಭವೆಂದು ಎಣಿಸಿದ್ದನೋ ಕಾರ್ಯತಃ ಅದು ಹಾಗೆ ನಡೆಯ ಲಿಲ್ಲ. ಆಗ, ಜುಮುಲೆಯಂತೆ ಪ್ರಖರಳೂ, ಪ್ರಬಲಳೂ, ದುರ್ದಮನೀ ಯಳೂ ನಿರ್ಭೀಕಳೂ ಆದ ಮತ್ತೊಬ್ಬ ಹೆಂಗಸನ್ನು ತಾನು ನೋಡಿದ್ದಿಲ್ಲ ವೆಂದು ಅರಿಂದಮನು ತಿಳಿದನು. ಇಬ್ಬರನ್ನು ಗಾಯಪಡಿಸಿದನಂತರ ಅವಳು ಬಂದಿಯಾದಳು. ಜುಮುಲೆಯು ಅರಿಂದಮನನ್ನು ಕುರಿತು

ದೃಢ ಸ್ವರದಿಂದ,—ಅರಿಂದಮ, ನಿನ್ನ ಹಣೆಯ ಬರಹ ಚೆನ್ನಾಗಿದ್ದಿತು. ಆದರಿಂದಲೇ ಇಂದು ನೀನು ನನ್ನ ಕೈಯಿಂದ ಬದುಕಿಕೊಂಡೆ; ಇನ್ನು ಕೊಂಚ ಅವಕಾಶ ಸಿಕ್ಕಿದ್ದರೆ, ಇಷ್ಟು ಬೇಗ ನನ್ನಿಂದ ಆಯುಧವನ್ನು ಕಸರಿಕೊಳ್ಳದೆ ಇದ್ದಿದ್ದರೆ, ನಿನ್ನ ರಕ್ತದಿಂದ ನಾನು ಸ್ನಾನಮಾಡುವು ದನ್ನು ನೋಡಬಹುದಾಗಿದ್ದಿತು!—ಎಂದು ಹೇಳಿದಳು.

ಫೂಲಸಾಹೇಬನ ಉಪಪತ್ನಿಯ ವಿಷಯದಲ್ಲಿ ಇದೇನೂ ಆಶ್ಚರ್ಯಕರವಾದ ಸಂಗತಿಯಲ್ಲ—ಎಂದು ಅರಿಂದಮನು ಹೇಳಿದನು.

ಜುಮೆಲೆ—ನಾನು ಫೂಲಸಾಹೇಬನ ಉಪಪತ್ನಿಯೆ? ಈ ಸುಳ್ಳು ಮಾತನ್ನು ನಿನಗೆ ಹೇಳಿದವರು ಯಾರು?

ಅರಿಂದಮ—ಜುಮೆಲೆ, ನಾನು ಫೂಲಸಾಹೇಬನಿಂದಲೇ ಎಲ್ಲ ವನ್ನೂ ಕೇಳಿದೆ. ನೀನು ವಿಷವನ್ನು ಕೊಟ್ಟು ಕುಲನಿಯ ತಾಯಿ, ತಂದೆ, ಅಣ್ಣ ಎಲ್ಲರನ್ನೂ ಕೊಂದಿರುವೆ. ಈ ವಿಚಾರವನ್ನೂ ಅವನಿಂದಲೇ ಕೇಳಿದೆನು.

ಜುಮೆಲೆ—ಸುಳ್ಳು ಮಾತು! ಇದನ್ನೂ ಫೂಲಸಾಹೇಬನು ಒಪ್ಪಿಕೊಂಡನೆ?

ಅರಿಂದಮ—ಹೂಂ.

ಜುಮೆಲೆ—ಹಾಗಾದರೆ ನಾನೂ ಒಪ್ಪಿಕೊಳ್ಳುತ್ತೇನೆ. (ಕ್ಷಣಕಾಲ ಸುಮ್ಮನಿದ್ದು) ಈಗ ನನ್ನನ್ನು ಎಲ್ಲಿಗೆ ಕರೆದುಕೊಂಡು ಹೋಗುವೆ?

ಅರಿಂದಮ—ನಿನ್ನ ದುಷ್ಕಾರ್ಯಗಳಿಗೆಲ್ಲ ಸರಿಯಾದ ಪ್ರಾಯಶ್ಚಿತ್ತವು ಎಲ್ಲಿಯಾಗುವುದೋ ಅಲ್ಲಿಗೆ.

ಜುಮೆಲೆ—ನಡೆ ಬರುತ್ತೇನೆ. ಆದರೆ ತಿಳಿಗೇಡಿಯಾದ ಅರಿಂದಮನೇ! ಇದು ಮಾತ್ರ ಜ್ಞಾಪಕವಿರಲಿ. ಸರ್ಪಕ್ಕಿಂತಲೂ ಭಯಂಕರಳಾದ ಜುಮೆಲೆಯನ್ನು ಕೆಣಕಿದುದರಿಂದ ನೀನು ಒಳ್ಳೆಯ ಕೆಲಸ ಮಾಡಿದ ಹಾಗಾಗಲಿಲ್ಲ. ನೀನು ಉದ್ದೇಶಪೂರ್ವಕವಾಗಿ ಸರ್ಪದ ಮೈ ಚುಚ್ಚುತ್ತಿದ್ದೀಯೆ. ಇದಕ್ಕೆ ಸರಿಯಾದ ಪ್ರತಿಫಲವನ್ನು ಒಂದಲ್ಲ ಒಂದು ದಿನ ನೀನು ಅನುಭವಿಸಲೇ ಬೇಕಾಗುವುದು.

ಅರಿಂದಮ—(ವ್ಯಂಗ್ಯ ಸ್ವರದಿಂದ) ಅದಕ್ಕಾಗಿ ನೀನು ಆಲೋಚಿಸ ಬೇಕಾದ್ದಿಲ್ಲ. ನನ್ನ ವಿಚಾರವನ್ನು ಕುರಿತು ಆಲೋಚಿಸಿಕೊಳ್ಳುವುದಕ್ಕೆ ನನಗೆ ಬೇಕಾದಷ್ಟು ಕಾಲವಿದೆ. ಅರಿಂದಮನು ನಿನ್ನಂತಹ ಹತ್ತುಮಂದಿ ಜುಮುಲೆಯರನ್ನಾದರೂ ಹುಲ್ಲಿಗಿಂತ ಹಗುರವಾಗಿ ಕಾಣುವನು.

ಜುಮುಲೆಯು ಪರಿಹಾಸಮಾಡುವಳಂತೆ ಒಂದು ಸಲ ಗಟ್ಟಿಯಾಗಿ ನಕ್ಕಳು. ಆ ನಗೆಯ ಸಂಗಡಲೇ—ಹೋಗೋ ಹೋಗೋ ಅರಿಂದಮ, ಇನ್ನೂ ತಲೆಯೆತ್ತಿಕೊಂಡು ಮಾತನಾಡಬೇಡ, ಛೀ! ಛೀ! ಒಬ್ಬ ಹೆಂಗಸನ್ನು ಹಿಡಿವುದಕ್ಕೆ, ಒಂಟಿಯಾಗಿ ಬರಲು ನಿನಗೆ ಧೈರ್ಯವಿಲ್ಲ ವಾಯಿತು! ಗುಂಪುಕಟ್ಟಿಕೊಂಡು ಬಂದಿರುವ ನಿನ್ನ ಯೋಗ್ಯತೆಗೆ ಧಿಕ್ಕಾರವಿರಲಿ! ನಿನ್ನಂತಹ ಹೇಡಿಯ ಶರೀರದಲ್ಲಿ ಅಸ್ತ್ರಾಘಾತ ಮಾಡ ದಿದ್ದುದರಿಂದ ಅನುಕೂಲವೇ ಆಯಿತೆಂದು ಭಾವಿಸುತ್ತೇನೆ; ಹಾಗೆ ಮಾಡಿದ್ದಪಕ್ಷದಲ್ಲಿ, ನನ್ನ ಕೈಗೆ ಕಳಂಕವುಂಟಾಗುತ್ತಿದ್ದಿತು—ಎಂದು ಹೇಳಿದಳು.

ಜುಮುಲೆಯನ್ನು ಕರೆದುಕೊಂಡು ಅರಿಂದಮನೂ ದರೋಗನೂ ಠಾಣೆಗೆ ಹೊರಟರು. ಈ ಸುದ್ದಿಯನ್ನು ಕೇಳಿ ಗ್ರಾಮದಲ್ಲಿ ಇನ್ನೊಂದು ಗುಸುಗುಂಪಲು ಹುಟ್ಟಿ ಹರಡುತ್ತಿದ್ದಿತು.

ಸ್ವಲ್ಪ ಹೊತ್ತಿನೊಳಗಾಗಿ ಆಮಿನಾ ಮೃತಳಾದಳು. ಪೆಟ್ಟು ಅಷ್ಟು ಅಪಾಯಕರವಾಗಿ ಬೀಳದಿದ್ದ ಕಾರಣ ಆ ಪಹರೆಯವನ ಪ್ರಾಣವು ಈ ಸಲಕ್ಕೆ ಉಳಿದುಕೊಂಡಿತು.

ಪೋಲಿಸಾಹೇಬ ಮತ್ತೂ ಜುಮುಲೆ—ಇಬ್ಬರನ್ನೂ ಸ್ಥಳದ ಬಂದೀ ಖಾನೆಯ ಒಂದು ಕೊಠಡಿಯಲ್ಲಿ ನಿರ್ಬಂಧದಲ್ಲಿರಿಸಿದರು; ಇದರ ಮೇಲೆ, ಅವರಿಬ್ಬರನ್ನೂ ಜಾಗರೂಕತೆಯಿಂದ ನೋಡಿಕೊಳ್ಳುವುದ ಕ್ಕೋಸ್ಕರ ಪ್ರಹರಿಯೊಬ್ಬನು ಇಪ್ಪತ್ತುನಾಲ್ಕು ಗಂಟೆಗಳ ಕಾಲವೂ ಅಲ್ಲಿ ಪಹರೆಕೊಡುತ್ತಿದ್ದನು.

ಶ್ರೀ

# ಮಾಯಾವಿ

## ೩ ನೆಯ ಭಾಗ

## ಒಂದನೆಯ ಪರಿಚ್ಛೇದ

### ಮೃತ್ಯು ಚುಂಬನ

ಫೂಲಸಾಹೇಬನೂ ಜುಮಲೆಯೂ ದಸ್ತಗಿರಿಯಾದ ದಿವಸ ರಾತ್ರಿ, ಎರಡು ಪ್ರಹರಗಳನಂತರ, ಆಕಾಶದಲ್ಲಿ ಮೇಘವು ಮುಚ್ಚಿಕೊಂಡು ತುಂಬ ಭಯಪಡಿಸುತಲಿದ್ದಿತು. ಆ ದಿಗಂತವ್ಯಾಪಿಯಾದ ಮೇಘದ ದೆಸೆಯಿಂದ, ನಿಶ್ವಾಸ ಬಿಡುವುದೂ ಶ್ರಮಸಾಧ್ಯವಾಗಿ ತೋರುವ ಮಟ್ಟಿಗೆ ಗಾಳಿಯು ನಿಶ್ಚಲವಾಗಿದ್ದಿತು. ಆ ಅಂಧಕಾರಮಯವಾದ ಕಪ್ಪು ಮೋಡದಿಂದ, ಅಂಧಕಾರದ ಹಿಂದೆ ಅಂಧಕಾರವು ಇಳಿದು ಬಂದು ಪೃಥ್ವಿಯಲ್ಲಿ ಒಂದು ಕೊನೆಯಿಂದ ಇನ್ನೊಂದು ಕೊನೆಯವರೆಗೂ ವ್ಯಾಪಿಸಿ, ಭೂತಲದಿಂದ ಆಕಾಶತಲ ಪರ್ಯಂತ ಏಕಾಕಾರವಾಗಿದ್ದಿತು. ನಿಶ್ಶಬ್ದವಾದ ಆ ಅಂಧಕಾರದ ಮಧ್ಯೆ, ವಿಶಾಲವಾಗಿಯೂ ಉತ್ತರವಾಗಿಯೂ ಇರುವ, ಶಾಖೋಪಶಾಖೆಗಳಿಂದಲೂ ಎಲೆಗಳಿಂದಲೂ ನಿಬಿಡವಾದ ವೃಕ್ಷಗಳು ವಿಕಟಾಕಾರದ ದೈತ್ಯರ ಹಾಗೆ ನಿಂತಿದ್ದುವು. ಈ ಜಗತ್ತು ಅಂಧಕಾರಪೂರ್ಣ, ಸಮೀಪದಲ್ಲಿ ಅಂಧಕಾರ; ದೂರದಲ್ಲಿ ಮತ್ತೂ ಅಂಧಕಾರ. ಬಹುದೂರದಲ್ಲಿ ಅದಕ್ಕೂ ಮಿಂಚಿದ ಅಂಧಕಾರ. ಅಲ್ಲಿಗೆ ದೃಷ್ಟಿಯು ಪ್ರವೇಶ ಮಾಡಲಾಗುವುದಿಲ್ಲ. ಭಯಭರಿತವಾದ ಆ ಅಂಧಕಾರದಿಂದ ಕೂಡಿದ, ಆ ಭಯಂಕರ ರಾತ್ರಿಯಲ್ಲಿ, ಎರಡು ಝಾಮಗಳನಂತರ, ಸೆರೆಮನೆಯೊಳಗೆ, ಕೈಕಾಲುಗಳನ್ನು ಕಟ್ಟಿ ನಿರ್ಬಂಧಿತನಾಗಿದ್ದ ಫೂಲಸಾಹೇಬನು ಒಂದು ಕಡೆ ಬಿದ್ದುಕೊಂಡು ಅಮಾನುಷಿಕವಾಗಿ ಗೊರಕೆ ಹಾಕುತ್ತಾ ಸೆರೆಮನೆಯವರಿಗೆ ತನ್ನ ಗಭೀರವಾದ ನಿದ್ದೆಯ ಪರಿಚಯಮಾಡಿಕೊಡುತ್ತಿದ್ದನು. ಸ್ವಲ್ಪ

ದೂರದಲ್ಲಿ ಜುಮಲೆಯು ಎಚ್ಚರವಾಗಿ ಕುಳಿತಿದ್ದಳು. ಹೊರಭಾಗದಲ್ಲಿ ಒಂದು ದೀಪ ಉರಿಯುತ್ತಿದ್ದಿತು. ಆ ದೀಪದ ಬೆಳಕು ಸೆರೆಮನೆಯ ಕಿಷ್ಕಿಣದ ಬಾಗಿಲ ಕಂಡಿಯಿಂದ ಅಂಧಕಾರಪೂರ್ಣವಾದ ಸೆರೆಮನೆ ಯೊಳಕ್ಕೆ ಪ್ರವೇಶವಾಡಿತ್ತು. ಅದರ ಕೊಂಚ ಭಾಗವು ಜುಮಲೆಯ ಮುಖಮಂಡಲದಮೇಲೆ ಬಿದ್ದು ಆ ಮುಖವನ್ನು ಉಜ್ವಲತರವಾಗಿ ಪ್ರಕಾಶಪಡಿಸುತಲಿದ್ದಿತು; ಆ ಮುಖವು ಮ್ಲಾನವಲ್ಲ, ವಿಷಣ್ಣವೂ ಅಲ್ಲ; ಅದರಲ್ಲಿ ಚಿಂತೆಯ ಯಾವ ಚಿಹ್ನೆಯೂ ಇರಲಿಲ್ಲ. ಅದಕ್ಕೆ ಬದಲಾಗಿ ಅದು ಮತ್ತಷ್ಟು ಪ್ರಫುಲ್ಲವಾಗಿದ್ದಿತು. ಬಾಗಿಲ ಮುಂದೆ ಆಯುಧ ಸಹಿತನಾದ ಪ್ರಹರಿಯು ವಿರಾಮವಿಲ್ಲದೆ ಪಹರೆಕೊಡುತ್ತಿದ್ದನು. ಹಾಗೆಯೇ ಆ ಪ್ರಫುಲ್ಲವಾದ ಮುಖಮಂಡಲವನ್ನು, ಒಂದೊಂದು ವೇಳೆ, ಸತೃಷ್ಣನಯನನಾಗಿ ನೋಡುತ್ತಲೂ ಇದ್ದನು.

ಚಂದ್ರ ಶೂನ್ಯ, ತಾರಕಾ ಶೂನ್ಯ, ದಿಗ್ದಿಗಂತ ಶೂನ್ಯ, ಶಬ್ದ ಶೂನ್ಯ ವಾದ ಆ ರಜನಿಯ ಮೇಘಮಯವಾದ, ಅಂಧಕಾರಮಯವಾದ, ವಿಭೀಷಿಕಾಮಯವಾದ ಆ ಅಪಾರಭಯಸಮಯದಲ್ಲಿಯೂ ಆ ಸುಂದರ ವಾದ ಮುಖವು ಎಷ್ಟೋ ಮನೋಹರ! ಪಾಠಕ, ನಿಮಗೂ ನಮಗೂ ಅದು ಸರಿಯಾಗಿ ತಿಳಿಯುವ ಹಾಗಿಲ್ಲ. ಆ ಸೌಂದರ್ಯವು ಆ ಪ್ರಹರಿಗೆ ಚೆನ್ನಾಗಿ ಹೃದಯಂಗಮವಾಗಿದ್ದಿತು. ಪ್ರಹರಿಯ ಮುಖ ಭಾವವನ್ನೂ ದೃಷ್ಟಿಯ ಲಕ್ಷಣವನ್ನೂ ಕಂಡು, ಪ್ರಹರೀ ಪತಂಗವು ತನ್ನ ರೂಪಾಗ್ನಿಯಲ್ಲಿ ಧುಮುಕಲು ತುಂಬ ಕುತೂಹಲಗೊಂಡಿರುವು ದೆಂದು ಜುಮಲೆಯು ತಿಳಿಯದಿರಲಿಲ್ಲ. ಇದನ್ನು ತಿಳಿದುಕೊಂಡು, ಪ್ರಹರಿಯು ಮತ್ತೊಂದು ಸಲ ಸುತ್ತಿಕೊಂಡು ಬರುತ್ತಾ ಅವಳ ಮುಖ ವನ್ನು ನೋಡಿದಾಗ ಜುಮಲೆಯು, ಚಂಚಲವೂ ಉಜ್ವಲವೂ ಆದ ತನ್ನ ಕಣ್ಣುಗಳಿಂದ ಮಿಂಚಿನಂತೆ ಥಳಥಳಿಸುವ ಕಟಾಕ್ಷವನ್ನು ಪ್ರಹರಿಯ ಮೇಲೆ ಬೀರಿದಳು. ಪ್ರಹರಿಯು ಬಹುಮಟ್ಟಿಗೆ ಮರುಳಾದನು. ಚೇತನ ಸಹಿತನಾಗಿದ್ದರೂ ಅವನಿಗೆ ಚೈತನ್ಯವಿರಲಿಲ್ಲ. ಒಂದು ಬಗೆಯ ವೈದ್ಯುತಿಕ ಶಕ್ತಿಯು ಅವನ ಶರೀರದಲ್ಲೆಲ್ಲಾ ಹರಿದಾಡತೊಡಗಿತು.

ಅವನಿಗೆ ತಲೆ ಸುತ್ತುವ ಹಾಗಾಯಿತು. ಕಾಲುಗಳು ನಡುಗಿದುವು, ಹೃದಯದಲ್ಲಿ ದಡಬಡನೆ ಬಡಿದುಕೊಳ್ಳುವುದಕ್ಕೆ ಆರಂಭವಾಯಿತು; ಕಣ್ಣಿಗೆ ಕತ್ತಲೆ ಕವಿಯಿತು; ಕಿವಿಗಳಲ್ಲಿ "ಭೊಂ ಭೊಂ" ಎನ್ನುವಂತೆ ತೋರಿತು; ಅವನ ಮೈ ರೋಮಾಂಚಿತವಾಯಿತು. ಒಡನೆಯೇ ಅವನು ಇನ್ನೊಂದು ಕಡೆಗೆ ತಿರುಗಿಕೊಂಡು—ಆ ಸ್ಥಳದಿಂದ ಸರಿದು—ದೂರಕ್ಕೆ ಹೋಗಿ, ನಿರ್ಭಯವಾದೊಂದು ನಿಶ್ವಾಸವನ್ನು ಬಿಟ್ಟು ಬದುಕಿಕೊಂಡನು. ಹೃದಯದೊಳಗಣ ಕೋಲಾಹಲವು ಏತರಿಂದಲೂ ನಿಲ್ಲಲಿಲ್ಲ. ಪ್ರಹರಿಯ ಅವಸ್ಥೆ ಅವನಿಗೇ ತಿಳಿಯಲಿಲ್ಲವಾದರೂ ಜುಮಲೆಯು ಅದನ್ನು ಸಂಪೂರ್ಣವಾಗಿಯೂ ತಿಳಿದಳು. ಜುಮಲೆಯು ಸಾಧನ ಸಿಕ್ಕಿತು ಎಂದಂದುಕೊಂಡಳು.

ಪ್ರಹರಿಯು ಮತ್ತೊಂದು ಸಲ ಸುತ್ತುತ್ತಾ, ನಡುಗುವ ಹೆಜ್ಜೆಗಳನಿಟ್ಟುಕೊಂಡು, ಹಿಂದಿರುಗಿ ಬಂದಾಗ ಜುಮಲೆಯು ಅವನನ್ನು ನೋಡಿ,—'ದ್ವಾರ ರಕ್ಷಕ ಮಹಾಶಯ! ನಮಗೋಸ್ಕರವಾಗಿ ನಿನಗೆ ಎಷ್ಟು ತೊಂದರೆ?'—ಎಂದಳು.

ಪ್ರಹರಿ—(ಮೃದು ಸ್ವರದಿಂದ) ಅಯ್ಯೋ! ಇಲ್ಲ, ಇಲ್ಲ. ನನ್ನ ಕೆಲಸವೇ ಇದು.

ಜುಮಲೆ—(ಮೊದಲಿನಂತೆಯೇ ಮಧುರ ಕಂಠದಿಂದ) ಅದು ಹೇಗೇ ಆಗಲಿ, ರಕ್ಷಕ ಮಹಾಶಯ! ಇದು ಮನುಷ್ಯಮಾತ್ರನಾದವನಿಗೆ ತಕ್ಕ ಕೆಲಸವಲ್ಲ. ಇಂತಹ ರಾತ್ರಿಯಲ್ಲಿ, ಸುಖ ಶಯ್ಯೆಯಲ್ಲಿ ಮಲಗುವುದನ್ನು ಬಿಟ್ಟು, ಹೆಗಲಮೇಲೆ ಬಂದೂಕು ಹೊತ್ತು, ಈ ಕಡೆಯಿಂದ ಆ ಕಡೆಗೂ, ಆ ಕಡೆಯಿಂದ ಈ ಕಡೆಗೂ ಸದಾ ಸುತ್ತುತ್ತಿರಲಾದೀತೆ!

ಈ ಮಾತನ್ನು ಕೇಳಿ ಪ್ರಭುಭಕ್ತನಾದ ಪ್ರಹರಿಯು ಒಂದುಸಲ ನಿಟ್ಟುಸಿರಿಟ್ಟು,—ಯಾರ ಉಪ್ಪು ತಿನ್ನುವೆವೋ ಅವರ ಕೆಲಸಕ್ಕಾಗಿ ಪ್ರಾಣವಾದರೂ ಕೊಡಲೇಬೇಕು—ಎಂದು ಹೇಳಿದನು.

ಅನಂತರ ಜುಮಲೆಯು ಆ ಮಾತು ಈ ಮಾತುಗಳಂತೆ ಅನೇಕ ಮಾತುಕತೆಗಳಾಡಿದಳು. ಆಮೇಲೆ ಸುಖ ದುಃಖದ ಮಾತು ಕತೆಗಳಾ

ದುವು; ವಿರಹವೇದನೆಯು ಮಾತುಗಳಾದುವು; ಜುಮುಲೆಯು ಪ್ರಹರಿಯ ದುಃಖದಲ್ಲಿ ಅತ್ಯಂತ ಪರಿತಾಪವನ್ನು ಸೂಚಿಸಿದಳು. ಪರಿತಾಪಸೂಚಕಗಳಾದ ಅವಳ ಆ ಮಾತುಗಳು ಪ್ರಹರಿಯ ಕಿವಿಯಲ್ಲಿ ವೀಣಾಗಾನದಂತೆ ಸುಖಮಯವಾಗಿ ಆಘಾತಮಾಡುವು. ಜುಮುಲೆ ಹೇಳಿದಳು—ಒಳ್ಳೆಯದು, ರಕ್ಷಕ ಮಹಾಶಯ, ನೀನು ಈಗ ಮೂರು ವರ್ಷಗಳಿಂದ ಊರಿಗೆ ಹೋಗಲಿಲ್ಲವಲ್ಲವೆ? ನಿನ್ನ ಹೆಂಡತಿ ತಾನೇ ನಿನ್ನನ್ನು ಹೇಗೆ ಬಿಟ್ಟಿರುವಳು! ನಾನಾಗಿದ್ದಿದ್ದರೆ, ನಿನ್ನಿಂದ ಅನ್ನ ಬಟ್ಟೆಗಳು ಸಿಕ್ಕಿದರೂ ಸರಿ, ಸಿಕ್ಕದಿದ್ದರೂ ಸರಿ, ನಿನ್ನನ್ನು ಬೇರೆ ಅರೆಗಳಿಗೆಯೂ ಬಿಟ್ಟಿರುತ್ತಿರಲಿಲ್ಲ—ಎಂದು.

ಪ್ರಹರಿ—(ನಗುತ್ತ) ನಿಮ್ಮ ಜನರು ದೊಡ್ಡಮನುಷ್ಯರು; ಎಲ್ಲವನ್ನೂ ಮಾಡುತ್ತೀರಿ. ನಮ್ಮವರು ಬಡವರು; ನಮ್ಮವರಿಗೆ ಮೊತ್ತಮೊದಲು ಹೊಟ್ಟೆಯ ಆಲೋಚನೆ.

ಜುಮುಲೆ—ನಿನಗೆ ಮಕ್ಕಳೆಷ್ಟು ಮಂದಿ?

ಪ್ರಹರಿ—ಎರಡು ಗಂಡು, ಈಗ ಆರುತಿಂಗಳಿನದೊಂದು ಹೆಣ್ಣು ಕೂಸು.

ಜುಮುಲೆ—ನೀನು ಮೂರು ವರ್ಷಗಳಿಂದ ನಿಮ್ಮ ಊರಿಗೇ ಹೋಗಲಿಲ್ಲವೆಂದು ಹೇಳಿದೆ? ಆರು ತಿಂಗಳಿನ ಹೆಣ್ಣು ಕೂಸು ಹೇಗೆ?

ಪ್ರಹರಿಯು ತಲೆಯನ್ನಾಡಿಸುತ್ತ,—ಇದೆಂತಹ ಮಾತು? ನಾನು ಪ್ರತಿ ತಿಂಗಳಲ್ಲಿಯೂ ಊರಿಗೆ ಕಾಗದ ಬರೆಯುತ್ತೇನೆ. ಅಲ್ಲಿಂದ ಪುನಃ ಉತ್ತರ ಬರುತ್ತದೆ. ಹೀಗಿದ್ದ ಕಾಲದಲ್ಲಿಯೇ ಅಲ್ಲವೆ, ನನ್ನ ದೊಡ್ಡಮಗ 'ಭಿಖುರಾಂ' ಹುಟ್ಟಿದ್ದು!—ಎಂದು ಗಂಭೀರವಾಗಿ ಹೇಳಿದನು.

ಜುಮುಲೆ—ಅಯ್ಯೋ ನತದೃಷ್ಟನೆ! ಇದು ಕಾಗದ ಪತ್ರದ ಆಪಳಿತವೇನೋ?

ಪ್ರಹರಿ—ನಮ್ಮ ಜನರು ಎಲ್ಲ ಆಪಳಿತವನ್ನೂ ಕಾಗದದ ಮುಖಾಂತ್ರವೇ ಮಾಡಬಲ್ಲರು.

ಈ ಮಾತನ್ನು ಕೇಳಿ ಜುಮಲೆಯು ಒಂದುಸಲ ಗಟ್ಟಿಯಾಗಿ ನಕ್ಕು ನೀನು 'ಘಫೂರ'ನ ತಾಯನ್ನು ತುಂಬ ಪ್ರೀತಿಸುವೆಯಾ? ಎಂದಳು.

ಪ್ರಹರಿ—ಹೋ-ಹೋ! ಬಹಳಮಟ್ಟಿಗೆ ಪ್ರೀತಿಸುತ್ತೇನೆ.

ಜುಮಲೆ—'ಘಫೂರ'ನ ತಾಯಿ ನನಗಿಂತಲೂ ಸುಂದರಳೇ?

ಪ್ರಹರಿ—ಅಯ್ಯೋ-ರಾಮ ರಾಮ! ನಿನ್ನಷ್ಟು ಸುಂದರಳಾಗಿದ್ದಿದ್ದರೆ, ನನಗೆ ಸಾವಿರ ರೂಪಾಯಿ ಸಂಬಳ ಸಿಕ್ಕುವುದಾಗಿದ್ದರೂ ಅವಳನ್ನು ಅರಗಳಿಗೆ ಕೂಡ ಬಿಟ್ಟಿರುತ್ತಿರಲಿಲ್ಲ.

ಜುಮಲೆ—ಈಗ ಏನೋ ಹೀಗೆ ಹೇಳುತ್ತಿ. ಆಮೇಲೆ ಒಂದು ಸಲವಾದರೂ ತಿರುಗಿನೋಡಲಾರೆ—ಎಂದು ತೋರುತ್ತದೆ. ಒಂದು ವೇಳೆ—ಒಂದು ವೇಳೆಯೇನು? ಖಂಡಿತವಾಗಿಯೂ ಊರಿನಲ್ಲಿ ನನ್ನೊಬ್ಬಳನ್ನೇ ಬಿಟ್ಟು, ಇಲ್ಲಿಗೆ ಬಂದು ಈ ಇಲಾಖೆಯ ಈ ಉಡಿಗೆ ತೊಡಿಗೆಗಳೊಡನೆ,—'ಬೆಲ್ಟು' ಬಿಲ್ಲೆಗಳೊಡನೆ ಮತ್ತೂ ಛರ್ಜಿ ಸಹಿತವಾದ ಈ ಬಂದೂಕಿನೊಡನೆ ಪ್ರಣಯಾಕಾಂಕ್ಷಿಯಾಗುವೆ! ಪ್ರಹರೀ ಮಹಾಶಯ! ನೀನೇನೋ ಸರಕಾರದವರಿಗಾಗಿ ಇಲ್ಲಿ ಪಹರೆ ಕೊಡುತ್ತಿರುವೆ, ಅಲ್ಲಿ 'ಘಫೂರ'ನ ತಾಯಿಗೆ ಯಾರು ಕಾವಲಾಗಿದ್ದಾರೆ? ಅಲ್ಲೇನಾದರೂ ಲೂಟೀ ಗೀಟೀ ಆದರೆ—?

ಪ್ರಹರಿ—(ಜುಮಲೆಯನ್ನು ನಿರ್ದೇಶಿಸಿ) ಇಂತಹ ರತ್ನಕ್ಕಾದರೆ ಆ ಭಯ. ಗಾಜಿನ ಚೂರಿಗೆ ಯಾರಾದರೂ ಕೈ ಹಾಕುವರೇ?

ಜುಮಲೆ—ನಾನು ಅಷ್ಟು ಸುಂದರಳೆ? ರತ್ನವೆ?

ಪ್ರಹರಿ—ರತ್ನವೇ. ಇದರಲ್ಲಿ ಸಂದೇಹವೆ?

ಜುಮಲೆ—ನೋಡು, ದುರ್ಬಲಸಿಂಗ್—

ಪ್ರಹರಿ—ನನ್ನ ಹೆಸರು ದುರ್ಬಲಸಿಂಗನಲ್ಲ.

ಜುಮಲೆ—ಹಾಗಾದರೆ ಮರಣಾಪನ್ನಸಿಂಗನೆಂದೋ?

ಪ್ರಹರಿ—ಅಲ್ಲ ಅಲ್ಲ. ನನ್ನ ಹೆಸರು ಲಂಕೇಶ್ವರಸಿಂಗ.

ಜುಮಲೆ—ಭಲೆ-ಭಲೆ ಎಂತಹ ಮುದ್ದಾದ ಹೆಸರು! ಏನೋ ಹೇಳುತ್ತಲಿದ್ದೆ; ಲಂಕೇಶ್ವರಸಿಂಗ್—ಹೇಳಲು ನಾಚುಗೆಯಾಗುತ್ತಿದೆ. ನಿನ್ನನ್ನು ನೋಡಿದ ಮೊದಲು ನನ್ನ ಮನಸ್ಸು ಹೇಗೋ ಆಗಿದೆ,-ಹೇಳುವುದಕ್ಕೇ ಬರುವುದಿಲ್ಲ. ಆನೆಯ ಹಾಗಿರುವ ನಿನ್ನ ಕಣ್ಣುಗಳು, ಉರುಳುಗಡ್ಡೆಯ ಹಾಗಿರುವ ಮೂಗು, ಸಮ್ಮಾರ್ಜನಿಯಂತಹ ಮೀಸೆ, ಆಲದ ಬಿಳಲಿನಂತಹ ಗಡ್ಡ—ಇವು ನನ್ನ ಬುದ್ಧಿಯನ್ನೇ ಸೆಳೆದು ಬಿಟ್ಟಿವೆ. ನಿನ್ನೊಡನೆ ವನಕ್ಕಾದರೂ ಹೋಗಿ ಇಬ್ಬರೂ ಸ್ವೇಚ್ಛೆಯಾಗಿರಬೇಕೆಂದು ಆಸೆಯಾಗುತ್ತದೆ. ಸೃಷ್ಟಿಸಿದ ಬ್ರಹ್ಮನು ನನ್ನನ್ನು ನಿನ್ನ ವಶಮಾಡದೇ (ಫೂಲಸಾಹೇಬನನ್ನು ತೋರಿಸಿ) ಈ ಕೊಲೆಪಾತಕನ ವಶಮಾಡಿದ್ದಾನೆ; ಈಗಲೂ ನೀನು ನಿನ್ನ ಪಾದದಲ್ಲಿ ನನಗೆ ಆಶ್ರಯ ಕೊಡುವುದಾದರೆ, ಈ ಜನ್ಮವು ಸಾರ್ಥಕವಾಗುವುದು—ಎಂದಳು.

ಹೀಗೆ ಹೇಳಿ, ಜುಮಲೆಯು ಅವನ ಮೇಲೆ ಮತ್ತೊಂದು ಬಾರಿ ಕಟಾಕ್ಷವನ್ನು ಬೀರಿದಳು. ಆದರೂ ಲಂಕೇಶ್ವರನು ಸ್ಥಿರಭಾವದಿಂದ ನಿಂತೇ ಇದ್ದನು. ನಿಶ್ಚಯವಾಗಿ ಲಂಕೇಶ್ವರನೇ ಧನ್ಯ! ಆಗ ಅವನು ತಲೆ ತಿರುಗಿ ಬೀಳದಿದ್ದುದೇ ಯಥೇಷ್ಟ!! ಅವನು ಸುತ್ತಿಕೊಂಡು ಬೀಳದಿದ್ದರೂ ಅವನ ತಲೆ ಸುತ್ತುತ್ತಲಿದ್ದಿತು; ಅವನ ಪ್ರಾಣವು ಹೃದಯ ಮಧ್ಯದಲ್ಲಿಯೇ ಮೂರ್ಛೆಗೊಂಡಿತು. ಅವನು ಮಾತನಾಡಲಾರದೆ ಕೇವಲ ಜುಮಲೆಯ ಮಾತುಗಳನ್ನು ಕೇಳುತ್ತಿದ್ದನು. ಅಷ್ಟರಿಂದಲೇ ಅವನ ಕೈಗೆ ಸ್ವರ್ಗ ಸಿಕ್ಕಿದ ಹಾಗಾಯಿತು; ಅವಳನ್ನು ಹೊಂದಬೇಕೆಂಬ ಆಸೆಯು ತುಂಬ ಪ್ರಬಲವಾಗಿ ಹದ್ದುಮೀರುವ ಹಾಗಾಯಿತು. ಹೇಳಿದನು—ಇಂತಹ ಮಾತುಗಳನ್ನಾಡಬೇಡ. ನೀನು ನಿನ್ನ ಪಾದದಲ್ಲಿ ನನಗೆ ಎಡೆಗೊಡು, ನಾನು ನಿನ್ನನ್ನು ಶಿರಸಾಧರಿಸುವೆನು. ನನ್ನ ಅದೃಷ್ಟವು ಚೆನ್ನಾಗಿದ್ದುದರಿಂದಲೇ ನೀನು ನನ್ನನ್ನು ಹೀಗೆ ಹೊಗಳಿದ್ದು—ಹೀಗೆಂದು ಹೇಳಿ ಪ್ರಹರಿಯು ಚರಿತಾರ್ಥನಾದನು.

ಜುಮಲೆ—ನೀನು ಈಗ ನನ್ನಲ್ಲಿ ವಿಶ್ವಾಸವಿರಿಸಿದ ಪಕ್ಷದಲ್ಲಿ, ನಾನು ನಿನ್ನನ್ನು ಹೊಗಳುವುದಕ್ಕೆ ಎಷ್ಟರಮಟ್ಟಿಗೆ ಸಮ್ಮತಳಾಗಿರುವೆನೆಂಬುದನ್ನು ಸ್ವಲ್ಪದರಲ್ಲಿಯೇ ತಿಳಿಯುವೆ.

ಪ್ರಹರಿ—ನೀನು ಮೋಸ ಮಾಡಿದರೋ !

ಜುಮಲೆ—ಇಲ್ಲ ಲಂಕೇಶ್ವರಸಿಂಗ್ ! ನಿನ್ನಾಣೆಗೂ-ನಾನು ಎಂದೂ ಮೋಸ ಮಾಡುವವಳಲ್ಲ, ನಿಜವಾಗಿಯೂ ಹೇಳುತ್ತೇನೆ. ನಿನ್ನನ್ನು ನೋಡಿದ ಮೊದಲು ನನ್ನ ಮನಸ್ಸು ನಿನ್ನಲ್ಲಿ ಸೇರಿ ಬಿಟ್ಟಿತು. ಲಂಕೇಶ್ವರಸಿಂಗ್ ! ನೀನು ಹೇಗಾದರೂ ಮಾಡಿ ಈ ಕೈಕೋಳದ ಬೀಗದ ಕೈ ಸಂಗ್ರಹಿಸಿಟ್ಟುಕೊಳ್ಳುವುದಾದರೆ ನಾನು ಇಲ್ಲಿರಬಹುದಾದ ಈ ಆರೇಳು ರಾತ್ರಿಗಳಲ್ಲಿ, ನನ್ನ ಸ್ವಾಮಿಯು ಹೀಗೆ ನಿದ್ರಿಸುತ್ತಿರುವಾಗ, ದಿನ ಒಂದಕ್ಕೆ ಒಂದೆರಡು ಘಳಿಗೆಯಾದರೂ ನಿನ್ನ ಸಂಗಡ ಸಂತೋಷದಿಂದಿರಬಹುದು.

ಇದನ್ನು ಕೇಳಿ ಪ್ರಹರಿಯು ಅತ್ಯಂತ ಉತ್ಸಾಹಿತನಾಗಿ, "ನನ್ನಲ್ಲಿ ಒಂದು ಹಳೆಯ ಬೀಗದ ಕೈ ಇದೆ. ಅದು ಎಲ್ಲ ಕೋಳಗಳಿಗೂ ಸರಿಯಾಗುವುದು" ಎಂದನು.

ಸೆರೆಮನೆಯ ಬಾಗಲಿಗೆ ಬೀಗಕ್ಕೆ ಬದಲಾಗಿ ಒಂದು ಕೋಳವನ್ನು ತಗಲಿಸಿದ್ದರು. ಲಂಕೇಶ್ವರನು ನಡುವಿನಲ್ಲಿದ್ದ ಬೀಗದಕೈ ತೆಗೆದು, ಕೋಳವನ್ನು ಕಳಚಿ, ಜುಮಲೆಯನ್ನು ಹೊರಕ್ಕೆ ಬಿಟ್ಟು, ಪುನಃ ಬಾಗಲಿಗೆ ಕೋಳವನ್ನು ತಗಲಿಸಿದನು.

ಹೊರಗೆ ಬಂದವಳೇ ಜುಮಲೆಯು ಲಂಕೇಶ್ವರನನ್ನು ಎರಡು ಕೈಗಳಿಂದಲೂ ಬಾಚಿ ತಬ್ಬಿಕೊಂಡು, ಗಡ್ಡ ಮೀಸೆಗಳಿಂದ ಮುಚ್ಚಿ ಹೋಗಿದ್ದ ಅವನ ಮುಖವನ್ನು ಬಾರಿಬಾರಿಗೂ ಮುತ್ತಿಟ್ಟಳು ; ಉತ್ತರಕ್ಷಣದಲ್ಲಿಯೇ ಪ್ರಹರಿಗೆ ಪ್ರಜ್ಞೆ ತಪ್ಪಿತು ; ನೆಲಕ್ಕೆ ಉರುಳಿದನು. ಆ ವೇಳೆಗೆ ಅವನಿಗೆ ಪ್ರಾಣವಿರಲಿಲ್ಲ.

ಜುಮಲೆಯ ಚುಂಬನದಿಂದ ಲಂಕೇಶ್ವರನು ಸತ್ತುದನ್ನು ನೋಡಿ ಪಾಠಕರು ಆಶ್ಚರ್ಯಪಡಲಾಗದು. ಅವಳು ಸರ್ಪಿಣೀ. ಅವಳ ಗಾಳಿ ಸೋಕಿದರೂ ರಕ್ತವು ವಿಷಮಯವಾಗುವುದು.

———

## ಎರಡನೆಯ ಪರಿಚ್ಛೇದ

### ದಾನವ ಮತ್ತು ದಾನವಿ

ಒಳಗೆ ನಿದ್ರೆ ಮಾಡುವವನಂತೆ ನಟಿಸುತ್ತ ಬಿದ್ದಿದ್ದ ಫೂಲಸಾಹೇಬನು ಎಲ್ಲವನ್ನೂ ನೋಡುತ್ತಿದ್ದನು; ಎಲ್ಲ ಮಾತುಗಳನ್ನೂ ಕೇಳುತ್ತಿದ್ದನು. ಪ್ರಹರಿಯು ಬಿದ್ದುದನ್ನು ಕಂಡು ಫೂಲಸಾಹೇಬನು ಕಪಟ ನಿದ್ರೆಯನ್ನು ಬಿಟ್ಟು ಮೇಲಕ್ಕೆದ್ದು, "ಕೆಲಸವಾಯಿತೆ?" ಎಂದು ಕೇಳಿದನು.

ಜುಮಲೆಯು ಪ್ರಹರಿಯ ಕೈಯೊಳಗಿದ್ದ ಆ ಕೋಳದ ಬೀಗದಕ್ಕೆ ತೆಗೆದುಕೊಂಡು ಬಾಗಿಲನ್ನು ತೆರೆದು ಫೂಲಸಾಹೇಬನನ್ನು ಹೊರಕ್ಕೆ ಕರೆದುಕೊಂಡು ಬಂದು, ಬಂಧನ ಮುಕ್ತನನ್ನಾಗಿ ಮಾಡಿ, "ಇಷ್ಟು ಹೊತ್ತಿನ ಮೇಲೆ ಕೆಲಸವಾಯಿತು" ಎಂದಳು.

ಫೂಲಸಾಹೇಬನು ಜುಮಲೆಯ ಕಂಠವನ್ನಾಲಿಂಗಿಸಿಕೊಂಡು, ಪ್ರೀತಿವ್ಯಂಜಕ ಸ್ವರದಿಂದ, "ಇಷ್ಟರ ಸಾಮರ್ಥ್ಯವಿಲ್ಲದೇ ಇದ್ದಿದ್ದರೆ ನಿನ್ನಲ್ಲಿ ನಾನು ಅನುಗತನಾಗುತ್ತಿದ್ದೆನೇಕೆ?" ಎಂದನು.

ಜುಮಲೆಯು (ನಗುತ್ತ) ಪ್ರಾಯಃ ಲಂಕೇಶ್ವರನ ಪ್ರಾಣಗಳೆಲ್ಲವೂ ಮೊದಲೇ ನನ್ನನ್ನು ಸೇರಿದ್ದುವು. ಇಂತಹ ಬುದ್ಧಿಹೀನನನ್ನೂ ಮೈ ಮರೆ ನದೆ ಇರುವೆನಾದರೆ, ನನಗೆ ಸಾಧ್ಯವಾಗುವುದು ಯಾವುದು? ಅನಂತರ ಅವನ ಎರಡು ಕೈಗಳನ್ನೂ ಬಿಗಿದು ಹಿಡಿದು ಮುತ್ತಿಟ್ಟಾಗ, ಅವನ ಶರೀರದಲ್ಲಿದ್ದ ಪ್ರಾಣವಾಯುವಿನ ಅವಶಿಷ್ಟ ಭಾಗವನ್ನೂ ಆಕರ್ಷಣ ಮಾಡಿದೆ. ಪ್ರಾಣವಾಯುವೆಲ್ಲವೂ ಕೈಸೇರಿದನಂತರ ಇವ ನನ್ನು ಹೇನು ಕುಕ್ಕುವ ಹಾಗೆ, ಸುಲಭವಾಗಿ, ಉಗುರಿನಿಂದ ಕೊಂದು ಹಾಕಿದೆನು. ಇದು ಆಶ್ಚರ್ಯವೆ? ಆ ವಿಷದ ಮುಳ್ಳು ಅವನ ಬೆನ್ನಿನಲ್ಲಿ ಚೆನ್ನಾಗಿ ಚುಚ್ಚಿಕೊಂಡಿದೆ.

ಫೂಲ್.—ನೋವಾಗಲಿಲ್ಲವೆ?

ಜುಮಲೆ—ನೊಂದರೆತಾನೆ ಭಯವೇನು? ನೋವಿನಿಂದ ಕೂಗಿ ಕೊಂಡಾನೆಂದು ಶಂಕಿಸಿ, ಚುಂಬನದ ನೆವದಿಂದ ಬಾಯಿ ಮುಚ್ಚಿದ್ದೆನು.

ಅಲ್ಲದೆ ಎರಡು ಕೈಗಳಿಂದಲೂ ಬಾಚಿ ತಬ್ಬಿಕೊಂಡಾಗ ಆ ಆನಂದದಿಂದ ಅವನಿಗೆ ಜ್ಞಾನವೇ ಲೋಪವಾಯಿತು. ಇದೊಂದು ಮುಳ್ಳು ಚುಚ್ಚಿದ್ದು ಹಾಗಿರಲಿ, ಆಗ ಅವನ ಬೆನ್ನಿಗೆ ಸಾವಿರಾರು ಅಸ್ತ್ರಗಳು ಚುಚ್ಚಿಕೊಂಡಿದ್ದರೂ ಅವನಿಗೆ ತಿಳಿಯುತ್ತಿರಲಿಲ್ಲವೆಂದು ತೋರುತ್ತದೆ.

ಫೂಲ.—ನಡೆ, ಇನ್ನೂ ಅನೇಕ ಕೆಲಸಗಳುಳಿದಿವೆ.

ಫೂಲಸಾಹೇಬನು ಜುಮುಲೆಯ ಕೈಹಿಡಿದು ಮುಂದಾಗಿ ಹೊರಟನು; ಸ್ವಲ್ಪದೂರ ಹೋಗಿ, ಇದ್ದಕ್ಕಿದ್ದ ಹಾಗೆಯೇ ಹಿಂದಿರುಗಿ ನಿಂತು, "ಜುಮುಲೆ, ತಾಳು! ಆತುರದಲ್ಲಿ ಒಂದು ಕೆಲಸವನ್ನೇ ಮರೆತಿದ್ದೆ; ಈಗಲೇ ಬರುತ್ತೇನೆ" ಎಂದು ಹೇಳಿ ಜುಮುಲೆಯನ್ನು ಅಲ್ಲಿಯೇ ನಿಲ್ಲಿಸಿ, ತಾನು ಮಾತ್ರ ಪುನಃ ಆ ಸೆರೆಮನೆಯ ಬಳಿಗೆ ಬಂದನು; ಮೃತನಾಗಿದ್ದ ಪ್ರಹರಿಯ ಬಂದೂಕಿನ ಮಸೀಸನ್ನು ತೆಗೆದುಕೊಂಡನು. ಅನಂತರ ಸೆರೆಮನೆಯೊಳಕ್ಕೆ ಹೋಗಿ, ಅಲ್ಲಿ ಗೋಡೆಯ ಮೇಲೆ, ಮಸೀಸಿನಿಂದ ದೊಡ್ಡದೊಡ್ಡ ಅಕ್ಷರಗಳಲ್ಲಿ—"**ಅರಿಂದಮ! ಎಚ್ಚರಿಕೆ; ಒಂದು ವಾರದೊಳಗಾಗಿ ನಿನ್ನನ್ನು ಕೊಲ್ಲುತ್ತೇನೆ. ನನ್ನ ಹೆಸರು ನಿನ್ನ ಚಿರಶತ್ರು ಫೂಲಸಾಹೇಬ!!**" ಎಂದು ಬರೆದನು.

ಬರೆದವನೇ ಫೂಲಸಾಹೇಬನು ಹಿಂದಿರುಗಿ ಬಂದು ಆ ಮಸೀಸನ್ನು ಜುಮುಲೆಯ ಕೈಗೆ ಕೊಟ್ಟು ತಾನು ತೀಕ್ಷ್ಣ ಮುಖದ ಕಠಾರಿಯೊಂದನ್ನು ಹಿಡಿದುಕೊಂಡನು. ಆಗ, ಅವರಿಬ್ಬರೂ ಆ ದುರ್ಭೇದ್ಯವಾದ ಅಂಧಕಾರದಲ್ಲಿ ಪೂರ್ವದಿಕ್ಕಿನ ಗೋಡೆಯ ಕಡೆಗೆ ನಡೆದರು.

ಘನಾಂಧತಮೋಮಯಿಯಾದ ನಿಶಾರಾಕ್ಷಸಿಯು, ನರಪ್ರೇತನಾದ ಫೂಲಸಾಹೇಬನಿಗೂ, ರಾಕ್ಷಸಿಯಾದ ಜುಮುಲೆಗೂ ಸಹಕಾರಿಯಾಗಿ ಆ ವೇಳೆಗೆ ಮತ್ತಷ್ಟು ಭಯಂಕರರೂಪವನ್ನು ಧಾರಣ ಮಾಡಿದ್ದಳು.

ಅದೇ ರಾತ್ರಿ. ಮೇಘಚ್ಛಾಯೆಯಿಂದ ಕೂಡಿದ, ಕಗ್ಗತ್ತಲೆಯಿಂದ ಭಯಂಕರಳಾಗಿರುವ ಆ ನಿಶಿಯು ಪ್ರಳಯಂಕರಿಯ ರೂಪವನ್ನು ಧರಿಸಿ

ಪ್ರಪಂಚವೆಲ್ಲವನ್ನೂ ಭಯಭರಿತವಾಗಿ ಮಾಡಿರುವಳು. ಬಿರುಗಾಳಿಯಿಂದ ಕೂಡಿದ ಬಿರುಸಾದ ಮಳೆಗೆ ಆಗಲೇ ಆರಂಭವಾಗಿದೆ. ಈ ಮಳೆಗಾಳಿಗಳಿಗೆ ಸಿಕ್ಕಿದ ದೊಡ್ಡ ದೊಡ್ಡ ಮರಗಳು ತಾಯನ್ನು ಕಳೆದುಕೊಂಡ ರಾಕ್ಷಸ ಶಿಶುಗಳ ಹಾಗೆ, ಹೃದಯ ಶೋಕವು ದಿಗ್ದಿಗಂತಗಳವರೆಗೂ ವ್ಯಾಪಿಸಲೆಂದು ಏಕಟ ಸ್ವರದೊಡನೆ ತೂಗಾಡುತ್ತಿವೆ. ಆ ಬಿರುಗಾಳಿಯೊಂದಿಗೆ ಬೆರೆತು ಅಕಾತರವಾಗಿ ವರ್ಷಿಸುತ್ತಿರುವ ಮಳೆಯು, ದಟ್ಟವಾಗಿಯೂ ಛಿದ್ರಶೂನ್ಯವಾಗಿಯೂ ಇರುವ ಕೃಷ್ಣ ಮೇಘಾವೃತವಾದ ಪೃಥ್ವಿಯನ್ನು ಪಿಶಾಚಿಗಳ ರಂಗಸ್ಥಳವನ್ನಾಗಿ ಮಾರ್ಪಡಿಸಿದೆ.

---

## ಮೂರನೆಯ ಪರಿಚ್ಛೇದ

### ಪ್ರಾಕಾರೋಲ್ಲಂಘನ

ಆ ಸಮಯದಲ್ಲಿ, ಒಂದೇ ಖಾನೆಯೊಳಗೆ, ಪೂರ್ವದಿಕ್ಕಿನ ಎತ್ತರವಾದ ಪ್ರಾಕಾರಕ್ಕೆ ಸ್ವಲ್ಪ ದೂರದಲ್ಲಿ, ಒಂದು ಆಲದ ಮರದ ಕೆಳಗೆ, ಫೂಲಸಾಹೇಬನೂ ಜುಮಲೆಯೂ ನಿಂತುಕೊಂಡಿದ್ದರು. ಯಾರ ಬಾಯಲ್ಲಿಯೂ ಮಾತಿಲ್ಲ. ಇಬ್ಬರೂ ಚಿಂತಾಮಗ್ನರಾಗಿದ್ದರು. ಹೇಗಾದರೂ ಮಾಡಿ, ತಮಗೆ ಪ್ರತಿಬಂಧಕವಾಗಿರುವ ಆ ಗೋಡೆಯನ್ನು ದಾಟಿದನಂತರ ತಾನೇ ಅವರು ನಿರಾಪದರು! ನಾಲ್ಕು ಕಡೆಯೂ ಗೋಡೆಯಮೇಲೆ ಶಸ್ತ್ರಧಾರಿಗಳಾದ ಪ್ರಹರಿಗಳು ತಲೆ ತಗ್ಗಿಸಿಕೊಂಡು ಬೇಗಬೇಗನೆ ತಿರುಗುತ್ತಾ ಪಹರೆ ಕೊಡುತ್ತಿದ್ದಾರೆ. ಮೇಲೆ ಮಳೆಯು ಧಾರೆಯಾಗಿ ಸುರಿಯುತ್ತಿದೆ. ಭಯಂಕರವಾದ ಬಿರುಗಾಳಿಯು ಅವರನ್ನು ಕೆಳಕ್ಕೆ ಕೆಡಹುವಷ್ಟು ಬಿರುಸಾಗಿ ಬೀಸುತ್ತಿದೆ. ಆದರೂ ಪ್ರಭುಭಕ್ತರಾದ ಪ್ರಹರಿಗಳು ಕರ್ತವ್ಯ ಪರಾಙ್ಮುಖರಾಗದೆ ಅಡಿಗಡಿಗೆ ಗಗನಭೇದಿಯಾದ ಕಂಠದಿಂದ 'ಜುಡೀದಾರ್‌ಹೋ' ಎಂದು ಮುಂತಾಗಿ ಹೇಳಿ ತಂತಮ್ಮ ಹಾಜರಿಯನ್ನು ಸ್ಥಿರಪಡಿಸಿಕೊಳ್ಳುತ್ತಿದ್ದಾರೆ.

ಅದೇ ಸಮಯದಲ್ಲಿ ಖೈದಿಗಳೆಲ್ಲರೂ ತಮತಮಗೆ ನೇಮಕವಾಗಿದ್ದ ಕೊಠಡಿಗಳಲ್ಲಿ ನಿರ್ಬಂಧಿಸಲ್ಪಟ್ಟಿದ್ದರು. ಅವರು, ಹಗಲೆಲ್ಲಾ ಮೈ ಮುರಿಯ ಕೆಲಸಮಾಡಿದ್ದರಾದುದರಿಂದ, ಆ ಸಮಯದಲ್ಲಿ ಅವರುಗಳು ಎಚ್ಚರವಾಗಿರುವ ಸಂಭವ ತೋರಲಿಲ್ಲ. ಆದರೂ ಪ್ರಹರಿಗಳು ಇಂದು ಇಷ್ಟು ಜಾಗರೂಕರಾಗಿರಲು ಕಾರಣವೇನಿದ್ದೀತು ? ಕೇವಲ ಆ ಧೂರ್ತ ಶಿರೋಮಣಿಯಾದ ಫೂಲಸಾಹೇಬನಿಗೋಸ್ಕರವಾಗಿ ಆ ಬಿರುಗಾಳಿ ಮಳೆಗಳಿಗೆಲ್ಲಾ ತಲೆಯೊಡ್ಡಿಕೊಂಡು, ಇಂತಹ ದುರ್ಯೋಗದಲ್ಲಿ ಕೂಡ ಕರ್ತವ್ಯಭ್ರಷ್ಟರಾಗುವುದು ಅನುಚಿತವೆಂದು ಭಾವಿಸಿ, ಪ್ರಾಕಾರದ ಗೋಡೆಯಮೇಲೆ ಬಹು ಜಾಗರೂಕರಾಗಿ ಬೇಗ ಬೇಗ ಸುತ್ತುತ್ತಾ ಪಹರೆ ಕೊಡುತ್ತಿದ್ದಾರೆ.

ಆ ವೇಳೆಗೆ ಸರಿಯಾಗಿ ಬಂದೀಖಾನೆಯ ಗಡಿಯಾರದಲ್ಲಿ ಒಂದು ಗಂಟೆ ಹೊಡೆಯಿತು. ಪೂರ್ವದಿಕ್ಕಿನ ಗೋಡೆಯ ಮೇಲೆ ಪಹರೆ ಕೊಡುತ್ತಿದ್ದವನು ಅಭ್ರಭೇದೀ ಕಂಠದಿಂದ "ಜುಡೀದಾರ್‌ಹೋ" ಎಂದು ಕೂಗಿ ಇತರ ದಿಕ್ಕುಗಳಲ್ಲಿದ್ದ ಪಹರೆಯವರನ್ನು ಎಚ್ಚರಿಸಿದನು. ಕೂಡಲೇ ಇನ್ನೊಂದು ದಿಕ್ಕಿನ ಪ್ರಹರಿಯು ತನ್ನ ತೀವ್ರತರ ಕಂಠದಿಂದ ಮೊದಲಿನವನಂತೆಯೇ ಕೂಗಿದನು. ಇದು ಮೊದಲನೆಯವನ ಕೂಗಿನ ಪ್ರತಿಧ್ವನಿಯೋ ಎನ್ನುವ ಹಾಗಿದ್ದಿತು. ಆಗ ಒಂದು ಕಡೆಯಿಂದ ಮತ್ತೊಂದು ಕಡೆಯವರೆಗೆ ಎಂದರೆ ಬಹು ದೂರದವರೆಗೂ ಅಚ್ಚ ಕಪ್ಪಾಗಿದ್ದ ನಿಶಾಗಗನವು ಆ ಧ್ವನಿಯ ದೆಸೆಯಿಂದ ಪರಿಪೂರ್ಣವಾಯಿತು.

ಅದನ್ನು ಕೇಳಿ ಫೂಲಸಾಹೇಬನಿಗೆ ನಗೆ ಬಂತು ; ಅವನು ಒಂದು ಸಲ ನಕ್ಕು—ಜುಮಲೆ, ನಾವು ಸರಿಯಾದ ಸಮಯಕ್ಕೇ ಬಂದೆವು. ಗೋರಾಚಾಂದನು ತನ್ನ ಕರ್ತವ್ಯವನ್ನು ಮರೆಯದಿರುವುದಾದರೆ ಈ ಸಮಯದಲ್ಲಿ ನಾವು ಬಹು ಬೇಗನೆ ಬಿಡುಗಡೆ ಹೊಂದುತ್ತೇವೆ ; ನಾಳೆಯ ಮೊದಲು ಅರಿಂದಮನು ಪರಾರಿಗಳಾದ ಖೈದಿಗಳನ್ನು ಹುಡುಕುತ್ತಾ ಅಲೆದಾಡುವನು !—ಎಂದು ಹೇಳಿದನು. ಕಡೆಯ ಒಂದೆರಡು

ಮಾತುಗಳು, ಮಂತ್ರೌಷಧಗಳ ಕಟ್ಟಿಗೆ ಸಿಕ್ಕಿ ಹತವೀರ್ಯನಾಗಿರುವ ಭಯಂಕರ ಸರ್ಪದ ಘರ್ಜನೆಯಂತೆ ಫೂಲಸಾಹೇಬನ ಬಾಯಿಂದ ಬಂದವೇ ಹೊರತು, ಸಾಧಾರಣ ಮನುಷ್ಯನ ಮುಖದಿಂದ ಬಂದ ಮಾತು ಗಳಂತೆ ತೋರಲಿಲ್ಲ. ಆ ಸಮಯದಲ್ಲಿ, ಆ ಅಂಧಕಾರ ಮಧ್ಯದಲ್ಲಿ, ಯಾವುದಾದರೊಂದು ರೀತಿಯಿಂದ, ಫೂಲಸಾಹೇಬನ ಮುಖವನ್ನು ಯಾರಾದರೂ ನೋಡಿದ್ದ ಪಕ್ಷದಲ್ಲಿ,—ಪಾತಕ! ಆಗಲೂ ಆ ದಾನವ ಪ್ರಕೃತಿಯವನ ಬಾಯಲ್ಲಿ ಅಮಂಗಳಕರವಾದ ಅದೇ ಭೀಷಣತೆ ಮತ್ತು ಮಾರ್ದವಗಳ ಸಂಮಿಶ್ರಣವಾಗಿ, ಅಪೂರ್ವ ರಹಸ್ಯಮಯ ವಾದ, ಸಂಪೂರ್ಣವಾಗಿಯೂ ಅಶುಭಸೂಚಕವಾದ, ಬಹು ಭಯಂಕರ ವಾದ ನಗೆಯು ತೋರುತಲಿದ್ದಿತು.

ನಿಶ್ಶಬ್ದವಾಗಿ ಹೆಜ್ಜೆಗಳನ್ನಿಡುತ್ತಾ, ಗಟ್ಟಿಯಾಗಿ ಉಸಿರಾಡಿಸದೆ, ಜುಮಲೆಯನ್ನೂ ಸಂಗಡ ಕರೆದುಕೊಂಡು, ಮೆಲ್ಲ ಮೆಲ್ಲಗೆ ಗೋಡೆಯ ಹತ್ತಿರ ಬಂದು ನಿಂತನು. ಮಸೀಮಯವಾದ ಆ ಕಗ್ಗತ್ತಲಿನಲ್ಲಿ ಪ್ರಹರಿಯು ಅವರನ್ನು ನೋಡಲಿಲ್ಲ. ಅವನು ಅವರ ತಲೆಗೆ ಮೇಲ್ಭಾಗ ವಾಗಿ ಒಂದು ಕಡೆಯಿಂದ ಮತ್ತೊಂದು ಕಡೆಗೆ ಹೊರಟುಹೋದನು. ಪ್ರಹರಿಯು ಸ್ವಲ್ಪ ದೂರ ಹೋದಮೇಲೆ ಫೂಲಸಾಹೇಬನು ಒಂದು ಚೂರು ಇಟ್ಟಿಗೆಯನ್ನು ತೆಗೆದುಕೊಂಡು ಗೋಡೆಯ ಮೇಲೆ ಮೆತ್ತ ಮೆತ್ತಗೆ ಹೊಡೆದು ಹಾಗೆಯೇ ಗೋಡೆಯಮೇಲೆ ಕಿವಿಯನ್ನಿಟ್ಟು ಕೇಳಿದನು. ಆಗ ಹೊರಗಡೆಯಿಂದ ಅದೇರೀತಿಯಾದ ಮೃದುಸ್ವರವು ಕೇಳಿಸಿತು. ಕೇಳಿದೊಡನೆ ಫೂಲಸಾಹೇಬನ ಹೃದಯದಲ್ಲಿ ಸಂತೋಷವು ತುಂಬಿತು; ಮುಖವು ಪ್ರಸನ್ನವಾಗಿಯೂ ಪ್ರಫುಲ್ಲವಾಗಿಯೂ ಆಯಿತು. ಫೂಲಸಾಹೇಬನು ಮೊದಲಿನಂತೆಯೇ ಪುನಃ ಶಬ್ದಮಾಡಿ, ಜುಮಲೆ ಯನ್ನು ಕುರಿತು,—ಗೋರಾಚಾಂದನು ಮರೆತಿಲ್ಲ, ಬಂದಿದ್ದಾನೆ. ಇನ್ನು ಭಯವಿಲ್ಲ. ಹೇಗಾದರೂ ಮಾಡಿ ಒಂದು ಸಲ ಗೋಡೆಯಮೇಲೆ ಹತ್ತಿದರೆ ಸಾಕು; ಅರಿಂದಮನು ಯೋಗೇಂದ್ರನಾಥನೊಂದಿಗೆ, ಫೂಲ ಸಾಹೇಬನನ್ನು ಕೆಣಕಿದ್ದು ಸರಿಯಾದ ಕೆಲಸವಾಗಲಿಲ್ಲ—ಎಂದು ಹೇಳಿ

ಅಸಮಾಧಾನಪಡುವನು. ಮೇಲಾಗಿ, ಹೇಗಾದರೂ ಮಾಡಿ ಫೂಲಸಾಹೇಬನು ತನ್ನ ಪ್ರತಿಜ್ಞೆಯನ್ನು ಅಕ್ಷರಶಃ ಪೂರ್ತಿ ಮಾಡಿಕೊಳ್ಳುವನೆಂದು ಅವರಿಬ್ಬರೂ ತಿಳಿಯುವರು. ಇನ್ನೂ ಅವರಿಗೆ ಫೂಲಸಾಹೇಬನ ವಿಷಯವು ಚೆನ್ನಾಗಿ ತಿಳಿಯದು. ಆದರಿಂದಲೇ ಅವರ ಮೂರ್ಖತೆಯು ಹಠಾತ್ತಾಗಿ, ಮೇರೆಮೀರಿ, ಹೀಗೆ ಪರಿಣಾಮಗೊಂಡಿತು.—ಎಂದು ಹೇಳಿದನು.

ಈ ಸಮಯದಲ್ಲಿ ಗೋರಾಚಾಂದನಿಂದ ಏನು ಉಪಕಾರವಾದೀತೋ ಗೊತ್ತಾಗಲಿಲ್ಲ—ಎಂದು ಜುಮಲೆಯು ಮೃದು ಸ್ವರದಿಂದ ಹೇಳಿದಳು.

ಫೂಲಸಾಹೇಬನೂ ಸಹ, ಹಾಗೆಯೇ ಮೃದು ಸ್ವರದಿಂದ—ಒಂದು ವೇಳೆ ನಾನು ಯಾವಾಗಲಾದರೂ ಈ ಸೆರೆಮನೆಯಲ್ಲಿ ನಿರ್ಬಂಧಿಸಲ್ಪಟ್ಟದ್ದೇ ಆದರೆ, ಅವನು ಪ್ರತಿ ರಾತ್ರಿಯೂ, ರಾತ್ರಿ ಒಂದು ಗಂಟೆಯ ನಂತರ, ಈ ಪಕ್ಕಿನ ಗೋಡೆಯಮೇಲೆ ಒಂದು ಹಗ್ಗವನ್ನು ಇಳೀ ಬಿಟ್ಟಿರಬೇಕೆಂದು ಈ ಮೊದಲೇ ಎಚ್ಚರಿಸಿದ್ದೇನು—ಎಂದನು.

ಈ ಮಾತು ಮುಗಿಯುವಷ್ಟರಲ್ಲಿಯೇ, ಹಡಗಿಗೆ ಕಟ್ಟುವಂತಹ ದಪ್ಪನಾದ ಹಗ್ಗವೊಂದು ಮೇಲ್ಗಡೆಯಿಂದ ಬಂದು ಅವರ ಹತ್ತಿರ ಧುಪ್ ಎಂದು ಬಿದ್ದಿತು. ಫೂಲಸಾಹೇಬನು ಆ ಹಗ್ಗವನ್ನು ಹಿಡಿದು ಒಂದು ಸಲ ಬಲವಾಗಿ ಎಳೆದು ನೋಡಿದನು; ಹಗ್ಗದ ಮತ್ತೊಂದು ಕೊನೆಯು ಗೋಡೆಯಿಂದಾಚೆ ಇದ್ದಿತು; ಹೊರಗಡೆಯಿಂದಲೂ ಒಂದು ಸಲ ಹಗ್ಗವು ಎಳೆಯಲ್ಪಟ್ಟಿತು. ಅನಂತರ ಫೂಲಸಾಹೇಬನು ಹಗ್ಗದ ತುದಿಯನ್ನು ಹತ್ತಿರದಲ್ಲಿಯೇ ಇದ್ದ ಒಂದು ಮರದ ಬುಡಕ್ಕೆ ಬಿಗಿದನು; ಇದಾದಮೇಲೆ, ತನ್ನ ನಡುಕಟ್ಟನ್ನು ಹಿಡಿದುಕೊಳ್ಳುವಂತೆ ಜುಮಲೆಗೆ ಹೇಳಿ, ಜುಮಲೆಯನ್ನೂ ಹೊತ್ತುಕೊಂಡು, ಹಗ್ಗವನ್ನು ಹಿಡಿದು ನಿಧಾನವಾಗಿ ಹತ್ತಲಾರಂಭಿಸಿದನು. ಜುಮಲೆಯು ಪ್ರಾಣಭಯದಿಂದ ಫೂಲಸಾಹೇಬನ ಕಟಿಪ್ರದೇಶವನ್ನು ಎರಡು ಕೈಗಳಿಂದಲೂ ಬಲವಾಗಿ ತಬ್ಬಿ ಹಿಡಿದುಕೊಂಡಿದ್ದಾಳೆ!

ಫೂಲಸಾಹೇಬನು ಜುಮಲೆಯನ್ನು ಹೊತ್ತುಕೊಂಡು ಮೊದ ಮೊದಲು ನಿಧಾನವಾಗಿ, ಅನಂತರ ವೇಗವಾಗಿ, ತದನಂತರ ಇನ್ನೂ ವೇಗ ಮತ್ತೂ ವೇಗ, ಅದಕ್ಕಿಂತಲೂ ವೇಗವಾಗಿ ಗೋಡೆಯ ಮೇಲಕ್ಕೆ ಏರುತ್ತಿದ್ದನು. ಬಹಳ ಎತ್ತರವಾದ ಆ ಗೋಡೆಯ ಮೇಲ್ಭಾಗದ ಅಂಚನ್ನು ಸೇರಿದಾಗ ನೋಡಿದನು. ಮೇಲ್ಗಡೆ ಪಹರೆ ಕೊಡುತ್ತಿದ್ದ ಪ್ರಹರಿಯು ಮತ್ತೊಂದು ಕಡೆಯಿಂದ ಬೇಗ ಬೇಗನೆ ಹಿಂದಿರುಗಿ ಬರುತ್ತಲಿದ್ದಾನೆ!

ಆಗ ಫೂಲಸಾಹೇಬನಿಗೆ ತಲೆ ತಿರುಗಿದ ಹಾಗಾಯಿತು; ಭಯ ವಾಯಿತು. ತನ್ನ ಪ್ರಯತ್ನಗಳೆಲ್ಲವೂ ಅಲ್ಲಿಯೇ ವ್ಯರ್ಥವಾಗುವಂತೆ ತೋರಿತು. ದಡದ ಹತ್ತಿರಕ್ಕೆ ಬಂದಾಗ ಹಡಗು ಮುಳುಗಿದಹಾಗೆ—ಅದ ಕ್ಕಿಂತಲೂ ಪರಿತಾಪಕರವಾದ ವಿಚಾರವು ಯಾವುದುಂಟು? ಹಾಸ್ಯ ಮಯವಾಗಿದ್ದ ಫೂಲಸಾಹೇಬನ ಮುಖವು ಹಾಸ್ಯಶೂನ್ಯವಾಗಿ ಬಾಡಿ ದುದು ಇಂದೇ ಮೊದಲು. ಆಗ ಅವನು ಒಂದು ಕೈಮೇಲೆ ತನ್ನ ಮತ್ತೂ ಜುಮಲೆಯ ಭಾರವನ್ನು ವಹಿಸಿ ಮತ್ತೊಂದು ಕೈಯಿಂದ ನಡುವಿನಲ್ಲಿ ಸಿಕ್ಕಿಸಿಕೊಂಡಿದ್ದ ನನೀನನ್ನು ಭದ್ರವಾಗಿ ಹಿಡಿದು ಕೊಂಡನು. ಎರಡು ದೇಹಗಳ ಭಾರವನ್ನು ಒಂದು ಕೈಯಿಂದ ವಹಿಸಿ ಒಂದು ಕ್ಷಣಕಾಲವಿರುವುದಾದರೂ ಬಹು ಪ್ರಯಾಸವಾಗುವುದೆಂದು ನಾವು ಊಹಿಸುತ್ತೇವೆ; ಆದರೆ ಫೂಲಸಾಹೇಬನಂತಹ ಶಕ್ತಿ—ಸಾಹಸ ಪರನಾದವನಿಗೆ ಇದೊಂದು ಕಠಿಣ ಕೆಲಸವೆಂದು ತೋರಲಾರದು. ಪ್ರಹರೀ ಮಹಾಶಯನು ಹಗ್ಗವನ್ನು ನೋಡಬಹುದೆಂಬ ಭಯವು ಫೂಲಸಾಹೇಬನಿಗೂ ಇದ್ದಿತು. ಒಂದು ವೇಳೆ ಕತ್ತಲೆಯಲ್ಲಿ ಕಾಣಿಸದೆ ಹೋದರೂ, ನಡೆದು ಹೋಗುವಾಗ ಕಾಲಿಗೆ ತೊಡರಿದರೆ ಏನಾಗಬೇಕು! ಹಾಗಾದಲ್ಲಿ? ಹಾಗಾದಲ್ಲಿ ಒಡನೆಯೇ ತೀಕ್ಷ್ಣಾಗ್ರವಾದ ಈ ನನೀನನ್ನು ಪ್ರಹರಿಯ ವಕ್ಷದಲ್ಲಿ ಪೂರ್ಣವಾಗಿ ನಟ್ಟುಬಿಡುವನು. ಅನಂತರ ಹಣೆಯಲ್ಲಿ ಬರೆದಂತೆ ಆಗುವುದು. ಕೈಲಾಗದವನ ಹಾಗೆ, ಪ್ರಯತ್ನಪಡದೆ, ಸುಲಭವಾಗಿ ಬಂದಿಯಾಗುವುದು ಕೇವಲ ಹೇಡಿತನ. ಹೀಗೆಲ್ಲಾ ಆಲೋಚಿಸುತ್ತಾ ಫೂಲಸಾಹೇಬನು ಆ ಮೊನೆಯಾದ

ನನ್ನನ್ನು ಹಿಡಿದುಕೊಂಡು ಪ್ರಹರಿಯನ್ನು—ಪ್ರಹರಿಯನ್ನು ಮಾತ್ರವೇ ಅಲ್ಲ—ಒಂದು ವಿಸತ್ಸಮೂಹವನ್ನೇ, ಭಯಂಕರವಾದೊಂದು ದುರ್ಘಟನೆ ಯನ್ನೇ, ಇದಿರು ನೋಡುತ್ತಿದ್ದನು.

ತನ್ನ ಅಜಾಗರೂಕತೆಯಿಂದಲೋ, ಅಥವಾ ಫೂಲಸಾಹೇಬನ ಸೌಭಾಗ್ಯ ವಶದಿಂದಲೋ, ಪ್ರಹರಿಯು ಹಗ್ಗವನ್ನು ದಾಟಿಕೊಂಡು ಹೊರಟೇ ಹೋದನು.

ಪಥವು ಪರಿಷ್ಕಾರವಾಯಿತು. ಫೂಲಸಾಹೇಬನು ಆ ನನ್ನನ್ನು ಹಲ್ಲಿನಲ್ಲಿ ಕಚ್ಚಿ ಹಿಡಿದುಕೊಂಡು, ಪುನಃ ಗೋಡೆಯನ್ನೇರಲಾರಂಭಿ ಸಿದನು. ಬಹಳ ದೂರ ಹತ್ತಬೇಕಾಗಿರಲಿಲ್ಲ; ಸುಮಾರು ಐದು ಮೊಳಗಳ ದೂರ ಹತ್ತಿದರೆ ಗೋಡೆಯು ಮೇಲಕ್ಕೆ ಹೋಗಬಹುದಾಗಿದ್ದಿತು. ಎರಡು ಮೂರು ಸಲ ಕೈಗಳನ್ನು ಆಡಿಸುವುದರೊಳಗಾಗಿ ಅವನು ಗೋಡೆಯನ್ನೇರಿ ಹಾಗೆಯೇ ಮತ್ತೊಂದು ಕಡೆಯಿಂದ ಇಳಿಯುತ್ತಲೂ ಇದ್ದನು. ಜುಮಲೆಯು ಮೊದಲಿನಂತೆಯೇ ಫೂಲಸಾಹೇಬನ ನಡು ಕಟ್ಟನ್ನು ಹಿಡಿದುಕೊಂಡು ನೇತಾಡುತ್ತಲೇ ಇದ್ದಾಳೆ!

ಫೂಲಸಾಹೇಬನು ಬಹಳ ದೂರದವರೆಗೂ ಇಳಿದು ಎರಡು ಮೂರು ಮೊಳಗಳ ದೂರ ಉಳಿದಿದ್ದಾಗ ದುಮ್ಮಿಕ್ಕಿದನು. ಅವನು ಧುಮಿಕಿದ ಕಡೆಯಲ್ಲಿ ಇಟ್ಟಿಗೆಯ ರಾಶಿ ಇದ್ದಿತು; ಅದರ ಮೇಲೆ ಅನೇಕ ಗಿಡಗಳು ಬೆಳೆದುಕೊಂಡಿದ್ದುವು. ಫೂಲಸಾಹೇಬನು ಧುಮುಕಿದ್ದರಿಂದ ಇಟ್ಟಿಗೆ ಗಳು ಒಂದಕ್ಕೊಂದು ತಗಲಿ ಕಸ ಕಡ್ಡಿಗಳ ಮೇಲೆ ಬಿದ್ದು ಸ್ವಲ್ಪ ಶಬ್ದ ವಾಯಿತು. ಶಬ್ದವು ಬಹಳವಾಗಿ ಆಗದಿದ್ದರೂ ಶಬ್ದವೇನೋ ಪ್ರಹರಿಯ ಕಿವಿಗೂ ಕೇಳಿಸಿತು. ಅವನು ಹಿಂದಿರುಗಿ ನಿಂತುಕೊಂಡನು. ಯಾವಲ್ಲಿ ಶಬ್ದವಾಯಿತೆಂಬುದನ್ನು ನಿರ್ದೇಶಮಾಡಲರಿಯದೇ ಪ್ರಹರಿಯು ಅಲ್ಲಿಯೇ ಕುಳಿತು ಕುತೂಹಲಪೂರ್ಣ ದೃಷ್ಟಿಯಿಂದ ನಿಮ್ನ ಭಾಗವನ್ನು ನೋಡುತ್ತಿದ್ದನು. ಆ ಅಂಧಕಾರದಲ್ಲಿ ಅವನ ದೃಷ್ಟಿಯು ಅಷ್ಟು ದೂರ ಪ್ರವೇಶ ಮಾಡಲಿಲ್ಲ. ಆದರೂ ಪ್ರಹರಿಯು ಅಲ್ಲಿಯೇ ಬಗ್ಗಿ ಕುಳಿತು ತನ್ನ ದೃಷ್ಟಿಶಕ್ತಿಯ ಮೇಲೆ ಸಾಧ್ಯವಾದಷ್ಟು ಬಲಪ್ರಯೋಗ ಮಾಡು

ತ್ತಿದ್ದನು. ಅಂಧಕಾರವು, ತಳಭಾಗದಲ್ಲಿ ನಿಬಿಡವಾಗಿದ್ದಂತೆ, ಆವರಣ ರಹಿತವಾದ ಮೇಲ್ಭಾಗದಲ್ಲಿರಲಿಲ್ಲ. ಆದುದರಿಂದ, ಫೂಲಸಾಹೇಬನು ಅಲ್ಲಿಯೇ ಅದೃಶ್ಯನಾಗಿದ್ದುಕೊಂಡು ಪ್ರಹರಿಯ ಭಾವಭಂಗಿಗಳನ್ನು ಚೆನ್ನಾಗಿ ನೋಡುತ್ತಾ ಅವನ ಅಭಿಪ್ರಾಯವನ್ನು ಊಹಿಸಿದನು.

---

## ನಾಲ್ಕನೆಯ ಪರಿಚ್ಛೇದ

### ಪ್ರಹರಿಯ ಕೊಲೆ

ಫೂಲಸಾಹೇಬನು, ಪುನಃ ಗೋಡೆಯನ್ನು ಹತ್ತಿ, ಪ್ರಹರಿ ಇದ್ದಲ್ಲಿಗೆ ಹೋದನು. ಅವನ ಕೈಯಲ್ಲಿ ಹರಿತವಾದ ಬಾಕು ಇದ್ದಿತು. ಅವನು ನಿಶ್ಶಬ್ದವಾಗಿ ಪ್ರಹರಿಯ ಪಾರ್ಶ್ವದಲ್ಲಿ ನಿಂತುಕೊಂಡು ಒಂದೇ ತಡವೆಗೆ ಅವನ ಕುತ್ತಿಗೆಯನ್ನು ಅದುಮಿ ಹಿಡಿದನು. ಪ್ರಹರಿಗೆ ಕೂಗಿಕೊಳ್ಳು ವುದಕ್ಕೂ ಆಗಲಿಲ್ಲ; ಅಷ್ಟರೊಳಗಾಗಿ ಅವನಿಗೆ ಉಸಿರು ಕಟ್ಟಿತು. ಪ್ರಹರಿಯನ್ನು ಆ ಅವಸ್ಥೆಯಲ್ಲಿಟ್ಟು, ಫೂಲಸಾಹೇಬನು ಮತ್ತೊಂದು ಕೈಯೊಳಗಿದ್ದ ಭರ್ಜಿಯನ್ನು ಆಮೂಲಾಗ್ರವಾಗಿ ಪ್ರಹರಿಯ ವಕ್ಷದಲ್ಲಿ ನಟ್ಟನು. ಪ್ರಹರಿಯು ಯಾತನೆಯಿಂದ ಒದೆದಾಡಿದನು. ಪ್ರಹರಿಯು ಕೈಕಾಲು ಬಡಿವುದರಿಂದ ಗೋಡೆಯ ಮೇಲೆ 'ದುಂ–ದುಂ' ಎಂದು ಶಬ್ದವಾಗುತ್ತಿರುವುದನ್ನು ನೋಡಿ, ಫೂಲಸಾಹೇಬನು ಎಡದ ಕೈಯಲ್ಲಿ ಅವನ ಕುತ್ತಿಗೆಯನ್ನು ಹಿಡಿದು ಅವನನ್ನು ನೇತಾಡುತ್ತಿರುವಂತೆ ಎತ್ತಿ ಹಿಡಿದು, ಮತ್ತೊಂದು ಕೈಯಿಂದ ಅವನ ಎದೆಯ ಮೇಲೆ ಭರ್ಜಿಯಿಂದ ಬಾರಿಬಾರಿಗೂ ಬಲವಾಗಿ ಹೊಡೆಯತೊಡಗಿದನು. ಪ್ರಹರಿಯ ಹೃದಯ ದಿಂದ ಹೊರಟ ರಕ್ತಧಾರೆಯು ಮಳೆಯ ನೀರಿನೊಂದಿಗೆ ಮಿಶ್ರವಾಗಿ ಗೋಡೆಯನ್ನು ನೆನೆಯಿಸಿತು.

ಆ ಸಮಯದಲ್ಲಿ, ಫೂಲಸಾಹೇಬನ ಆ ಭ್ರೂಕುಟಿ ಕುಟಿಲ ಮುಖ ದಲ್ಲಿ, ಆಮಂಗಳವೂ ಭೀಷಣವೂ ಮತ್ತೂ ಮಾರ್ದವವೂ ಬೆರತ ತೀವ್ರತರವಾದ ಆ ನಗೆ ತಲೆದೋರಿತು. ಫೂಲಸಾಹೇಬನು ಮಾನವ ರೂಪಿನ ಪಿಶಾಚ! ಆ ಪಿಶಾಚಕ್ಕೆ ಎಲ್ಲವೂ ಸಾಧ್ಯ.

ಸ್ವಲ್ಪ ಹೊತ್ತಿನೊಳಗಾಗಿಯೇ ಪ್ರಹರಿಯು ಸತ್ತನು. ಫೂಲಸಾಹೇಬನು ಅವನನ್ನು ಆ ಗೋಡೆಯ ಮೇಲೆ ಮಲಗಿಸಿದನು. ಅವನ ವಕ್ಷದಲ್ಲಿ ನಾಟಿದ್ದ ಬಾಕನ್ನು ಎಳೆದು, ಅದನ್ನು ಅವನ ರಕ್ತದಲ್ಲಿಯೇ ತೊಯಿದಿದ್ದ ಬಟ್ಟೆಯಲ್ಲಿ ಒರಸಿ ತೆಗೆದುಕೊಂಡನು. ಪ್ರಹರಿಯ ನಡುವಿನಲ್ಲಿ ಉಜ್ವಲವಾದ ಒಂದು ಚೂರಿಯಿದ್ದಿತು. ಅದನ್ನೂ ತೆಗೆದುಕೊಂಡನು. ಅನಂತರ, ಬೇಗ ಬೇಗನೆ, ಮೊದಲಿನಂತೆಯೇ ಹಗ್ಗದ ಮೂಲಕ, ಶಂಕೆ ಇಲ್ಲದೆ ಇಳಿದುಬಂದನು.

ಅವನು ಇಳಿದುಬರುತ್ತಲೇ ಗೋರಾಚಾಂದನು ಅವನ ಇದಿರಿಗೆ ಒಂದು ಬಟ್ಟೆಯ ಗಂಟನ್ನಿಟ್ಟನು. ಫೂಲಸಾಹೇಬನು ಉಡಿಗೆಗಳನ್ನೆಲ್ಲಾ ಚೆನ್ನಾಗಿ ಬದಲಾಯಿಸಿಕೊಂಡು, ಗೋರಾಚಾಂದನನ್ನು ನೋಡಿ —ನೀನು ಇಲ್ಲಿಯೇ ಇರು; ಇಲ್ಲಿ ಏನಾಯಿತೆಂಬುದನ್ನು ತಿಳಿದು ನಾಳೆ ವರ್ತಮಾನಕೊಡು. ನಾನು ಜುಮೆಲಿಯನ್ನು ಕರೆದುಕೊಂಡು ಈಗಲೇ ಪಲಾಶೀಯುರ ತೋಟದ ಮನೆಗೆ ಹೋಗುತ್ತೇನೆ. ಆ ಸ್ಥಳದಲ್ಲಿ ಬಂದು ನೋಡು; ಕಾಣಬಹುದು—ಎಂದನು.

ಗೋರಾಚಾಂದ—ಈ ಪ್ರವಾಹದ ಕಾಲದಲ್ಲಿ!—ಗಂಗೆಯು ಎರಡು ದಡಗಳನ್ನೂ ಕಟ್ಟಿ ಹರಿಯುತ್ತಿದೆ. ದಾಟಿ ಹೋಗುವುದು ಹೇಗೆ? ತಾವು ದಾಟಿದರೂ ದಾಟಬಹುದು; ಆದರೆ ಜುಮೆಲಿಯನ್ನು ಸಂಗಡ ಕರೆದುಕೊಂಡು ಹೋಗುವುದು ಸಾಧ್ಯವೆ?

ಫೂಲಸಾಹೇಬನು—(ಬೇಸರಗೊಂಡು) ಅದನ್ನು ಕುರಿತು ನೀನು ಯೋಚಿಸಬೇಕಾದುದಿಲ್ಲ. ನನ್ನ ಕೆಲಸಗಳು ನನಗೆ ಗೊತ್ತುಂಟು. ನಿನಗೆ ಹೇಳಿದುದನ್ನು ಮಾತ್ರ ನೀನು ನಡೆಯಿಸು. ಈಗ ಹೆಚ್ಚು ಹೇಳಲು ಅವಕಾಶವಿಲ್ಲ.

"ಅಪ್ಪಣೆ" ಎಂದು ಗೋರಾಚಾಂದನು ಅಲ್ಲಿಂದ ಹೊರಟು ಹೋದನು.

———

# ಐದನೆಯ ಪರಿಚ್ಛೇದ

## ಗಂಗಾವಕ್ಷದಲ್ಲಿ

ಇದಿರಾಗಿ ಗಂಗಾನದಿ; ಮಳೆಗಾಲದಲ್ಲಿ ಅಗಾಧವಾದ ಜಲರಾಶಿಯು ಎರಡು ದಡಗಳಲ್ಲಿಯೂ ಪೂರ್ಣರೂಪಿನಿಂದ ಹರಿಯುತ್ತಲಿದೆ. ಫೂಲಸಾಹೇಬನು ಜುಮಲೆಯನ್ನು ಕರೆದುಕೊಂಡು ಗಂಗಾತೀರಕ್ಕೆ ಬಂದು ನಿಂತನು. ಬಿರುಗಾಳಿ–ಮಳೆಗಳ ದೆಸೆಯಿಂದ ಪ್ರವಾಹ ವೇಗವು ದ್ವಿಗುಣಿತವಾಗಿ, ತರಂಗಮಾಲೆಯಿಂದೊಡಗೂಡಿ, ಕಟ್ಟು ಹರಿದ ಹುಚ್ಚನಹಾಗೆ ತಾನೇತಾನಾಗಿ ಪ್ರವಹಿಸುತ್ತಲಿದೆ. ಅಲೆಗಳು ಸಬಲವಾಗಿಯೂ ವೇಗಸಹಿತವಾಗಿಯೂ ಬಂದು ತೀರಕ್ಕೆ ಅಪ್ಪಳಿಸಿ ಹೊಡೆಯುತ್ತಿವೆ. ಅಚ್ಚ ಕಪ್ಪಾದ ಮೇಘಗಳ ಛಾಯೆಯಿಂದಲೂ ನಿಬಿಡವಾದ ಅಂಧಕಾರದ ಛಾಯೆಯಿಂದಲೂ, ನಿರ್ಮಲವೂ ಪರಿಶುಭ್ರವೂ ಆದ ಗಂಗಾವಕ್ಷವು ಮಸೀಮಯವಾಗಿ ಕಾಣಿಸುತ್ತಿದೆ. ಹಾಗೆ ಮಸೀಮಯವಾಗಿ ಕತ್ತಲೆಯೇ ಪ್ರತ್ಯಕ್ಷವಾದಂತೆ ಇರುವ ಗಂಗಾವಕ್ಷದಲ್ಲಿ ಸಾವಿರಾರು ಉತ್ಪಾತಗಳು ನರ್ತನ ಮಾಡುತ್ತಲಿವೆ. ಆ ಸ್ಥಳದಲ್ಲಿ ವಿರಾಮವಿಲ್ಲದಹಾಗೆ ಪ್ರವಾಹದ ಗರ್ಜನೆ; ಅದರೊಂದಿಗೆ ಉನ್ಮತ್ತ ವಾಯುವಿನ ಗರ್ಜನೆ; ಅದರೊಡನೆ ಬಿಡುವಿಲ್ಲದಂತೆ ಮಳೆಗರೆಯುವ ಮೇಘದ ಗರ್ಜನೆ. ಈ ಮೂರು ಬಗೆಯ ಗರ್ಜನೆಗಳೂ ಬೆರೆತು ಅನಂತವಾದ ಶೂನ್ಯತೆಯನ್ನು ಪೂರ್ಣಮಾಡಿವೆ.

ಫೂಲಸಾಹೇಬ ಮತ್ತು ಜುಮಲೆ–ಇವರಿಬ್ಬರೂ ತುಂಬಿ ಹರಿಯುತ್ತಿದ್ದ ಪ್ರವಾಹದಲ್ಲಿ ಧುಮುಕಿದರು. ಈಜುವುದರಲ್ಲಿ ಇಬ್ಬರೂ ಸಮರ್ಥರು; ಅಲೆಗಳನ್ನು ತಳ್ಳುತ್ತಾ, ಸುಳಿಗಳನ್ನು ಒಡೆಯುತ್ತಾ, ಪ್ರವಾಹಕ್ಕೆ ಅಡ್ಡಲಾಗಿ ಈಜುತ್ತಾ ಇದಿರ ದಡದ ಕಡೆಗೆ ಹಾದು ಹೋಗುತ್ತಲಿದ್ದರು. ಪ್ರವಾಹದ ವೇಗವು ಅವರನ್ನು ಅವರ ದಾರಿಯಿಂದ ತಪ್ಪಿಸಿ ಬಹುಮಟ್ಟಿಗೆ ತನ್ನ ದಾರಿಗೇ ಸೆಳೆದುಕೊಂಡು ಹೋಗುತ್ತಿದ್ದಿತು. ಸುಮಾರು ಪ್ರವಾಹಮಧ್ಯಕ್ಕೆ ಬರುವ ವೇಳೆಗೆ ಜುಮಲೆಯು ಅಶಕ್ತಳಾಗುತ್ತ ಬಂದಳು; ಅವಳಿಂದ ಮುಂದೆ ಈಜುವುದಾಗಲಿಲ್ಲ. ಅಲೆಯ

ಮೇಲೆ ಅಲೆ ಬಂದು ಅವಳ ಮುಖದಮೇಲೆ ಬಿದ್ದು ಅವಳನ್ನು ಬಹು ಮಟ್ಟಿಗೆ ಕಾತರಗೊಳಿಸಿದುವು. ಅವಳು ಪ್ರವಾಹಮುಖಕ್ಕೆ ಸಿಕ್ಕಿದುದರಿಂದ ಫೂಲಸಾಹೇಬನ ಸಾವಿಾಪ್ಯವನ್ನು ಬಿಟ್ಟು ಬಹುದೂರ ಹೋಗಿ ಬಿಟ್ಟಳು. ಫೂಲಸಾಹೇಬನು, ಚಿಮ್ಮುತ್ತ ಹೋಗಿ, ಅವಳನ್ನು ಹಿಡಿದುಕೊಂಡು,—ನೀನು ನನ್ನ ನಡುಕಟ್ಟನ್ನು ಹಿಡಿದುಕೊಂಡು ಬಾ—ಎಂದನು. ಜುಮಲೆ ಎರಡು ಕೈಗಳಿಂದಲೂ ಫೂಲಸಾಹೇಬನ ನಡುಕಟ್ಟನ್ನು ಹಿಡಿದುಕೊಂಡಳು. ಕ್ರಮ ಕ್ರಮವಾಗಿ ಫೂಲಸಾಹೇಬನ ಕೈಕಾಲುಗಳಲ್ಲಿಯೂ ತ್ರಾಣವು ಕುಗ್ಗಬರುತ್ತಿದ್ದಿತು; ಸದ್ಯಃ ಜುಮಲೆಯನ್ನು ಸಾಗಿಸಿಕೊಂಡು ಈಜುವುದು ಕಷ್ಟಕರವೆಂದು ಅವನಿಗೇ ತೋರಿತು. ಈಜುವುದರಲ್ಲಿ ಮೊದಲಿನಹಾಗೆ ಬಲಪ್ರಯೋಗ ಮಾಡಲಾರದೆ, ಪ್ರವಾಹಮುಖದಲ್ಲಿ ತೇಲುತ್ತಾ ಹೊರಟನು; ಹಾಗೆ ಹೋಗುತ್ತಿದ್ದ ಹಾಗೆಯೇ, ಬಹು ಪ್ರಯಾಸದಿಂದ, ಕೊಂಚ ಕೊಂಚವಾಗಿ ತೀರದ ಕಡೆಗೆ ಹೋಗುವ ಪ್ರಯತ್ನ ಮಾಡಿದನು. ಕ್ರಮೇಣ ಫೂಲಸಾಹೇಬನೂ ಬಹಳವಾಗಿ ಬಳಲಿ ಬುಸಬುಸನೆ ಏದುತ್ತಿದ್ದನು. ಅಲೆಗಳ ಹೊಡೆತದಿಂದ ಕಣ್ಣು ಮೂಗುಗಳಿಗೆಲ್ಲ ನೀರು ತುಂಬಿತು. ಈ ವೇಳೆಗೆ ಬಹುದೂರ ಬಂದಿದ್ದನು. ತೀರವು ಇನ್ನು ಬಹಳ ದೂರವಿಲ್ಲ—ಹೇಗಾದರೂ ಮಾಡಿ ಇನ್ನು ಸ್ವಲ್ಪದೂರ ಹೋದರೆ ಸಾಕು; ಆದರೆ, ಆ ಅಂಚಿನಲ್ಲಿ ನದಿಯ ಮಧ್ಯ ಭಾಗಕ್ಕಿಂತಲೂ ಹೆಚ್ಚಿನ ಸೆಳೆತ; ಅಲ್ಲಿ ಫೂಲಸಾಹೇಬನ ಪ್ರಯತ್ನಗಳೆಲ್ಲವೂ ಸಂಪೂರ್ಣವಾಗಿ ವ್ಯರ್ಥವಾದುವು. ಅಲ್ಲಿಯ ಸೆಳೆತವು ಅವರನ್ನು ಪ್ರಬಲ ವೇಗದಿಂದ ಒಂದು ಕಡೆಯಿಂದ ಮತ್ತೊಂದು ಕಡೆಗೆ ಸೆಳೆದುಕೊಂಡು ಹೊರಟಿತು. ಎಷ್ಟೇ ಪ್ರಯತ್ನ ಮಾಡಿದರೂ ಫೂಲಸಾಹೇಬನು ಒಂದು ಮೊಳದಷ್ಟು ದೂರವಾದರೂ ಮುಂದರಿಯಲಾರದೇ ಹೋದನು; ಬಾರಿಬಾರಿಗೂ ಬಲ ಪ್ರಯೋಗ ಮಾಡಿದ್ದುದರಿಂದ ಎರಡು ಕೈಗಳೂ ಒಟ್ಟಿಗೆ ಸೋತು ಕೆಲಸಮಾಡಲಾರದಂತಾಗಿದ್ದುವು. ಫೂಲಸಾಹೇಬನು ತೇಲುತಲಿದ್ದನು. ಬಹಳ ದೂರ ತೇಲುತ್ತ ಹೋದಮೇಲೆ ಹಠಾತ್ತಾಗಿ ಅವನಿಗೆ ಒಂದು ಆಶ್ರಯ ಸಿಕ್ಕಿತು. ದಡದ ಮೇಲಿದ್ದ ವಿಶಾಲವಾದೊಂದು ವಟವೃಕ್ಷವು ನದಿಯ ಕಡೆಗೆ

ಬಹಳವಾಗಿ ಬಾಗಿತ್ತು; ದೊಡ್ಡ ದೊಡ್ಡವಾದ ಅದರ ಶಾಖೆಗಳಿಂದ ಅನೇಕವಾಗಿ ಬಿಳಲುಗಳು ನದಿಯ ನೀರಿನವರೆಗೂ ಇಳಿಬಿದ್ದಿದ್ದುವು. ಆ ಬಿಳಲುಗಳನ್ನು ಹಿಡಿದುಕೊಂಡು ಫೂಲಸಾಹೇಬನು ಸಹಾಯವನ್ನು ಇದಿರು ನೋಡುತ್ತಿದ್ದನು. ಜುಮುಲೆಯು ಮೊದಲಿನ ಹಾಗೆಯೇ ಅವನ ನಡುಕಟ್ಟನ್ನು ಆಶ್ರಯಿಸಿಕೊಂಡಿದ್ದಳು. ಪ್ರಬಲವಾದ ಪ್ರವಾಹವು, ಅವರನ್ನು ಆ ಅವಲಂಬನದಿಂದ ತಪ್ಪಿಸುವುದಕ್ಕಾಗಿ, ಬಾರಿ ಬಾರಿಗೂ ಬಲವಾಗಿ ತಳ್ಳುತ್ತಾ ಅವರನ್ನು ದೂರಕ್ಕೆ ಎಸೆದುಬಿಡುವ ಪ್ರಯತ್ನ ಮಾಡುತ್ತಿದ್ದಿತು. ಆ ಬಿಳಲನ್ನು ದೃಢಮುಷ್ಟಿಯಿಂದ ಹಿಡಿದು ಕೊಂಡು ಫೂಲಸಾಹೇಬನು ಒಂದು ಬಗೆಯಾಗಿ ದಣುವಾರಿಸಿಕೊಳ್ಳು ತ್ತಿದ್ದನು. ಆ ಸಮಯದಲ್ಲಿ ಒಂದು ಸಲ ಕೈ ಬಿಟ್ಟಿದ್ದರೆ, ಫೂಲಸಾಹೇಬನು ಬಳಲಿದ್ದುದರಿಂದ,—ಅಲೆಗಳಿಂದೊಡಗೂಡಿ ನೊರೆನೊರೆಯಾದ ಆ ಜಲ ರಾಶಿಯು ಅವರಿಬ್ಬರನ್ನೂ ಎಲ್ಲಿಗೆ ಸೆಳೆದುಕೊಂಡು ಹೋಗುತ್ತ ಲಿದ್ದಿತೋ—ಯಾರು ಬಲ್ಲರು? ಒಂದು ವೇಳೆ ಜುಮುಲೆಯನ್ನು ಕಳೆದು ಕೊಳ್ಳಬೇಕಾಗುವುದೋ ಅಥವಾ ಅದರಿಂದ ಅವನ ಜೀವವೇ ಹೋಗು ವುದೋ ಏನೊ? ಬಳಲಿಕೆಯಿಂದ ಕೈಗಳು ಮುರಿದುಬೀಳುವಂತಿದ್ದುವು; ಆದರೂ ಫೂಲಸಾಹೇಬನು ಪ್ರಾಣ ಭಯದಿಂದ ಆ ಮರದ ಬಿಳಲನ್ನು ಬಿಡದೇ ಇದ್ದನು. ಇಷ್ಟೇ ಅಲ್ಲದೆ ಹತ್ತಿರದಲ್ಲಿಯೇ ಮುಂದೆ ಒಂದು ಸುಳಿ—ಅಲ್ಲಿ ನೀರು ಗರ್ಜಿಸುವುದು; ಚಕ್ರಾಕಾರವಾಗಿ ಸುತ್ತಿ ಒಂದಾಗಿ ಬೆರೆಯುವುದು; ಒಂದಾಗಿ ಬೆರೆತು ಒಂದು ಕಡೆಯಿಂದ ಇನ್ನೊಂದು ಕಡೆಗೆ ನಾಲ್ಕರಷ್ಟು ವೇಗವಾಗಿ ಹರಿಯುವುದು. ಒಂದು ಸಲ ಕೈ ಬಿಟ್ಟ ಮಾತ್ರದಿಂದ ತಾವು ಆ ಸುಳಿಯಲ್ಲಿ ಬೀಳಬೇಕಾಗುವುದೆಂದೂ, ಆ ಸುಳಿಗೆ ಸಿಕ್ಕಿದನಂತರ ತಮ್ಮ ಜೀವನದ ಆಸೆಯೇ ಇರುವುದಿಲ್ಲನೆಂದೂ ಫೂಲಸಾಹೇಬನು ನಿಶ್ಚೈಸಿದನು.

ಆ ಸಮಯದಲ್ಲಿ, ಸಮೀಪವಾದ ತೀರಪ್ರದೇಶದಲ್ಲಿನ ದಟ್ಟವಾದ ಅಂಧಕಾರದೊಳಗಿಂದ, ಪ್ರಕೃತಿಯ ತುಮುಲ ವಿಪ್ಲವದ ತೀವ್ರತರ ಕೋಲಾಹಲವನ್ನು ಭೇದಿಸಿಕೊಂಡು ಹೆಂಗಸಿನ ಕಂಠದಿಂದ 'ಕಿಲ ಕಿಲ' ನೆಂದು ತೀವ್ರತರವಾದ ಹಾಸ್ಯಧ್ವನಿಯೊಂದು, ಇದಿರಾಗಿದ್ದ ಜಲರಾಶಿ

ಯನ್ನು ನಡುಗಿಸಿ, ಗಂಗೆಯ ಒಂದು ತೀರದಿಂದ ಮತ್ತೊಂದು ತೀರಕ್ಕೆ ಹಾರಿ, ಬಿರುಗಾಳಿಯ ವೇಗದಿಂದ ಓಡಿ, ದೂರವಾದ ದಿಗಂತವನ್ನು ಸೇರಿ ಲೀನವಾಯಿತು. ಆ ಅಟ್ಟಹಾಸದ ತೀವ್ರತೆಯಿಂದ ಚರಾಚರವೆಲ್ಲವೂ ಕ್ಷಣಕಾಲ ಸ್ತಂಭಿಸಿದವೆಂದು ಹೇಳಬಹುದು.

ನಿಸ್ತಾರವಾಗಿಯೂ ನಿರ್ಜನವಾಗಿಯೂ ಇದ್ದ ಆ ಸ್ಥಳದಲ್ಲಿ, ನಕ್ಷತ್ರವಿಲ್ಲದ, ಚಂದ್ರನಿಲ್ಲದ, ಮೇಘಮಯವಾದ, ಅಂಧಕಾರಮಯವಾದ ಗಭೀರ ರಾತ್ರಿಯ ಭೀಷಣತೆಯ ಮಧ್ಯೆ, ಹಾವುಗಳಿಗಾವಾಸಸ್ಥಳವಾಗಿ, ಉದ್ಬುದ್ಧವಾಗಿ ಬೆಳೆದಿರುವ ತೃಣ ಸಮೂಹದಿಂದ ಶೋಭಿಸುತ್ತಾ ಮಳೆಯಿಂದ ನೆನೆದಿರುವ ತೀರದೇಶದಲ್ಲಿ ನಿಂತುಕೊಂಡಿರುವ ಈ ಉನ್ಮಾದಿನಿಯಾರು? ಉದ್ದಾಮವಾಗಿಯೂ ಪ್ರಬಲವಾಗಿಯೂ ಇರುವ ತನ್ನ ನಗೆಯ ವೇಗವನ್ನು ಹೇಗಾದರೂ ಹೃದಯಮಧ್ಯದಲ್ಲಿ ಅಡಗಿಸಿಕೊಳ್ಳಲಾರಳೇನು?

ಒಂದು ಗಳಿಗೆಯನಂತರ ಮೊದಲಿನಂತೆಯೇ ಅಟ್ಟಹಾಸದಿಂದೊಡಗೂಡಿ, ಸ್ತ್ರೀ ಕಂಠದಿಂದ—ಪ್ರಾಣನಾಥ! ಹೇಗಿರುವೆ? ಈಗ ಈ ದಾಸಿಯ ಜ್ಞಾಪಕ ಬಂದಿತೆ?—ಎಂದು ಯಾರೋ ಕೂಗಿದರು.

ಕಂಠ ಸ್ವರವನ್ನು ಕೇಳಿ ಫೂಲಸಾಹೇಬನಿಗೆ ಭಯವಾಯಿತು; ಬಾಡಿದ್ದ ಮುಖವು ಮತ್ತಷ್ಟು ಬಾಡಿತು; ಶರೀರದಲ್ಲಿ ಉಳಿದಿದ್ದ ಅಲ್ಪಸ್ವಲ್ಪ ಬಲವೂ ಮಾಯವಾಯಿತು; ಕಂಠಸ್ವರವು ಅವನಿಗೆ ಚಿರಪರಿಚಿತವಾದ ಮೋಹಿನಿಯ ಕಂಠಸ್ವರ. ಮೋಹಿನಿಯು ಯಾವಲ್ಲಿ ನಿಂತು ಪ್ರಶ್ನೆ ಮಾಡಿದಳೋ ಫೂಲಸಾಹೇಬನು ಹುಬ್ಬುಗಂಟುಹಾಕಿಕೊಂಡು ತೀಕ್ಷ್ಣ ದೃಷ್ಟಿಯಿಂದ ಆ ಕಡೆ ನೋಡಿದನು. ತೀರದಲ್ಲಿ, ಆ ಆಲದಮರದ ಬುಡದಲ್ಲಿ, ಆ ಗಾಢಾಂಧಕಾರದ ಮಧ್ಯದಲ್ಲಿ, ಒಂದು ನಾರೀಮೂರ್ತಿಯು ಹರಿತವಾಗಿಯೂ ಉದ್ದವಾಗಿಯೂ ಇದ್ದ ಒಂದು ಚೂರಿಯನ್ನು ಹಿಡಿದು ನಿಂತಿರುವುದು ಕಾಣಿಸಿತು. ಆ ಕತ್ತಲೆಯಲ್ಲಿ ಅವಳನ್ನು ಗುರ್ತಿಸಲಾಗಲಿಲ್ಲ. ಆದರೆ ಅವಳು ಆ ರಾಕ್ಷಸಿಯಾದ ಮೋಹಿನಿಯಲ್ಲದೆ ಮತ್ತೆ ಯಾರೂ ಅಲ್ಲ ಎಂಬ ವಿಷಯದಲ್ಲಿ ಫೂಲಸಾಹೇಬನಿಗೆ ಎಳ್ಳಷ್ಟು

ದರೂ ಸಂಶಯ ಉಳಿಯಲಿಲ್ಲ. ದಟ್ಟವಾದ ಆ ಕಗ್ಗತ್ತಲೆಯಲ್ಲಿ ಅವಳ ಕೈಯಲ್ಲಿದ್ದ ಚೂರಿಗಿಂತಲೂ, ಉಜ್ವಲವಾದ ಅವಳ ದೊಡ್ಡ ದೊಡ್ಡ ಕಣ್ಣುಗಳು ಹೆಚ್ಚಾಗಿ ಥಳಥಳಿಸುತ್ತಲಿದ್ದುವು; ಅವುಗಳಲ್ಲಿ, ಅಂತರ್ದಾಹದಿಂದ ಭಯಂಕರವಾಗಿ ಉರಿಯುತ್ತಿರುವ ಒಂದು ಬಗೆಯ ಕಾಡುಗಿಚ್ಚು ರೋಷಭರದಿಂದ, ಪ್ರತಿಕ್ಷಣದಲ್ಲಿಯೂ ಅತಿಶಯವಾಗಿ ಹೆಚ್ಚಿಬರುತಲಿದ್ದಿತು.

ನೋಡಿ ಫೂಲಸಾಹೇಬನಿಗೆ ಭಯವಾಯಿತು. ಭಯಗೊಂಡ ಹೃದಯದಿಂದಲೂ, ಕಂಪಿತಕಂಠದಿಂದಲೂ ಫೂಲಸಾಹೇಬನು—ಮೋಹಿನಿ! ಈ ಹೊತ್ತಿನಲ್ಲಿ ಈ ಸ್ಥಳಕ್ಕೆ ಎಲ್ಲಿಂದ ಬಂದೆಯೆ?—ಎಂದನು.

ಮೋಹಿನಿ—ಬಹುದೂರದಿಂದ. ಏಕೆ ಬಂದುದೆಂದು ಕೇಳುವೆಯೋ? ಹೇಳುತ್ತೇನೆ, ನೀನು ನಿನ್ನ ಪ್ರಿಯತಮಳೊಡನೆ ಜಲಕೇಳಿಯಲ್ಲಿ ಎಷ್ಟರ ಮಟ್ಟಿಗೆ ಆಸಕ್ತನಾಗಿರುವೆಯೋ ನೋಡೋಣವೆಂದು ಬಂದೆನು—ಎಂದು ಹೇಳಿ ಮೊದಲಿನಂತೆಯೇ, ಹುಚ್ಚಿಯ ಹಾಗೆ, ಗಟ್ಟಿಯಾಗಿ ನಕ್ಕಳು. ತಿರಸ್ಕಾರ ಸೂಚಕವಾದ, ಗಗನಭೇದಿಯಾದ ಆ ಹಾಸ್ಯ ಧ್ವನಿಯು ಗಂಭೀರವಾದ ಮೇಘ ಧ್ವನಿಯನ್ನು ಮಿಂಚಿ, ಬಿರುಗಾಳಿಯ ಗರ್ಜನೆಯನ್ನು ಭೇದಿಸಿ, ವಿರಾಮವಿಲ್ಲದ ಜಲ ಕಲ್ಲೋಲವನ್ನು ಅಡಗಿಸಿ, ಬಹುದೂರಕ್ಕೆ ಕೇಳಿಸಿತು; ಬಹುದೂರದವರೆಗೆ ಭಯವನ್ನುಂಟು ಮಾಡಿತು; ಗಭೀರವಾದುದಾದರೂ ದುರ್ಬಲವಾಗಿದ್ದ ಫೂಲಸಾಹೇಬನ ಹೃದಯದಲ್ಲಿ ಪ್ರಬಲ ವೇಗದಿಂದ ಸಹಿಸಲಾರದ ಒಂದು ಆಘಾತ ಮಾಡಿತು. ಆಗ ಮೋಹಿನಿಯು ಗಂಭೀರ ಭಾವದಿಂದ,—ವಿನೋದ, ಈಗ ಏನಾಯಿತು? ಮಹಾಮಹಿಮಾಸ್ಪದಳಾದ ಗಂಗೆಯ ಸುಶೀತಲವಾದ ಪುಣ್ಯಪ್ರವಾಹ ಮಧ್ಯದಲ್ಲಿ ನಿಂತು, ಈಗ ಒಂದುಸಲ ಸಮಸ್ತ ಜೀವನದ ಪಾಪಕಾರ್ಯಗಳನ್ನೆಲ್ಲ ಸ್ಮರಿಸಿಕೊಳ್ಳುವೆಯಾ? ಅತಿದುರ್ಬಲವಾದ, ಬಹು ಕ್ಷೀಣವಾದ ನಾರೀಹೃದಯವೊಂದನ್ನು ಸಾವಿರಾರು ವಂಚನೆಗಳಿಂದ ಮರುಳುಗೊಳಿಸಿದ್ದೂ ಅಲ್ಲದೆ, ತೊಳೆಯಬಾರದ ಕಳಂಕದ ಮಧ್ಯದಲ್ಲಿ ಬಿಟ್ಟು ಬಂದುದು ನೆನಪಾಯಿತೆ? ವಿನೋದ, ಮುಗ್ಧಳೂ,

ಸಹಜವಾಗಿ ಏನೂ ತಿಳಿಯದವಳೂ, ಕರ್ತವ್ಯವನ್ನು ಬಿಟ್ಟವಳೂ, ಜ್ಞಾನ ಹೀನಳೂ, ಮೂರ್ಖಳೂ ಆದೊಬ್ಬ ಅಬಲೆಯನ್ನು ಸಂಸಾರದಲ್ಲಿನ ಸಹಸ್ರ ಸ್ನೇಹ ಬಾಹುಗಳ ದೃಢಬಂಧನದಿಂದ ತಪ್ಪಿಸಿದೆ; ಅಪಾರವಾದ ಪವಿತ್ರತೆಯಿಂದ ತೊಲಗಿಸಿದೆ; ಅಗಾಧವಾದ, ಅಸೀಮವಾದ, ಅನಂತವಾದ, ಅಭ್ರಾಂತವಾದ ಪ್ರೀತಿಯೆಂಬ ಸ್ವರ್ಗೀಯ ಸೌಂದರ್ಯದಿಂದ ಪೂರ್ಣವಾಗಿ, ಚಿತ್ರವಿಚಿತ್ರವಾಗಿ, ಸ್ನಿಗ್ಧಚ್ಛಾಯಾಮಯವಾಗಿರುವ 'ತೆರೆ' ಎಂಬ ಸೂಕ್ಷ್ಮಾವರಣವನ್ನು ತೆಗೆದುಹಾಕಿಸಿದೆ. ನಾರೀ ಜೀವನದಲ್ಲಿ ಪ್ರಿಯತಮ ರತ್ನವಾಗಿಯೂ, ಸಮಸ್ತ ಸೌಂದರ್ಯದ ಸಾರಭೂತವಾಗಿಯೂ, ಪವಿತ್ರತೆಗೆಲ್ಲ ಕೇಂದ್ರಸ್ಥಾನವಾಗಿಯೂ, ಐಶ್ವರ್ಯಗಳಿಗೆಲ್ಲ ಆಶ್ರಯವಾಗಿಯೂ, ಕಾಂತಿಗಳೆಲ್ಲಕ್ಕೂ ಉಜ್ವಲತೆಯಾಗಿಯೂ ಇದ್ದ ಆ ಪಾತಿವ್ರತ್ಯದಿಂದ ಅವಳನ್ನು ದೂರಮಾಡಿದೆ. ಅಂತಹವಳನ್ನು, ಹೀನತೆಯೆಂಬ ಕಾಡಮರಳಿನಿಂದ ತುಂಬಿದ, ದಿಗ್ದಿಗಂತ ಶೂನ್ಯವಾದ, ಕರ್ಕಶತೆಯಿಂದ ನೀರಸವಾದ, ವಿಶ್ವಾಸ ಹೀನತೆಯೆಂಬ ಮರುಭೂಮಿಯ ಮಧ್ಯೆ, ಮಮತಾ ಹೀನತೆಯ ಮಧ್ಯೆ, ಪ್ರೇಮ ಶೂನ್ಯತೆಯ ಮಧ್ಯೆ, ಬಿಟ್ಟುಬಂದುದು ಈಗ ನೆನಪಿಗೆ ಬಂದಿತೇನು? ಅವೆಲ್ಲವೂ ಇಂದು ಸ್ಮರಣೆಗೆ ಬಂದುವೋ? ಇವುಗಳೂ ಅಲ್ಲದೆ, ದುರಾಸೆಯಿಂದ ನೀನು ಒಬ್ಬ ಮುಸಲಮಾನರ ಹುಡುಗಿಯನ್ನು ಮದುವೆಯಾಗಿ ಜಾತಿಭ್ರಷ್ಟನೂ ಧರ್ಮಭ್ರಷ್ಟನೂ ಆದೆ; ಕಡೆಗೆ ಆ ಹೆಂಡತಿಯ ತಂದೆಯ ಆಸ್ತಿಯನ್ನೆಲ್ಲಾ ಕೈವಶಮಾಡಿಕೊಳ್ಳುವುದಕ್ಕಾಗಿ ನಿನ್ನ ಕೈಯ್ಯಾರ ಸ್ತ್ರೀಹತ್ಯೆಯನ್ನು ಮಾಡಿದೆ; ನಿನಗಿದ್ದ ಒಬ್ಬ ಮಗಳನ್ನು ಮರುಕಗೊಳ್ಳದೆ ಗಂಗಾವಕ್ಷದಲ್ಲಿ ಸಮರ್ಪಿಸಿದೆ; ಇಂತಹ ನಿನ್ನನ್ನು ನೋಡುವುದೂ ಪಾಪಕರ. ವಿನೋದ, ಈ ಎಲ್ಲ ಪಾಪಗಳ ಫಲವನ್ನು, ಈಗಲೂ, ಹೊಂದದೇ ಇರಬಹುದೆಂದು ಭಾವಿಸಿರುವೆಯಾ? ಎಂದಿಗೂ ಸಾಧ್ಯವಿಲ್ಲ. ಈಗಲೂ ಹಗಲೂ ರಾತ್ರಿಗಳಾಗುತ್ತಿವೆ—ಚಂದ್ರ ಸೂರ್ಯರ ಉದಯಾಸ್ತಗಳಾಗುತ್ತಿವೆ; ಗಾಳಿ ಬೀಸುತ್ತದೆ; ಈಗಲೂ ವಿಶ್ವೇಶ್ವರನ ಪವಿತ್ರತಮವಾದ ಸಿಹ್ಮಾಸನದ ಬಳಿ ಪಾಪಪುಣ್ಯಗಳ ವಿಚಾರಣೆ ನಡೆದೇ ನಡೆಯುತ್ತಿದೆ—ಎಂದು ಹೇಳಿದಳು.

ಬಹಳ ಮಾತಿನಿಂದೇನು—ಪ್ರಥಮ ಪರಿಚ್ಛೇದದಲ್ಲಿನ ಮೋಹಿನಿಯು ಆ ವಿನೋದನೂ ಫೂಲಸಾಹೇಬನೂ ಒಂದೇ ವ್ಯಕ್ತಿ. ಯೌವನ ಕಾಲದಲ್ಲಿ ಫೂಲಸಾಹೇಬನಿಗೆ ವಿನೋದನೆಂಬ ಹೆಸರಿತ್ತು. ಆ ಸಮಯದಲ್ಲಿ ವಿಧವೆಯಾಗಿದ್ದ ಮೋಹಿನಿಯು ಮರುಳಾಗಿ ಅವನನ್ನು ಪ್ರಾಣಕ್ಕೆ ಸಮಾನನೆಂದು ಭಾವಿಸಿದ್ದಳು. ಆಗ ಮೋಹಿನಿಯ ಹೃದಯ ಕ್ಷೇತ್ರದಲ್ಲಿ ಬಿದ್ದ ಪಾಪಪುಣ್ಯವೆಂಬ ಬೀಜದ ದೆಸೆಯಿಂದ ವೃಕ್ಷವಾಗಿ ಸದ್ಯಃ ವಿಷಮಯ ಫಲವು ಫಲಿಸಿದೆ. ಆ ಎಲ್ಲ ಘಟನೆಗಳನ್ನೂ ಪುನಃ ಬರೆಯುವುದು ನಿಷ್ಪ್ರಯೋಜನ. ನಮ್ಮ ಈ ಚರಿತ್ರೆಯ ಆದಿ ಭಾಗದಲ್ಲಿಯೇ ಮೋಹಿನಿಯ ಮುಖದಿಂದ ಆ ಕಥೆಯ ಅನೇಕ ಭಾಗಗಳನ್ನು ತಿಳಿದಿರುವಿರಿ. ಈಗ ಮೋಹಿನಿಯು ಫೂಲಸಾಹೇಬನಿಂದ, ನಾಯಿನರಿಗಳಹಾಗೆ ಬಿಡಲ್ಪಟ್ಟವಳು, ಸತ್ಸಮಾಜಗಳವರಿಂದ ತ್ಯಜಿಸಲ್ಪಟ್ಟವಳು, ಸಹಿಸಲಸದಳವಾದ ಕ್ರೋಧ, ಈರ್ಷೆ, ದ್ವೇಷಗಳಿಂದ ನೊಂದು ಹತಾಶಳಾಗಿ ಉನ್ಮಾದಿನಿಯಾಗಿರುವಳು. ಸದ್ಯಃ ಅವಳು ಯಾವುದಾದರೊಂದು ಮಾರ್ಗದಲ್ಲಿ ಫೂಲಸಾಹೇಬನಿಗೆ ಈ ಜಗತ್ತಿನಿಂದ ವಿರಾಮ ದೊರಕಿಸಿ, ಅವನ ಹೆಸರನ್ನು ಬದುಕಿರುವವರ ಪಟ್ಟಿಯಿಂದ ಅಳಿಯಿಸಿಬಿಡುವಂತೆ ಮಾಡಿದನಂತರ ಅವಳು ತೃಪ್ತಳೂ ಸಂತುಷ್ಟಳೂ ಆಗುವಳು. ಅವಳ ಹೃದಯದೊಳಗೆ ನಿರ್ಬಂಧಿಸಲ್ಪಟ್ಟ ದ್ವೇಷವೆಂಬುದು, ಮಣಿಯನ್ನು ಕಳೆದುಕೊಂಡ ಫಣಿಯಂತೆ, ತನ್ನನ್ನು ತಾನೇ ಕಚ್ಚಿಕೊಂಡು, ತನ್ನ ವಿಷದಿಂದ ತಾನೇ ಸಂಕಟಪಡುತ್ತಾ ರಾತ್ರಿ ಹಗಲೂ ಗರ್ಜಿಸುತ್ತಾ ತನ್ನಷ್ಟಕ್ಕೆ ತಾನೇ ತೆಕ್ಕೆ ಕಟ್ಟಿಕೊಳ್ಳುವುದು ; ಅದು ಫೂಲಸಾಹೇಬನನ್ನು ಕಚ್ಚುವವರೆಗೆ ಹೇಗೂ ಶಾಂತವಾಗಲಾರದು.

———

## ಆರನೆಯ ಪರಿಚ್ಛೇದ

### ಸರ್ಪಯುಗಳ

ಫೂಲಸಾಹೇಬನು ಮೋಹಿನಿಯ ಮಾತು ಕೇಳಿ ಸ್ವಲ್ಪ ಹೊತ್ತು ಮೌನದಿಂದ ಇದ್ದು, ಅನಂತರ—ಆ ವಿಚಾರಗಳು ಈಗ ಏಕೆ ಮೋಹಿನಿ? ಈಗ ಆ ನನ್ನ ಅಪರಾಧಗಳೆಲ್ಲವನ್ನೂ ಮನ್ನಿಸಿ ನನ್ನನ್ನು ರಕ್ಷಿಸು; ನಿನ್ನ ಸೆರಗನ್ನು ಇತ್ತಕಡೆ ಎಸೆ, ಅದರಿಂದ ನಾವು ಬದುಕಿಕೊಳ್ಳುತ್ತೇವೆ. ಮತ್ತೆ ಯಾವ ರೀತಿಯಿಂದಲೂ ನಾನು ಇಲ್ಲಿಂದ ಪಾರಾಗುವ ಹಾಗೆ ಇಲ್ಲ; ಈ ಸ್ಥಳದಲ್ಲಿ ನೀರು ಸೆಳೆಯುತ್ತಿದೆ. ಒಂದು ಸಲ ಕೈಬಿಟ್ಟರೂ ಸಾಕು, ಇದಿರಾಗಿರುವ ಸುಳಿಗೆ ಸಿಕ್ಕಿ ಪ್ರಾಣ ಕಳೆದುಕೊಳ್ಳಬೇಕಾಗುವುದು. ಮೋಹಿನಿ! ಕಾಪಾಡು ಕಾಪಾಡು. ಈಗ ನಾನು ತುಂಬ ಕಷ್ಟದಲ್ಲಿದ್ದೇನೆ; ಈ ಸ್ಥಿತಿಯಲ್ಲಿ ಇನ್ನೊಂದು ಗಳಿಗೆಯೂ ಇರಲಾರೆ—ಎಂದನು.

ಏನಮಾಡಿದರೆ ಈಗಿರುವ ರೀತಿಯಲ್ಲಿ ಇನ್ನೊಂದು ಗಳಿಗೆಯಾದರೂ ಇರಲಾರೆಯೋ ಅದನ್ನು ಈಗಲೇ ಮಾಡುತ್ತೇನೆ—ಎಂದು ಹೇಳಿ, ಮೋಹಿನಿಯು ಅದೇ ಆಲದಮರದ ಇನ್ನೊಂದು ಬಿಳಲನ್ನು ಹಿಡಿದು ಕೊಂಡು ಮುಂದಕ್ಕೆ ಬಾಗಿ, ಯಾವ ಬಿಳಲನ್ನು ಹಿಡಿದು ಫೂಲ ಸಾಹೇಬನು ಈವರೆಗೂ ಅತಿಕಷ್ಟದಿಂದ ಜೀವರಕ್ಷಣೆ ಮಾಡಿಕೊಂಡಿದ್ದನೋ ಅದರಮೇಲೆ ತನ್ನ ಚೂರಿಯಿಂದ ಹೊಡೆಯಲಾರಂಭಿಸಿದಳು.

ಫೂಲಸಾಹೇಬನು ಕಾತರಸ್ವರದಿಂದ,—ಇದೇನು ಸರ್ವನಾಶ! ಮೋಹಿನಿ, ನನ್ನನ್ನು ಮುಳುಗಿಸಿ ಕೊಲ್ಲಬೇಡ. ರಕ್ಷಿಸು, ಕಾಪಾಡು ಮೋಹಿನಿ, ನನ್ನನ್ನು ಕ್ಷಮಿಸು, ಕಾಪಾಡು.—ಎಂದು ಬೇಡಿಕೊಂಡನು.

ಮೋಹಿನಿ—(ನಗುತ್ತ) "ನಿನ್ನ ಅಪರಾಧಕ್ಕೆ ಕ್ಷಮೆಯಿಲ್ಲ; ಇದ್ದಿದ್ದರೆ ಮಾಡುತ್ತಿದ್ದೆ. ಈಗ, ಒಂದು ಬಾಣದಿಂದ ಎರಡು ಹಕ್ಕಿಗಳನ್ನು ಹೊಡೆಯುವ ಸುಯೋಗವನ್ನು ಕೊಂಚಕ್ಕೆ ಏರಗೆಟ್ಟುಕೊಡಲಾದೀತೆ—ಏನೋದ? ನಿಮ್ಮಿಬ್ಬರನ್ನೂ ನೀರಲ್ಲಿ ಮುಳುಗಿಸುವುದು

ಹಾಗಿರಲಿ. ನಿಮ್ಮನ್ನು ತುಂಡು ತುಂಡಾಗಿ ಕತ್ತರಿಸಿಹಾಕುವುದಕ್ಕೆ ಅನುಕೂಲವಿದ್ದಿದ್ದ ಪಕ್ಷದಲ್ಲಿ ಮತ್ತೆಷ್ಟು ಸುಖಿಯಾಗುತ್ತಿದ್ದೆನೋ ?—ಎಂದು ಹೇಳುತ್ತಾ, ಪುನಃ ಬಳಲನ್ನು ಕತ್ತರಿಸತೊಡಗಿದನು.

ಫೂಲಸಾಹೇಬನು ಸಮೀಪಾಗತವಾದ ವಿಪತ್ತಿನಿಂದ ಬಿಡುಗಡೆ ಹೊಂದಲು ಮಾರ್ಗವಿಲ್ಲದವನಾಗಿ ಮೈಮರೆದನು. ತಲೆ ಸುತ್ತಿತು; ಪೆಟ್ಟಿನಿಂದ ಸಿಂಹದಂತೆ ಗರ್ಜಿಸುತ್ತಾ,—ಮೋಹಿನಿ, ಪಿಶಾಚಿ, ರಾಕ್ಷಸಿ, ಈಗಲೂ ನೆನಪಿಡು—ಹೇಗಾದರೂ ಬದುಕಿದೆನಾದರೆ, ಇದಕ್ಕೆ ಸರಿಯಾದ ಪ್ರಾಯಶ್ಚಿತ್ತವನ್ನೇ ಮಾಡುತ್ತೇನೆ. ಫೂಲಸಾಹೇಬನಿಂದ ಎಂದಿಗೂ ತಪ್ಪಿಸಿಕೊಳ್ಳಲಾರೆ—ಎಂದು ಹೇಳಿದನು.

ಉನ್ಮಾದಿನಿಯಾದ ಮೋಹಿನಿಯು, ಮೊದಲಿನ ಹಾಗೆಯೇ ಕೈಗೊಂಡ ಕಾರ್ಯದಲ್ಲಿ ತತ್ಪರಳಾಗಿರುತ್ತಾ, ಸದ್ಯಃ ನೀನು ಬದುಕಿಕೊಳ್ಳುವ ಪ್ರಯತ್ನಮಾಡು; ಅನಂತರ ನನ್ನ ವಿಚಾರವನ್ನು ಕುರಿತು ಆಲೋಚಿಸುವುದಕ್ಕೆ ಅವಕಾಶ ಹೊಂದುವೆ. ಪಿಶಾಚ, ನೀನು ಎಷ್ಟೋ ದಿನ, ನಗೆಮೊಗದಿಂದ, ಎಷ್ಟೋ ಮಂದಿ ನಿರಪರಾಧಿಗಳ ಪ್ರಾಣ ತೆಗೆದಿರುವೆ. ನಿನ್ನ ವಿಷದಿಂದ, ನಿನ್ನ ಚೂರಿಯ ಮೊನೆಯಿಂದ, ಎಷ್ಟು ಜನರ ಪ್ರಾಣಗಳು ಈ ಪೃಥ್ವಿಯಿಂದ ಮಾಯವಾಗಲಿಲ್ಲ? ಅವರ ಯಾತನಾಮಯವಾದ ಮರಣವನ್ನು ನಗೆಮೊಗದಿಂದ ನೀನೇ ನೋಡಿರುವೆ. ಆದರೆ ಇಂದು ಅಂತಹ ವೀರಪುರುಷನಾದ ನೀನು ಕೂಡ, ಮೃತ್ಯುಭಯದಿಂದ ಹೀಗೆ ವ್ಯಾಕುಲಿತನಾಗಬಹುದೆ? ಇಂದೋ ಅಥವಾ ನಾಳೆಯೋ ಬಂದೇ ಬರುವ ಮೃತ್ಯುವಿಗಾಗಿ ಇಷ್ಟು ಭಯವೆ? ಛಿಃ! ಛಿಃ! ನಿನ್ನನ್ನು ಇಷ್ಟು ಬೇಗ ಕೊಲ್ಲುವುದರಿಂದ ಇನ್ನೂ ಒಂದು ಪ್ರಯೋಜನವುಂಟು. ಬಹು ಸಂಕಟಕರವಾದ ವಿಚಾರ,—ನಿನ್ನ ಮೇಲಣ ಮಮತೆಯನ್ನು ನಾನು ಹೇಗೂ ಬಿಡಲಾರದವಳಾಗಿದ್ದೇನೆ. ಹಾಗೆ ಬಿಡುವುದು ಸಾಧ್ಯವಿದ್ದಿದ್ದ ಪಕ್ಷದಲ್ಲಿ, ಇಷ್ಟು ನಿರ್ದಯಳಾಗಿ ನಿನ್ನನ್ನು ಕೊಲ್ಲುವುದಕ್ಕೆ ಬರುತ್ತಿರಲಿಲ್ಲ. ನಿನ್ನನ್ನು ಕೊಂದಲ್ಲದೆ ನನಗೆ ಸಾಯುವುದಕ್ಕೆ ಮಾರ್ಗವೇ ಇಲ್ಲ; ಈ ಪ್ರಪಂಚದಲ್ಲಂತೂ ನಿನ್ನನ್ನು ಹೊಂದಲಾಗಲಿಲ್ಲ.

ಈಗ ನಿನ್ನನ್ನು ಕೊಂದು, ಅನಂತರ ನಾನೇ ಪ್ರಾಣ ತೆಗೆದುಕೊಂಡು, ಪರಲೋಕದಲ್ಲಿ—ಅದು ನರಕವೇ ಆದರೂ ಚಿಂತೆಯಿಲ್ಲ; ಅಥವಾ ಮತ್ತೆ ಯಾವ ಸ್ಥಳವೇ ಆದರೂ ಸರಿ,–ಅಲ್ಲಿಯಾದರೂ ನಿನ್ನ ಸಂಗಡ ಸೇರಿರುವುದು ಸಾಧ್ಯವೋ ಅಲ್ಲವೋ ನೋಡುತ್ತೇನೆ. ಮೊತ್ತಮೊದಲು ನೀನು ನನಗೆ ಯಾವ ರೀತಿ ಕಾಣಿಸಿಕೊಂಡೆಯೋ ಅದೇ ರೀತಿಯಾಗಿ ನಿನ್ನನ್ನು ಹೊಂದಬಹುದೋ ಇಲ್ಲವೋ ನೋಡಿಬಿಡುತ್ತೇನೆ.—ಎಂದಳು.

ಫೂಲಸಾಹೇಬ—ಮೋಹಿನಿ, ನಿನ್ನ ವಿಚಾರದಲ್ಲಿ ನಾನು ತುಂಬಾ ಅನ್ಯಾಯಮಾಡಿದೆನೆಂದು ಈಗ ಚೆನ್ನಾಗಿ ತೋರುತ್ತಿದೆ. ನನ್ನನ್ನು ಉಳಿಸು. ಈ ಬಾರಿ, ನಾನು ನಿನ್ನವನೇ ಆಗುತ್ತೇನೆ. ಮೊದಲಿನಂತೆಯೇ ನಿನ್ನನ್ನು ಪ್ರೀತಿಸುತ್ತೇನೆ.

ಮೋಹಿನಿ—(ನಗುತ್ತಾ) ವಿನೋದ, ಪುನಃ ಮರುಳು ಮಾಡುವ ಪ್ರಯತ್ನಮಾಡಬೇಡ. ಒಂದು ಬಾರಿ ಮರುಳಾಗಿ ಈ ದುರ್ದೆಸೆಯನ್ನು ನಾನೇ ತಂದುಕೊಂಡೆನು. ನಿನ್ನಂತಹ ಭಯಂಕರನಾದೊಬ್ಬನ ಮಾತು ಕೇಳಿ ಮೋಹಿನಿಯು ಪುನಃ ಬೆರಗಾಗುವಳೆಂದು ಎಣಿಸಿದೆಯಾ? ಈಗ ಇವಳು ಅಂದಿನ ಮೋಹಿನಿಯಲ್ಲ. ಇವಳು ಈಗ ನಿನ್ನ ಪ್ರಣಯಾಕಾಂಕ್ಷಿಯಾಗಿಲ್ಲ; ನಿನ್ನ ಆದರವನ್ನು ಒಲ್ಲಳು, ಪ್ರೀತಿಮಯವಾದ ನಿನ್ನ ಮಧುರಾಲಾಪವು ಬೇಕಾಗಿಲ್ಲ. ಇವಳಿಗೆ ಬೇಕಾದುದು—ನಿನ್ನ ರಕ್ತ, ನಿನ್ನ ಮೃತ್ಯು, ನಿನ್ನ ಪಾಪಿಷ್ಠ ದೇಹವನ್ನು ಕಾಲಿನಿಂದ ತುಳಿಯುವುದು—ಇವೇ. ವಿನೋದ! ಈ ಮೋಹಿನಿಗೆ ಈಗ ಇಂತಹ ಅಸಂಭವ ಪರಿವರ್ತನವು ಸಂಘಟಿಸಿರುವುದೊಂದೇ ಬಹು ದುಃಖಕರವಾದ ವಿಚಾರ.

ಈ ಮಾತನ್ನು ಕೇಳಿ ಫೂಲಸಾಹೇಬನು ಹತಾಶನಾಗಿ, ಮರ್ಮಭೇದೀಸ್ವರದಿಂದ,–ಮೋಹಿನಿ! ಪಿಶಾಚಿ, ರಾಕ್ಷಸಿ ಎತರಿಂದಲೂ ನಿನಗೆ ದಯೆಬರಲಿಲ್ಲವಲ್ಲ!—ಎಂದನು.

ಮೋಹಿನಿ—ಈ ರಾಕ್ಷಸಿಯಲ್ಲಿ, ಈ ಪಿಶಾಚಳಲ್ಲಿ, ದಯಾಭಿಕ್ಷೆ ಬೇಡಬಹುದೇ, ವಿನೋದ! ಇದೇ ನಿನ್ನ ದೊಡ್ಡ ತಪ್ಪಲ್ಲವೆ?—ಎಂದು ಪರಿಹಾಸ ಮಾಡಿದಳು.

ಇದೆಲ್ಲವನ್ನೂ ಜುಮಲೆ ನೋಡಿದಳು ; ಬೆಳಲು ತುಂಡಾಗಿ ಕಡಿದು ಬೀಳುವುದಕ್ಕೆ ಹೆಚ್ಚು ಹೊತ್ತು ಬೇಕಾಗಿಲ್ಲ ; ಸ್ವಲ್ಪ ಹೊತ್ತಿನೊಳಗಾಗಿಯೇ ಸಮೀಪದಲ್ಲಿನ ಸುಳಿಯ ತಿಮಿರಮಯ ಗರ್ಭದಲ್ಲಿ ತಾವಿಬ್ಬರೂ ಅಂತ್ಯಕಾಲದ ಆಶ್ರಯವನ್ನು ಹೊಂದಲೇ ಬೇಕಾಗಿರುತ್ತಿದೆ ! ಈವರೆಗೂ ಅವಳು ಮನಸ್ಸಿನೊಳಗಣ ವ್ಯಾಕುಲತೆಯಿಂದ ಮಾತನಾಡದೆ ಬಹು ಕಷ್ಟದಿಂದಿದ್ದಳು. ಇನ್ನು ಹಾಗಿರಲಾರದೇ ಹೋದಳು. ಅವಳು ಬಹು ವಿನೀತ ಭಾವದೊಡನೆ, ಸ್ನೇಹಯುಕ್ತವಾದ ಮಧುರ ಸಂಬೋಧನೆಯಿಂದ ಮೋಹಿನಿಯನ್ನು ಕುರಿತು,—ಅಕ್ಕಯ್ಯಾ, ಈ ವಿಪತ್ಕಾಲದಲ್ಲಿ ನಮ್ಮಲ್ಲಿ ನೀನು ದಯದೋರದಿರುವುದಾದರೆ, ಮತ್ತೆ ಯಾವ ಉಪಾಯವೂ ಇಲ್ಲ–ಎಂದಳು.

ಮೋಹಿನಿಯು, ಮಾತು ಪೂರೈಸಗೊಡದೆ,—ಬಾಯಿಮುಚ್ಚೆ ಪಿಶಾಚಿ, ಸಾಯುವ ಕಾಲದಲ್ಲಿ ದೇವರ ಹೆಸರು ಹೇಳೆ, ಬಹು ಪಾಪಕೃತ್ಯಗಳನ್ನು ಮಾಡಿರುವೆ—ಎಂದು ಗದ್ದರಿಸಿದಳು.

ಜುಮಲೆಯು ಅಪಮಾನಿತಳಾದ್ದರಿಂದ ಕೂಡಲೇ ಯಾವ ಉತ್ತರವನ್ನೂ ಕೊಡಲಾರದವಳಾದಳು. ಈ ಅಪಮಾನವು ಅವಳ ಹೃದಯವನ್ನು ಶೂಲದಂತೆ ಭೇದಿಸಿತು ; ಮತ್ತೂ ಹೃದಯ ಮಧ್ಯದಲ್ಲಿ ಉಗ್ರತರವಾದ ವಿಷವನ್ನು ಚಲ್ಲಿತು. ಅಚ್ಚ ಕಪ್ಪಾದ ಅವಳ ಕಣ್ಣುಗಳಿಂದ ಬೆಂಕಿಯ ಜ್ವಾಲೆಯು ಹೊರಹೊಮ್ಮುತ್ತಿರುವಂತೆ ತೋರಿತು. ಜುಮಲೆಯು ಹುಬ್ಬು ಗಂಟುಹಾಕಿಕೊಂಡು,—ಯಾವ ರೀತಿಯಿಂದಾದರೂ ನಿನ್ನ ಸಮೀಪಕ್ಕೆ ಬಂದೆನಾದರೆ ಇಂದು ನಿನಗೆ ಈ ಪಿಶಾಚಿಯ ಪರಿಚಯ ಚೆನ್ನಾಗಿ ಮಾಡಿಕೊಡಬಹುದಾಗಿತ್ತು ; ನೋಡುತ್ತಿದ್ದ ಹಾಗೆಯೇ, ಅರೆಗಳಿಗೆಯೊಳಗಾಗಿ, ರಕ್ತಾಕ್ತವಾದ ನಿನ್ನ ಶರೀರವು ಯಾವ ರೀತಿಯಿಂದಲಾದರೂ, ನನ್ನ ಕಾಲಿನ ಬಳಿ ಬಿದ್ದಿರಬಹುದಾಗಿದ್ದಿತು. ಆಗಲಿ ಜುಮಲೆಯು ಮೃತ್ಯು ಮುಖದಲ್ಲಿದ್ದರೂ, ನಿನಗೆ ಯಾವುದಾದರೊಂದು ಅಪಕಾರಮಾಡಬಲ್ಲಳೋ ಇಲ್ಲವೋ ನೋಡುವ !—ಎಂದು ಗರ್ಜಿಸಿದಳು.

ಜುಮುಲೆಯು, ಹೀಗೆ ಗರ್ಜಿಸಿ, ಆ ಮೃತ ಪ್ರಹರಿಯಿಂದ ಎತ್ತಿ ಕೊಂಡು ನಡುವಿನಲ್ಲಿಟ್ಟುಕೊಂಡಿದ್ದ ಚಾಕನ್ನು ತೆಗೆದುಕೊಂಡು ಮೋಹಿನಿಗೆ ಗುರಿಯಿಟ್ಟು ಎಸೆದಳು. ಮೋಹಿನಿಯು ಬಿಳಲನ್ನು ಎಡದ ಕೈಯಿಂದ ಹಿಡಿದುಕೊಂಡು ತನ್ನ ದೇಹದ ಭಾರವನ್ನೆಲ್ಲಾ ಅದರ ಮೇಲಿಟ್ಟು ಮುಂದಕ್ಕೆ ಬಾಗಿದ್ದಳು; ಜುಮುಲೆಯು ಎಸೆದ ಚಾಕು ಆ ಎಡಗೈಯ್ಯ ಮಧ್ಯ ಭಾಗದಲ್ಲಿ ಪೂರ್ಣವಾಗಿ ನಾಟಿತು; ಆ ಕೂಡಲೇ ರಕ್ತವು ಪ್ರಬಲವೇಗದಿಂದ ಹರಿಯಿತು. ಉನ್ಮಾದಿನಿಯಾದ ಮೋಹಿನಿಯು ಅದನ್ನು ಲಕ್ಷ್ಯಮಾಡದೆ, ಬಿಳಲನ್ನು ಕಡಿದುಹಾಕುವುದಕ್ಕೇ ಹೆಚ್ಚು ಗಮನವಿಟ್ಟಿದ್ದಳು. ಅಂತಹ ಪೆಟ್ಟು ಬಿದ್ದಿದ್ದರೂ, ಒಂದು ಗಳಿಗೆಯವರೆಗೆ ಅವಳ ಮುಖದಲ್ಲಿ ಯಾತನಾ ಸೂಚಕವಾದ ಚಿಹ್ನೆಗಳು ಕಾಣಲಿಲ್ಲ. ಮೊದಲಿನ ಹಾಗೆ ನಿರುದ್ವಿಗ್ನಳಾಗಿ, ಪ್ರತಿಹಿಂಸಾಪರಾಯಣಳಾಗಿ, ಸ್ಥಿರಳಾಗಿ ಮತ್ತೂ ಸ್ಥಿರಸಂಕಲ್ಪವುಳ್ಳವಳಾಗಿ ತಾನು ಮಾಡಬೇಕಾದ ಕೆಲಸದಲ್ಲಿ ನಿರತಳಾಗಿದ್ದಳು.

ಮೋಹಿನಿಯಿಂದ ಕರುಣೆಯು ತಿಲಾಂಶವಾದರೂ ದೊರೆವುದಿಲ್ಲ ವೆಂದು ಫೂಲಸಾಹೇಬನು ತಿಳಿದುಕೊಂಡನು; ಆಗ, ಅವನು ತನ್ನಲ್ಲಿದ್ದ ಬಂದೂಕದ ಸಂಗೀನನ್ನು ಗುರಿಮಾಡಿ ಮೋಹಿನಿಗೆ ಬಲವಾಗಿ ಎಸೆದನು; ಅಂಧಕಾರದಲ್ಲಿ ಗುರಿಯು ಸರಿಯಾಗಲಿಲ್ಲ; ಅದು ಆ ವಟವೃಕ್ಷ ಮೂಲದಲ್ಲಿ ಅರ್ಧ ಭಾಗದ ಮಟ್ಟಿಗೆ ನಟ್ಟುಕೊಳ್ಳುವಷ್ಟು ಬಲವಾಗಿ, ಹೋಗಿಬಿದ್ದಿತು.

ಮೋಹಿನಿಯು 'ಹಾ ಹಾ' ಎಂದು ನಕ್ಕಳು. ಫೂಲಸಾಹೇಬನು ಅಕೃತ ಕಾರ್ಯನಾದುದರಿಂದ ತಲೆ ತಗ್ಗಿಸಿದನು. ಆಗ ಮೋಹಿನಿಯು ತನ್ನ ಚೂರಿಯನ್ನು ಮತ್ತಷ್ಟು ವೇಗವಾಗಿ ವ್ಯವಹರಿಸಿದಳು. ಸ್ವಲ್ಪದರಲ್ಲಿಯೇ ಆ ಬಿಳಲು ಎರಡಾಗಿ ತುಂಡಿಸಿತು. ಅದರ ಸಂಗಡಲೇ ಫೂಲಸಾಹೇಬನೂ ಜುಮುಲೆಯೂ ಪ್ರಬಲ ಪ್ರವಾಹಮುಖದಲ್ಲಿ ತೇಲುತ್ತಾ ಹೋಗಿ ಸಮೀಪದಲ್ಲಿದ್ದ ಸುಳಿಗೆ ಸಿಕ್ಕಿದರು. ಅಲ್ಲಿ ಒಂದೆರಡು ಬಾರಿ

ಸುತ್ತಿ ಅವರು ಆ ಅನಂತ ಜಲರಾಶಿಯ ಮಧ್ಯೆ ಎಲ್ಲಿ ಹೋದರೋ ಪುನಃ ನೋಡಲಾಗಲಿಲ್ಲ.

ಅನಂತರ ಆ ಸ್ಥಳದಲ್ಲಿ ನೀರು ಮೊದಲಿನ ಹಾಗೆಯೇ ಸುತ್ತುತ್ತಲಿತ್ತು, ಹಾಗೆಯೇ ಉಕ್ಕುತ್ತಲಿತ್ತು; ಅದೇ ರೀತಿಯಲ್ಲಿ ಗರ್ಜಿಸುತ್ತಲೂ ಇತ್ತು; ಜಲವು ಮೊದಲಿನಂತೆಯೇ ಅಶಾಂತ, ವೇಗವಾನ್; ಸುಳಿಯು ಸಶಬ್ದ! ಆಗ ಮೋಹಿನಿಯ ಅಟ್ಟಹಾಸವು ಆ ನಿಶಾಗಗನವನ್ನು ಮತ್ತೊಂದುಬಾರಿ ಕಂಪಿಸುವಂತೆ ಮಾಡುತ್ತಾ ಬಹು ದೂರದವರೆಗೆ ಹರಿಯಿತು. ಗಂಗಾನದಿಯ ಮತ್ತೊಂದು ತೀರದಲ್ಲಿ, ದೂರವಾಗಿದ್ದ ಅಡವಿಯೊಳಗೆ, ಅದರ ಪ್ರತಿಧ್ವನಿಯೊಂದು ಎದ್ದು ಬಿರುಗಾಳಿಯ ಗರ್ಜನೆಯೊಡನೆಯೂ, ವಿರಾಮವಿಲ್ಲದ ಜಲಕಲ್ಲೋಲದೊಡನೆಯೂ ಮಿಳಿತವಾಯಿತು.

---

## ಏಳನೆಯ ಪರಿಚ್ಛೇದ

### ಉಳಿದ ರಾತ್ರಿಯಲ್ಲಿ

ಆ ಘಟನಾಪೂರ್ಣವಾದ ರಾತ್ರಿಯ ವಿಚಾರಗಳನ್ನೇ ವಿವರಿಸುವೆವು.

ರಾತ್ರಿ ಎರಡು ಗಂಟೆಯಾದಾಗ ಪ್ರಹರಿಗಳೆಲ್ಲರೂ ಬದಲಾಯಿಸ ತೊಡಗಿದರು. ಆಗ, ಆ ಪೂರ್ವದಿಕ್ಕಿನ ಪ್ರಾಕಾರದ, ಆ ಮೃತನಾದ ಪ್ರಹರಿಗೆ ಬದಲಾಗಿ ಒಬ್ಬನು ಬಂದನು. ಯಾವನಿಗೆ ಬದಲಾಗಿ ತಾನು ಅಲ್ಲಿಗೆ ಬಂದನೋ ಅವನನ್ನು ಅಲ್ಲಿ ಕಾಣದಿದ್ದುದರಿಂದ ಹೊಸಬನು ವಿಸ್ಮಿತನಾದನು. ಅನಂತರ ಗೋಡೆಯ ಮೇಲೆ ಸ್ವಲ್ಪದೂರ ಮುಂದಾಗಿ ಹೋಗಿ ನೋಡಿದನು. ಅಲ್ಲಿ ಅವನ ಇದಿರಲ್ಲಿಯೇ ತಾನು ಯಾವನನ್ನು ಕಾಣದೆ ವಿಸ್ಮಿತನಾಗಿದ್ದನೋ ಅವನ ರಕ್ತಾಕ್ತವಾದ ದೇಹವು ಬಿದ್ದಿರುವುದನ್ನು ಕಂಡು ಅಸ್ಥಿರನಾದನು, ಸ್ತಂಭಿತನಾದನು ಮತ್ತೂ ಭೀತನಾದನು. ವಿಶ್ವಾಸಿಯೂ, ಸ್ವಾಮಿಭಕ್ತನೂ, ಕರ್ಮಠನೂ ಆದ

ಪ್ರಹರಿಯ ಶತಚ್ಛಿದ್ರವಾದ ವಕ್ಷವೂ ಅರ್ಧನಿಮೀಲಿತ ನೇತ್ರವೂ ಉಳ್ಳ ಪ್ರಾಣಹೀನ ದೇಹವನ್ನು ನೋಡಿದನು. ಇವನನ್ನು ಇಷ್ಟು ನಿಷ್ಕರುಣೆಯಿಂದ ಯಾರು ಕೊಂದರೋ ಊಹಿಸಲಾಗಲಿಲ್ಲ.

ಆಗಲೂ ಮಳೆ ಬೀಳದಿರಲಿಲ್ಲ; ಆದರೆ ವೇಗವು ಮೊದಲಿಗಿಂತಲೂ ಬಹಳ ಮಟ್ಟಿಗೆ ಕಡಿಮೆಯಾಗಿದ್ದಿತು; ಬಿರುಗಾಳಿಯ ಬಿರುಸೂ ಕಡಿಮೆಯಾಗಿದ್ದಿತು. ಫೂಲಸಾಹೇಬನೂ ಜುಮಲೆಯೂ ಏನಾದರು? ಸತ್ತರೋ ಅಥವಾ ಬದುಕಿಕೊಂಡರೋ ತಿಳಿಯದು. ಅವರಿಬ್ಬರನ್ನೂ ಮತ್ತೂ ನಿರೀಹರಾಗಿಯೂ ನಿರಪರಾಧಿಗಳಾಗಿಯೂ ಇದ್ದ ಆ ನಿಹತ ಪ್ರಹರಿಗಳಿಬ್ಬರನ್ನೂ ಗ್ರಾಸಮಾಡಿದ ಕ್ಷುಧಾತುರಳಾದ ಭಯಂಕರ ನಿಶಾರಾಕ್ಷಸಿಯು ಆಗ ಸ್ವಲ್ಪ ಮಟ್ಟಿಗೆ ಶಾಂತಳೂ ಸುಸ್ಥಿರಳೂ ಆದಂತೆ ತೋರಿದಳು. ಮೇಘಾಂಧಕಾರಮಯವಾದ ಆಕಾಶವು ಇನ್ನೂ ಪರಿಷ್ಕಾರವಿಲ್ಲ—ಬೇಗನೆ ಆಗುವ ಸಂಭವವೂ ಇಲ್ಲ. ಈಗಲೂ ಮೇಘವು ನಕ್ಷತ್ರಗಳನ್ನು ಮುಚ್ಚಿ, ಚಂದ್ರನಿಗೆ ಮರೆಯಾಗಿ ಕೋಮಲವಾದ ನೀಲವರ್ಣವನ್ನು ಹರಡಿರುವಂತೆ ನಿಬಿಡವಾಗಿಯೇ ಇದ್ದಿತು. ಆಕಾಶದಲ್ಲಿ ಅಂಕಿತವಾದಂತೆ ತೋರುತ್ತ ಬಹುದೂರ ವ್ಯಾಪಿಯಾದ ನದಿಯ ತೀರದಲ್ಲಿರುವ ವನವೃಕ್ಷಸಮೂಹವು ಝೇಂಕಾರಸಹಿತವಾಗಿ ಹಿಂದಕ್ಕೂ ಮುಂದಕ್ಕೂ ಹಾಗೆಯೇ ತೂಗಾಡುತ್ತಿದ್ದುದರಿಂದ ಅಂಧಕಾರ ಸಮುದ್ರವು ಉಕ್ಕಿ ಅಲೆಗಳಿಂದ ಒಡಗೂಡಿರುವಂತೆ ತೋರುತ್ತಲಿದ್ದಿತು.

ರಕ್ತದಿಂದ ತೊಯ್ದ ಆ ಮೃತದೇಹವನ್ನು ನೋಡಿ, ಯಾವುದೋ ದಾರುಣವಾದ ದುರ್ಘಟನೆಯು ಘಟಿಸಿರುವುದೆಂದು ತಿಳಿದುಕೊಳ್ಳಲು ಪ್ರಹರಿಗೆ ಬಾಕೀವುಳಿಯಲಿಲ್ಲ. ಮೊದಲು ಫೂಲಸಾಹೇಬನ ಮೇಲೆಯೇ ಸಂದೇಹಿಸಿದನು; ಆ ದುಸ್ಸಾಹಸಿಕ ಕಾರ್ಯವು ಅವನಿಂದಲೇ ನಡೆದಿರಬೇಕೆಂದು ತೋರಿತು. ಫೂಲಸಾಹೇಬನು ಬಂದಿಯಾಗಿರುವುದರಿಂದ ಇಂತಹ ದುರ್ಘಟನೆಯೊಂದು ಅವಶ್ಯಕವಾಗಿಯೂ ಸಂಭವಿಸಬಹುದೆಂಬ ಭಯವು, ಕಾರ್ಯಾಧ್ಯಕ್ಷನಿಂದ ಪ್ರಹರಿಯ ಪರ್ಯಂತವಾಗಿ, ಎಲ್ಲರಲ್ಲಿಯೂ ಬೇರೂರಿತ್ತು.

ಆಗ ಪ್ರಹರಿಯು ಹಿಂದಿರುಗಿ ಹೋಗಿ ಮತ್ತೊಬ್ಬನ ಮೂಲಕ ವಾಗಿ, ಈ ವರ್ತಮಾನವನ್ನು ಮೇಲಣ ಅಧಿಕಾರಿಗೆ ಹೇಳಿಕಳುಹಿಸಿದನು. ನಿಶ್ಚಿಂತವಾಗಿದ್ದ ಬಂದೀಖಾನೆಯಲ್ಲಿ ಒಡನೆಯೇ ಒಂದು ಬಗೆಯ ವ್ಯಾಕುಲತೆಯು ತುಂಬಿ, ಭಯವು ಮೂರ್ತಿಮತ್ತಾಗಿರುವಂತೆ ತೋರಿತು. ಎಲ್ಲಕ್ಕೂ ಮೊದಲು ಫೂಲಸಾಹೇಬನನ್ನು ಹುಡುಕಿದರು. ಅಲ್ಲಿ ಫೂಲಸಾಹೇಬನಿಲ್ಲ; ಆ ಜುಮುಲೆಯೂ ಇಲ್ಲ; ಕೊಠಡಿಯು ಶೂನ್ಯವಾಗಿದೆ!

ಬಾಗಿಲಿಗೆ ಇದಿರಾಗಿ, ನೆಲದಮೇಲೆ ಲಂಕೇಶ್ವರನ ಕಳೇಬರವು ಬಿದ್ದಿದ್ದಿತು; ನೀರವ ಮತ್ತೂ ನಿಷ್ಪಂದ! ಫೂಲಸಾಹೇಬನನ್ನು ಹುಡುಕುವುದಕ್ಕೋಸ್ಕರ ಕೂಡಲೇ ಜನರು ಹೊರಟರು. ಪ್ರತಿಯೊಂದು ಪೋಲೀಸು ಠಾಣೆಗೂ ವರ್ತಮಾನವು ಕೊಡಲ್ಪಟ್ಟಿತು. ಕೇಳಿ ಎಲ್ಲ ಪೋಲೀಸರ ತಲೆಗಳೂ ಬಹಳ ಮಟ್ಟಿಗೆ ಅಸ್ಥಿರವಾದುವು. ಯೋಗೇಂದ್ರನಾಥನ ತಲೆಯು ಅತ್ಯಂತ ಚಂಚಲಗೊಂಡಿತು.

ಗ್ರಾಮವಾಸಿಗಳಿಗೆ ಒಂದು ದಿನದೊಳಗಾಗಿ ಫೂಲಸಾಹೇಬನ ಪೂರ್ಣ ಪರಿಚಯವಾಯಿತು; ಅವನು ಪಲಾಯನಮಾಡಿದ ಕಥೆಯನ್ನು ಮಾರನೆಯ ಬೆಳಿಗ್ಗೆಯೇ ಎಲ್ಲರೂ ಕೇಳಿ ವಿಸ್ಮಯಪಟ್ಟರು; ಹಾಗೆಯೇ ಭಯಪಟ್ಟರು; ಮತ್ತೂ ಜಾಗ್ರತರಾದರು. ಇಷ್ಟರಮೇಲೆ ಫೂಲಸಾಹೇಬನು ಹತಾಶನಾಗಿ ಯಾರ ಸರ್ವನಾಶವನ್ನಾದರೂ ಮಾಡಿಯಾನೆಂಬ ಭಯದಿಂದ ಪ್ರತಿಯೊಬ್ಬರೂ ಉತ್ಕಂಠಿತರಾದರು.

ಗ್ರಾಮವಾಸಿಗಳು ಫೂಲಸಾಹೇಬನು ಪುನಃ ಸೆರೆ ಸಿಕ್ಕಲೆಂದು ಏಕಾಗ್ರಮನದಿಂದ, ತ್ರಿಕರಣ ಶುದ್ಧರಾಗಿ, ತಂತಮ್ಮ ಇಷ್ಟದೇವತೆಗಳನ್ನು ಪ್ರಾರ್ಥಿಸುತಲಿದ್ದರು. ಕೆಲವರು ಫೂಲಸಾಹೇಬನನ್ನು ಒಟ್ಟಿಗೆ ಗಲ್ಲಿನ ಮರಕ್ಕೆಂದು ಮನಸಾ ಆಣೆಮಾಡಿದರು. ಬಂದೀಖಾನೆಯ ಅಷ್ಟು ಎತ್ತರವಾದ ಗೋಡೆಯನ್ನು ಹತ್ತುವುದಕ್ಕೆ ಹೋದಾಗಲೂ ಅವನು ಬಿದ್ದು ಸಾಯಲಿಲ್ಲ! ಅವನ ಮೂಳೆಗಳು ಮುರಿದು ಪುಡಿಪುಡಿಯಾಗಿ ಹೋಗಲಿಲ್ಲ! ಈ ವಿಚಾರವಾಗಿ ನಾಲ್ಕಾರು ಜನರು ಒಳಗೊಳಗೇ ತರ್ಕ

ವಿತರ್ಕವಮಾಡುತ್ತ ಒಮ್ಮೊಂದೊಮ್ಮೆಗೆ ದೀರ್ಘವಾಗಿ ನಿಟ್ಟುಸಿರು ಬಿಟ್ಟು, ಅದರಿಂದ ಆ ಪ್ರಭಾತಕಾಲದ ಶೀತಲವಾಯುವನ್ನು ಉಷ್ಣ ಮಾಡುತ್ತ ಲಿದ್ದರು. ಪ್ರಹರಿಯ ಚೂರಿಯು ಫೂಲಸಾಹೇಬನ ಎದೆಯಲ್ಲಿ ನಾಟದೆ, ಫೂಲಸಾಹೇಬನ ಚೂರಿಯು ಪ್ರಹರಿಯ ಪಕ್ಷದಲ್ಲಿ ನಾಟಿಕೊಂಡುದ ರಿಂದ ಆ ಮಹಾಂಧಕಾರದಲ್ಲಿ ವಿಧಾತನಿಗೆ ಮಹಾಭ್ರಮೆಯುಂಟಾಗಿರ ಬೇಕೆಂದು ನಿಶ್ಚಯಿಸಿ, ಲಘು ಪಾಪಕ್ಕೆ ಗುರು ಶಿಕ್ಷೆಯ ನ್ಯಾಯದಂತೆ ವಿಧಾತನ ಮುಖಕ್ಕೆ 'ಬೆಂಕಿ' ಎಂದು ಕೆಲವರೂ, ಬಹು ದಿನಗಳ ಉಪಯೋಗದಿಂದ ಅರ್ಥಕ್ಕೆ ಹೆಚ್ಚಾಗಿಯೇ ಸವೆದಿರುವ 'ತುಂಡು ಪೊರಕೆ'ಯೆಂದು ಕೆಲವರೂ ತೀರ್ಮಾನಿಸಿದರಲ್ಲದೆ, ಉಳಿದವರು ತಮ ತಮಗೆ ಮನಬಂದ ರೀತಿಯಲ್ಲಿ ಕಟಕಿದನಂತರ ಸ್ವಲ್ಪಮಟ್ಟಿಗೆ ಸಮಾಧಾನಗೊಂಡರು.

---

## ಎಂಟನೆಯ ಪರಿಚ್ಛೇದ

### ಬೆಳಗಿನ ಝಾವದಲ್ಲಿ

ಅರುಣೋದಯ ಸಮಯದಲ್ಲಿ ಯೋಗೇಂದ್ರನಾಥನು ಅರಿಂದಮ ನನ್ನು ಕರೆದುಕೊಂಡು ಸೆರೆಮನೆಗೆ ಬಂದನು. ಫೂಲಸಾಹೇಬನು ಒಂದು ರಾತ್ರಿಯೊಳಗಾಗಿ ಮಾಡಿದ ಕೆಲಸಗಳಿಂದ ಇಬ್ಬರೂ ಸ್ತಂಭಿತ ರಾದರು. ಯಾವ ರೀತಿಯಲ್ಲಿ, ಎಂತಹ ಉಪಾಯದಿಂದ, ದಾಸವ ದಾಸಿಯರು ಕಾವಲುಗಾರರಿಬ್ಬರನ್ನು ಕೊಂದು, ಗೋಡೆಯನ್ನು ದಾಟಿದರೆಂಬುದನ್ನು ಎಷ್ಟು ಊಹಿಸಿದರೂ ಸರಿಯಾಗಿ ತೋರಲಿಲ್ಲ. ಹೊರಗಿನ ಮನುಷ್ಯನ ಸಹಾಯವಿಲ್ಲದೆ ಇಂತಹ ಕಾರ್ಯವೆಂದಿಗೂ ಆಗತಕ್ಕುದಲ್ಲವೆಂದು ಅರಿಂದಮನು ಆಲೋಚಿಸಿದನು. ಅರಿಂದಮನು ಫೂಲಸಾಹೇಬನ ಅಮಾನುಷಿಕವಾದ ಸಾಹಸದಿಂದ, ಅಮಾನುಷಿಕವಾದ ಬುದ್ಧಿಶಕ್ತಿಯ ದೆಸೆಯಿಂದ, ಅಮಾನುಷಿಕ ಪರಾಕ್ರಮದ ದೆಸೆಯಿಂದ, ಅಮಾನುಷಿಕ ಕೌಶಲದ ದೆಸೆಯಿಂದ ಮತ್ತೂ ಆ ಪ್ರಾಕಾರದ ಮೇಲಿದ್ದ ಪ್ರಹರಿಯನ್ನು ಕೊಲೆಮಾಡಿರುವ ಅಮಾನುಷಿಕವಾದ ರೀತಿಯ ದೆಸೆ

ಯಿಂದ ಅವನನ್ನು ತಾನೆಂದಿಗೂ ಮನುಷ್ಯರ ಗಣನೆಯಲ್ಲಿ ಸೇರಿಸಲಾಗುವುದಿಲ್ಲವೆಂದೂ, ದಾನವರಲ್ಲಿ ಫೂಲಸಾಹೇಬನೊಬ್ಬ ಪ್ರಮುಖ ದಾನವನಾಗಿರಬೇಕೆಂದು ಭಾವಿಸಿದನು. ಅವನಿಗಾಗಿ ಮನಸ್ಸಿನಲ್ಲಿಯೇ ಅಸಂಖ್ಯಾಕವಾದ ಧನ್ಯವಾದಗಳನ್ನು ಮಾಡಿದನು.

ಆ ಸೆರೆಮನೆಯೊಳಕ್ಕೆ ಪ್ರವೇಶ ಮಾಡಿದಕೂಡಲೇ, ಫೂಲಸಾಹೇಬನು ದೊಡ್ಡದೊಡ್ಡ ಅಕ್ಷರಗಳಿಂದ ಗೋಡೆಯ ಮೇಲೆ ಬರೆದಿದ್ದ ಆ ಮೂರು ಪಙ್ಕ್ತಿಗಳನ್ನು ಮೊದಲು ಅರಿಂದಮನೇ ನೋಡಿದನು. ಅರಿಂದಮನು ಕಿರುನಗೆಯೊಂದಿಗೆ, "ಯೋಗೇಂದ್ರಬಾಬು, ನಾನು ಪುನಃ ಜಾಗ್ರತೆಯಾಗಿಯೇ ಫೂಲಸಾಹೇಬನನ್ನು ಹಿಡಿಯಬಲ್ಲೆ; ಅವನು ಎಲ್ಲಿಯೂ ಓಡಿಹೋಗಿಲ್ಲ. ಇಷ್ಟರಲ್ಲಿಯೇ ಈ ಗ್ರಾಮಕ್ಕೆ ಪುನಃ ಬರುತ್ತಾನೆ" ಎಂದು ಹೇಳಿದನು.

ಯೋಗೇಂದ್ರ—ಅದು ತಮಗೆ ಹೇಗೆ ತಿಳಿಯಿತು ?

ಅರಿಂದಮ—ಅವನು ನನ್ನನ್ನು ಕೊಲ್ಲುವುದಾಗಿ ಪ್ರತಿಜ್ಞೆಮಾಡಿದ್ದಾನೆ. ಗೋಡೆಯ ಮೇಲೆ ಏನು ಬರೆದಿದೆಯೋ ಒಂದು ಸಲ ಓದಿ ನೋಡಿರಿ.

ಯೋಗೇಂದ್ರ—ಹಾಗೆಯೆ! ಎಂತಹ ಭಯಂಕರ ಮನುಷ್ಯ! ಇಂಥವನನ್ನು ನಾನೆಲ್ಲಿಯೂ ನೋಡಿಲ್ಲ.

ಅರಿಂದಮ—ಕಳ್ಳರನ್ನೂ, ದರೋಡೆಯವರನ್ನೂ, ಕೊಲೆಪಾತಕರನ್ನೂ ಹಗಲೂ ರಾತ್ರಿ ಹುಡುಕುತ್ತಲಿರುವ ನನಗೆ ಈ ವಿಷಯದಲ್ಲಿ ಸ್ವಲ್ಪ ತಿಳಿವಳಿಕೆಯುಂಟು. ಇದನ್ನು ನೀವೂ ಸ್ವಲ್ಪಮಟ್ಟಿಗೆ ತಿಳಿದಿರುವಿರೆಂದು ತೋರುತ್ತದೆ. ನಾನು ಆ ಜನರ ಬಲ, ಬುದ್ಧಿಗಳ ವಿಷಯವನ್ನು, ಬಹಳಮಾಡಿ, ಅವರುಗಳನ್ನು ನೋಡಿದ ಕೂಡಲೇ ಊಹಿಸಿ ತಿಳಿಯಬಲ್ಲೆ; ಈಗ ಆ ಫೂಲಸಾಹೇಬನನ್ನು ನೋಡಿದ್ದರಲ್ಲಿ ನನಗೆ ಸರಿಯಾದ ಪ್ರತಿದ್ವಂದ್ವಿಯು ಅವನೊಬ್ಬನೇ ಎಂದು ತಿಳಿಯುತ್ತೇನೆ.

ಯೋಗೇಂದ್ರ—ಫೂಲಸಾಹೇಬನ ದೇಹಶಕ್ತಿಯ ವಿಚಾರದಲ್ಲಿ ನಿಮ್ಮ ಅಭಿಪ್ರಾಯವೇನು ?

ಅರಿಂದಮ—ನನ್ನ ಅಭಿಪ್ರಾಯವು ತಿಳಿಯಬೇಕಾದರೆ ನನ್ನನ್ನು ದ್ವಿಗುಣಿಸಿ ನೋಡಬೇಕು.

ಯೋಗೇಂದ್ರ—ಅರಿಂದಮಬಾಬು! ನಾನು ಬೇರೆ ಈ ಮಾತು ನಂಬಲಾರೆ.

ಅರಿಂದಮ—ನಾನು ಶಕ್ತಿವಂತನಾಗಿರುವುದನ್ನು ಬಲ್ಲ ಈ ಪ್ರಾಂತ್ಯ ಜನರು, ನನ್ನ ಹೆಸರು ಹೇಳಿದ ಕೂಡಲೇ ಎರಡನೆಯ ಭೀಮಸೇನನೆಂದು ಹೇಳಿಬಿಡುವರೆಂದು ಕೇಳಿದ್ದೇನೆ; ಇಂಥವರಿಗೆ ಫೂಲಸಾಹೇಬನ ಪರಿಚಯವು ಚೆನ್ನಾಗಿ ಆಗಿದ್ದ ಪಕ್ಷದಲ್ಲಿ ಅವನೇ ನಿಜವಾದ ಭೀಮಸೇನನೆಂದು ಹೇಳುವುದಕ್ಕೆ ಕೊಂಚವೂ ಹಿಂಜರಿಯಲಾರರು; ಶಾರೀರಕ ಶಕ್ತಿಯಲ್ಲಿ ಫೂಲಸಾಹೇಬನು ನನಗಿಂತ ಎರಡರಷ್ಟು ಬಲವಂತ.

ಯೋಗೇಂದ್ರ—ಆದರೆ ಮನಶ್ಶಕ್ತಿಯಲ್ಲಿಯೋ?

ಅರಿಂದಮ—ಅದರಲ್ಲಿ ಅವನು ನನಗೆ ಸಮಾನನು. ಅವನಲ್ಲಿ ತೋರಿಬರುವ ಬುದ್ಧಿಮತ್ತತೆ, ಕಾರ್ಯತತ್ಪರತೆ, ಕಠಿಣತೆ ಮುಂತಾದುವುಗಳಿಗಾಗಿ ಅವನನ್ನು ಹೊಗಳಲೇಬೇಕು. ಅವು ಹಾಗಿರಲಿ; ಯಾವುದೂ ಸುಲಭವಾಗಿ ಸಾಧ್ಯವಾಗುವ ಹಾಗಿಲ್ಲವೆಂದು ತೋರುತ್ತಿದೆ; ಹೇಗಾದರೂ ಅವನನ್ನೂ ಒಂದು ದಿನ ದಸ್ತಗಿರಿ ಮಾಡುತ್ತೇನೆ. ಅವನು ಎಂದಿಗೂ ನನ್ನ ಕೈಯಿಂದ ತಪ್ಪಿಸಿಕೊಂಡು ಪಲಾಯನ ಮಾಡಲಾರನು. ಅವನೇ ನನಗೆ ಸರಿಯಾದ ಪ್ರತಿದ್ವಂದ್ವಿ; ಅಂಥವನಿಗೋಸ್ಕರ ನಾನು ಪ್ರಾಣಾಂತವಾಗಿ ಪ್ರಯತ್ನಪಡುತ್ತೇನೆ.

ಯೋಗೇಂದ್ರ—ಅವನು ಅಂತಹ ಭಯಂಕರ ಮನುಷ್ಯನಾಗಿದ್ದ ಪಕ್ಷದಲ್ಲಿ, ಒಂದು ಕೆಲಸ ಮಾಡೋಣಾಗಲಿ; ಇನ್ನು, ಈ ಕೆಲಸದಲ್ಲಿ ತಾವು ಒಬ್ಬಂಟಿಗರಾಗಿ ಕೈಹಾಕಬೇಡಿ; ತಮಗೆ ಸಹಾಯಮಾಡುವುದಕ್ಕೆ ಎಂತಹ ಮನುಷ್ಯನು ಆವಶ್ಯಕವೆಂಬುದನ್ನು ತಿಳುಹಿದರೆ, ನಾನು ಅಂಥವನನ್ನು ಒದಗಿಸಿಕೊಡಲು ಸಿದ್ಧನಾಗಿದ್ದೇನೆ.

ಅರಿಂದಮ—ಇಲ್ಲ, ಅದಾಗಲಾರದು. ನೀವು ಹೀಗೆ ಹೇಳುವುದಾದರೆ ಇನ್ನು ಮುಂದೆ ನಾನು ಈ ಕಾರ್ಯದಲ್ಲಿ ತೊಡಗುವುದೇ ಇಲ್ಲ. ನಾನು ಒಬ್ಬಂಟಿಗನಾಗಿದ್ದುಕೊಂಡು ಈ ಕೆಲಸಕ್ಕೆ ತೊಡಗಿದೆನು; ಒಬ್ಬಂಟಿಗನಾಗಿದ್ದುಕೊಂಡೇ ಇದನ್ನು ಮುಗಿಸುವ ಪ್ರಯತ್ನಮಾಡುತ್ತೇನೆ. ಈ ವಿಚಾರದಲ್ಲಿ ನೀವು ಯಾವ ಆತಂಕವನ್ನೂ ತಂದೊಡ್ಡಬೇಡಿ.

ಯೋಗೇಂದ್ರ—ಆದರೆ ಅರಿಂದಮಬಾಬು......

ಅರಿಂದಮ—(ಮುಂದೆ ಮಾತನಾಡಗೊಡದೆ) ಕ್ಷಮಿಸಬೇಕು; ಹಾಗೆಂದಿಗೂ ಆಗಲಾರದು. ಈ ಕೆಲಸದ ಭಾರವನ್ನು ನೀವು ನನಗೆ ವಹಿಸಿ ಕೊಟ್ಟಿರಲ್ಲವೆ? ಈ ಕಾರ್ಯವನ್ನು ನಾನು ಎಲ್ಲಿಯವರೆಗೆ ಬಿಟ್ಟು ಬಿಡುವುದಿಲ್ಲವೋ ಅಲ್ಲಿಯವರೆಗೂ ಇದನ್ನು ನಿರ್ವಹಿಸುವ ಭಾರವು ನನ್ನದಾಗಿಯೇ ಇರಬೇಕು.

ಯೋಗೇಂದ್ರ—ನನ್ನ ಮಾತನ್ನೂ ಸ್ವಲ್ಪ ಲಾಲಿಸಬೇಕು. ಅರಿಂದಮಬಾಬು! ಫ್ರೂಲಿಸಾಹೇಬನು ಸಾಮಾನ್ಯನಲ್ಲ; ಇದನ್ನು ನೀವು ಬಲ್ಲಿರಷ್ಟೆ?

ಅರಿಂದಮ—ಬಲ್ಲೆ ಎಂದು ಹೇಳಿದ ಮಾತ್ರಕ್ಕೆ ನಿಮ್ಮ ಮಾತಿಗೆ ಹೇಗೂ ಸಮ್ಮತಿಪಟ್ಟಂತೆ ಆಗುವುದಿಲ್ಲ. ಆದರೆ ಇಷ್ಟುಮಾತ್ರ ಹೇಳುತ್ತೇನೆ. ಯಾವಾಗಲಾದರೂ ಯಾವುದಾದರೊಂದು ಬಗೆಯ ಸಾಹಾಯ್ಯವು ನನಗೆ ಬೇಕಾಗಿ ಬಂದರೆ, ಒಡನೆಯೇ ವರ್ತಮಾನ ಕೊಡುತ್ತೇನೆ. ಈ ವಿಚಾರದಲ್ಲಿ ಇನ್ನು ನಿಶ್ಚಿಂತರಾಗಿರಬಹುದು.

---

## ಒಂಬತ್ತನೆಯ ಪರಿಚ್ಛೇದ

### ಈ ಸುಂದರಿ ಯಾರು ?

ಪೂರ್ವೋಕ್ತ ಘಟನೆಯು ಒಂದು ವಾರದನಂತರ; ಒಂದು ದಿನ; ಶರತ್ಕಾಲದ ನಿರ್ಮಲಾಕಾಶದಲ್ಲಿ ಚಂದ್ರನು ಸ್ನಿಗ್ಧಕಿರಣಗಳಿಂದ ಪ್ರಕಾಶಮಾನನಾಗಿದ್ದಾನೆ. ಚಂದ್ರಕಿರಣದಿಂದ ಉಜ್ವಲವಾಗಿಯೂ

ಚಂಚಲವಾಗಿಯೂ ಹಗುರವಾಗಿಯೂ ಇರುವ ಬಿಳಿಯ ಮೋಡದ ತುಣುಕುಗಳು ಚಂದ್ರನ ಅಡಿಯಲ್ಲಿ ಒಂದರ ಹಿಂದೆ ಒಂದು, ಅದರ ಹಿಂದೆ ಮತ್ತೊಂದು, ಅದರ ಹಿಂದೆ ಇನ್ನೊಂದು—ಈ ಕ್ರಮವಾಗಿ ಒಂದು, ಒಂದೊಂದು ಸಲ ಸುಧಾಕಿರಣವನ್ನು ಆಲಿಂಗಿಸಿ ತೃಪ್ತಿಗೊಂಡು ದೂರ ದೂರವಾಗಿ ಹೊರಡುತ್ತಿವೆ. ಆಗ, ರಾತ್ರಿ ಸುಮಾರು ಎರಡನೆಯ ಝಾಮ. ಇಂತಹ ವೇಳೆಯಲ್ಲಿ ಯುವಕನಾದ ಆರೋಹಿಯೊಬ್ಬನನ್ನು ಹೊತ್ತುಕೊಂಡು ದೋಣಿಯೊಂದು ಗಂಗಾವಕ್ಷದಲ್ಲಿ ಕಲಿಕತ್ತಾಭಿಮುಖವಾಗಿ ಮಂದಗತಿಯಿಂದ ಪ್ರಯಾಣ ಮಾಡುತ್ತಿದೆ. ಪರಿಷ್ಕಾರವಾದ ಬೆಳದಿಂಗಳಿಂದ ಪ್ರಕೃತೀದೇವಿಯು ಸಂಪೂರ್ಣವಾಗಿ ತೊಯಿದು ನಿಂತಿದ್ದಾಳೆ. ಗಂಗಾನದಿಯ ಉಭಯ ಪಾರ್ಶ್ವಗಳಲ್ಲಿ ಎತ್ತ ನೋಡಿದರೂ ಬಹುದೂರದವರೆಗೆ ವ್ಯಾಪಿಸಿಕೊಂಡಿರುವ ಶ್ಯಾಮಲವರ್ಣದ ಸಸ್ಯಕ್ಷೇತ್ರಗಳು ಮಂದಮಾರುತನಿಂದ ಆಂದೋಳನಗೊಳ್ಳುತ್ತಿವೆ. ಒಂದೊಂದು ಕಡೆ, ಬಹಳ ಎತ್ತರವಾಗಿರುವ ತಾಲ, ತಮಾಲ, ನಾರಿಕೇಳ ಮೊದಲಾದ ವೃಕ್ಷಗಳು ಅಲುಗದೆ ನಿಶ್ಶಬ್ದವಾಗಿ ನಿಂತುಕೊಂಡಿವೆ. ಒಂದೆಡೆ ದಿಗಂತದವರೆಗೆ ದಟ್ಟವಾಗಿ ವ್ಯಾಪಿಸಿದಂತಿರುವ ಶ್ಯಾಮಲವರ್ಣದ ವನಶ್ರೇಣಿಯು ಚಂದ್ರಕಿರಣದಿಂದ ಮನೋಹರವಾಗಿದೆ, ಮಂದಮಾರುತನಿಂದ ಅಲುಗಾಡುತ್ತಿದೆ, ಝಿಲ್ಲಿಕಾ ರವದಿಂದ ಝೇಂಕರಿಸುತ್ತಿದೆ, ಖದ್ಯೋತ ಖಚಿತವಾಗಿದೆ; ಮತ್ತೊಂದು ಕಡೆಯಲ್ಲಿ ಮಾವಿನ ತೋಟ; ಅದರಲ್ಲಿ ಕಾವಲುಗಾರನು ಕುಳಿತು ಸಿಳ್ಳು ಹಾಕುತ್ತಿದ್ದಾನೆ. ಇದರಿಂದಲೂ, ಎಚ್ಚರಗೊಂಡ ಹಕ್ಕಿಗಳ ಶಬ್ದ ತರಂಗದಿಂದಲೂ ಕೋಮಲವಾದ ಆಕಾಶದಲ್ಲಿ ಪ್ರತಿಧ್ವನಿಯಾಗುತ್ತಲಿದೆ; ಇನ್ನೊಂದು ಕಡೆ ತೃಣಸಮೃದ್ಧವಾಗಿ ಬಹು ವಿಸ್ತಾರವಾಗಿರುವ ಪ್ರಾಂತರವು ತಿಂಗಳ ಬೆಳಕಿನಿಂದ ಬಹು ಮನೋಹರವಾಗಿದೆ. ಅಲ್ಲಿ, ಆ ಶರದಾಗಮಸಮಯದಲ್ಲಿ ಹಚ್ಚಗೆ ಬಹು ಕೋಮಲವಾಗಿ ಬೆಳೆದಿರುವ ಗರಿಕೆಯ ಹಾಸಿನಲ್ಲಿ ಜ್ಯೋತ್ಸ್ನೆಯು ನಿದ್ರಿಸುತ್ತಿರುವಳೋ ಎನ್ನುವ ಹಾಗಿದೆ. ಆ ಸ್ಥಳದಲ್ಲಿ ಸಂಪೂರ್ಣವಾದ ನಿಸ್ತಬ್ಧತೆ, ಅನಂತವಾದ ಶುಭ್ರತೆ ಮತ್ತೂ ಶೂನ್ಯತೆಗಳ ವಿನಾ ಯಾವುದೂ ಇರಲಿಲ್ಲ. ದೋಣಿ

ಯಲ್ಲಿ ಕುಳಿತಿದ್ದ ಯುವಕನು ಮುಗ್ಧಚಿತ್ತನಾಗಿ ನಟ್ಟದೃಷ್ಟಿಯಿಂದ ಈ ಎಲ್ಲ ನೋಟಗಳನ್ನೂ ಬಹು ವಿಸ್ಮಯದಿಂದ ನೋಡುತ್ತಾ ಪ್ರಯಾಣ ಮಾಡುತ್ತಿದ್ದಾನೆ. ಗಂಗಾವಕ್ಷವು ಶಾಂತವಾಗಿಯೂ ಜ್ಯೋತ್ಸ್ನಾಮಯವಾಗಿಯೂ ವಿರಾಜಿಸುತ್ತಿದೆ. ನೌಕೆಯು ಭಾರಹೊತ್ತುಕೊಂಡು ಮುಂದೆ ನಡೆಯುತ್ತಿದೆ; ಅದರ ಎರಡು ಕಡೆಗಳಲ್ಲಿಯೂ ಜಲವು ಕಲಕಲನಾದದಿಂದ ಹರಿಯುತ್ತಿದೆ. ದೋಣಿಯು ನಡೆಯಿಂದ ಉಂಟಾದ ಕಲಕಲನಾದವೂ ತೀರ ಪ್ರದೇಶದಲ್ಲಿ ಜ್ಯೋತ್ಸ್ನಾಮಂಡಿತವಾದ ವೃಕ್ಷಶ್ರೇಣಿಯಿಂದ ಕೇಳಿಬರುವ ಮೃದುವಾದ 'ಶನ್-ಶನ್' ಶಬ್ದವೂ ಸೇರಿ ದಿಗಂತ ವಿಶ್ರಾಂತವಾದ ವಿಜನತೆಯ ಮಧ್ಯೆ ಅಪೂರ್ವವಾದ, ಅಪಾರ್ಥಿವವಾದ, ಹಾಗೆಯೇ ಎಂದೂ ಕೇಳದಿರುವಂತಹ ಸುಮಧುರ ಸಂಗೀತ ಸ್ರೋತವೇ ಪ್ರವಹಿಸುತ್ತಿರುವಂತೆ ಕೇಳಿಬರುತ್ತಿರುವುದು. ಕಾಲ ವ್ಯತ್ಯಾಸವಿಲ್ಲದೆ ಕೇಳಿಬರುವ ಜಲ್ಲಿಯ 'ಝುಪ್-ಝುಪ್' ಶಬ್ದವು ಮೆಲ್ಲಗೆ ತಾಳಹಾಕುವಂತೆ ಮನೋಹರವಾಗಿ ಕೇಳಿಬರುವುದು. ಒಂದೊಂದು ಸಾರಿ ಜಲ್ಲಿಯ ಶಬ್ದವು ಲಯಚ್ಯುತವಾಗಿ ಶ್ರುತಿಕಟುವಾಗಿ ತೋರಿದಾಗ, ಮರಗಳ ಮೇಲೆ ವಿಶ್ರಾಂತಿಗೊಳ್ಳುತ್ತಿರುವ ಕಾಗೆಗಳನ್ನು ಎಚ್ಚರಗೊಳಿಸಿ ಜಾಗೃತಿಗೊಳಿಸುವಂತೆ ಭಾಸವಾಗುವುದು.

ದೋಣಿಯು ಪೂರ್ವತೀರಕ್ಕೆ ಸಮೀಪವಾಗಿ ನಡೆಯುತ್ತಿದೆ. ಗಂಗೆಗೆ ಆ ಕಡೆಯಲ್ಲಿಯೇ ತೃಣಾಚ್ಛಾದಿತವಾಗಿರುವ ವಿಸ್ತಾರವಾದ ವನಭೂಮಿ. ಅಲ್ಲಿ, ದಡದಮೇಲೆ ಬಿಳಿಯ ಉಡಿಗೆಗಳಿಂದೊಪ್ಪಿದ ನಾರೀಮೂರ್ತಿ ನಿಂತಿರುವುದನ್ನು ಯುವಕನು ನೋಡಿದನು. ಅವಳ ಮೂಗಿನ ತುದಿಯವರೆಗೂ ಎಳೆದಿದ್ದ ಮುಖಪರದೆಯು ಅವಳ ಮುಖಮಂಡಲಕ್ಕೆ ಮರೆಯಾಗಿದೆ. ಕಾಣಿಸುತ್ತಿದ್ದ ಆ ಸುಂದರವಾದ ಮುಖಮಂಡಲದ ಕೊಂಚ ಭಾಗದಿಂದಲೇ ಅವಳು ಅಪರೂಪ ರೂಪವತಿಯೆಂದು ಬೋಧೆಯಾಗುವುದು. ನಿರ್ಭಯಳಾಗಿ ನಿಂತಿರುವ ಶುಕ್ಲವಸನಧಾರಿಣಿಯಾದ ಈ ಸುಂದರಿ ಯಾರೆಂಬುದು ಯುವಕನಿಗೆ ಊಹಿಸಿ ತಿಳಿಯಲಾಗಲಿಲ್ಲ. ಈ ರಾತ್ರಿಯಲ್ಲಿ, ಇಂತಹ ವಿಜನ ಸ್ಥಳದಲ್ಲಿ, ಜನ

ಮಾನವ ಶೂನ್ಯವಾದ ಇಂತಹ ವನಪ್ರದೇಶದಲ್ಲಿ ಏಕಾಂಗಿಯಾಗಿ ನಿಂತಿರುವ ಈ ಸುಂದರಿ ಯಾರಿರಬಹುದು? ಇವಳ ಹಿಂದೆ ದೂರವ್ಯಾಪಿಯಾದ ವನಭೂಮಿಯು ನಿದ್ರಿಸುವಂತಿದೆ. ಎಲ್ಲೆಯಿಲ್ಲದ ನೀಲಾಕಾಶದಲ್ಲಿ ತರಳವೂ ಖಂಡಖಂಡವೂ ಆದ ಬಿಳಿಯ ಮೋಡಗಳಿಂದ ಆವೃತನಾಗಿರುವ ಚಂದ್ರನ ಪ್ರತಿಬಿಂಬವೇ, ಹೀಗೆ, ನಿಶ್ಚಲಭಾವದಿಂದ, ಶುಕ್ಲವಸನಧಾರಿಣಿಯಾಗಿ ನಿಂತಿರುವ ಈ ಯುವತಿಯಾಗಿರಬಹುದೆ? ಎಂದು ಮುಂತಾಗಿ ಭಾವಿಸಿದನು. ಅಥವಾ ತೃಣಶಯ್ಯೆಯಲ್ಲಿ ನಿದ್ರಿಸುತಿದ್ದ ಜ್ಯೋತ್ಸ್ನೆಯು ಜಲ್ಲೆಯ ಶಬ್ದದಿಂದ ಎಚ್ಚರಗೊಂಡು ಈ ಸ್ಥಳದಲ್ಲಿ ಎದ್ದುನಿಂತಳೋ? ಯುವಕನು ಯಾವುದೊಂದನ್ನೂ ನಿರ್ಧರಿಸಲಾರದವನಾದನು; ಮನಸ್ಸಿನಲ್ಲಿ ರಗಳೆ ಹೆಚ್ಚಳವಾಯಿತು. ಯುವಕನು ಎವೆಯಿಕ್ಕದೆ ವಿಸ್ಮಯ—ವ್ಯಾಕುಲ—ಮಿಶ್ರವಾದ ನೋಟದಿಂದ ಅತ್ತಕಡೆಯೇ ನೋಡುತ್ತಿದ್ದಾನೆ. ದೋಣಿಯೂ ಅತ್ತಕಡೆಯಲ್ಲಿಯೇ ನಿಧಾನವಾಗಿ ನಡೆಯುತ್ತಿದೆ.

ದೋಣಿಯು ಯುವತಿಗೆ ಸಮೀಪವಾಗಿ ಬಂದಾಗ, ಆ ಅವಗುಂಠನವತಿಯು ಬೇಗನೆ ಮೊಳಕಾಲುದ್ದ ನೀರಿಗಿಳಿದು ಬಂದಳು. ದೋಣಿಯು ಅವಳ ಮುಂಭಾಗದಲ್ಲಿ ಹತ್ತುಬಾರು ದೂರಕ್ಕೆ ಬಂದಾಗ ಆ ಮುಖಪರದೆಯ ರಮಣಿಯು ನೌಕಾರೋಹಿಯಾದ ಯುವಕನನ್ನು ಉದ್ದೇಶಿಸಿ,—ಮಹಾಶಯ, ನಾನು ತುಂಬ ವಿಪತ್ತಿಗೆ ಸಿಕ್ಕಿದ್ದೇನೆ; ಈ ಸ್ಥಳದಲ್ಲಿ, ಈ ಅವೇಳೆಯಲ್ಲಿ ಮತ್ತೆ ಯಾರ ಸಹಾಯವೂ ದೊರೆಯುವ ಭರವಸೆ ಇಲ್ಲ. ನಾನು ಹೆಂಗಸು, ಸಹಾಯಹೀನಳು; ಏನಾಗುವುದೋ ಕಾಣೆ, ಯಾವುದನ್ನೂ ಊಹಿಸಲಾರೆ. ತಾವು ಈ ಸಮಯದಲ್ಲಿ ನನ್ನಲ್ಲಿ ವಿಶೇಷ ಕೃಪೆ ತೋರದಿದ್ದರೆ ನನಗೆ ಬೇರೆ ಗತಿಯಿಲ್ಲ.—ಎಂದು ಕಾತರ ಕಂಠದಿಂದ ಮೊರೆಯಿಟ್ಟಳು.

ಈ ಮಾತುಗಳು ಯುವಕನಿಗೆ ಸ್ಪಷ್ಟವಾಗಿ ಕೇಳಿಸಿತು. ದೋಣಿಯನ್ನು ದಡಕ್ಕೆ ಸೇರಿಸುವಂತೆ ಯುವಕನು ಅಂಬಿಗನಿಗೆ ಹೇಳಿದನು. ನೌಕೆಯ ಮುಖಭಾಗವು ತಿರುಗಿ ಬಂದು ದಡಕ್ಕೆ ಆತುಕೊಂಡಿತು.

ನೌಕಾರೋಹಿಯು ಯುವತಿಯನ್ನು ಉದ್ದೇಶಿಸಿ, ಅಮ್ಮಾ! ಈಗ ನನ್ನಿಂದೇನಾಗಬೇಕು ? ನನ್ನಿಂದ ತಮಗೇನಾದರೂ ಉಪಕಾರವಾಗುವಂತಿದ್ದರೆ ಬಹು ಸಂತೋಷದಿಂದ ಮಾಡುತ್ತೇನೆ.—ಎಂದನು.

ಆ ರಮಣಿಯು ವ್ಯಾಕುಲಿತ ಹೃದಯಳಾಗಿ, ನಾನು ಕುಲಸ್ತ್ರೀ; ಇಂತಹ ರಾತ್ರಿಯಲ್ಲಿ ಅಪರಿಚಿತ ಯುವಕನೊಡನೆ ವಿಜನವಾದೆಡೆಯಲ್ಲಿ ಮಾತನಾಡುವುದೆಂದರೆ ನನ್ನ ವಿಷಯದಲ್ಲಿ ಸಂಪೂರ್ಣವಾಗಿಯೂ ಅಧರ್ಮ; ಇದಕ್ಕಿಂತ ಮರಣವೇ ಮೇಲು. ಕೇವಲ ಆತ್ಮಾದರದಿಂದ ಕುಲಸ್ತ್ರೀಯಳ ಅಮೂಲ್ಯ ಸನ್ಮಾನವನ್ನು ದೂರಮಾಡಿ, ಅವಿಧೇಯವಾದ ಕಾರ್ಯದಲ್ಲಿ ಪ್ರವೃತ್ತಳಾಗಿರುವೆನೆಂದು ತಿಳಿಯಕೂಡದು. ಸಹಾಯವಿಲ್ಲದೆ ಸಾಯುತ್ತಲಿದ್ದೇನೆ,—ಸಾಯಬಲ್ಲೆ; ಆದರೆ ಕೇವಲ ನನ್ನ ಸ್ವಾಮಿ—ಆತನು ಕಾಹಿಲೆ—ತುಂಬ ಪೀಡಿತನಾಗಿರುವನು. ಆತನನ್ನು ನೋಡುವರು ಯಾರು ? ಆತನ ಗತಿ ಏನು ? ಮಹಾಶಯ! ದಯಮಾಡಿ ನನ್ನನ್ನು ನಮ್ಮ ಮನೆಗೆ ಬಿಟ್ಟುಬರುವಿರಾದರೆ, ಮಹಾಶಯ—ಏನು ಹೇಳಲಿ! ಅದರಿಂದ ಈ ಹೆಂಗಸಿಗೆ ಎಷ್ಟೋ ಉಪಕಾರವಾಗುವುದು.—ಎಂದಳು.

ಯುವಕ—ನಿಮ್ಮ ಮನೆ ಇಲ್ಲಿಗೆ ಎಷ್ಟು ದೂರ? ಸಮೀಪವೆ?

ರಮಣಿ—ಇಲ್ಲ, ಈ ವನಭೂಮಿಗೆ ಉತ್ತರಕಡೆ ಸ್ವಲ್ಪ ದೂರವಾಗಿ. ಅಲ್ಲಿ ನೋಡಿ, ಒಂದು ಮಾವಿನ ತೋಟವು ಕಾಣಿಸುವುದು; ಬರುವ ಸಮಯದಲ್ಲಿ ನೋಡಿರಬಹುದೆಂದು ತೋರುತ್ತದೆ; ಆ ತೋಟದ ಮಧ್ಯಭಾಗದಿಂದ ಪೂರ್ವಮುಖವಾಗಿ ಊರೊಳಕ್ಕೆ ಹೋಗುವ ದಾರಿಯಿದೆ; ಆ ದಾರಿಯಲ್ಲಿ ಸ್ವಲ್ಪದೂರ ಹೋಗಬೇಕು. ನಾನು ಒಂಟಿಗಳಾಗಿ ಹೋಗಲು ಧೈರ್ಯವಿಲ್ಲ. ಸಹಾಯಹೀನೆಯಾದ ಹೆಂಗಸಿಗೆ ದಾರಿಯಲ್ಲಿ ಅನೇಕ ವಿಪತ್ತುಗಳುಂಟಷ್ಟೆ?

ಆ ಹೆಂಗಸಿನ ಆ ಮಾತುಗಳನ್ನು ಕೇಳಿ, ಅವಳ ಆ ವೇಷವಿನ್ಯಾಸಗಳನ್ನು ನೋಡಿ, ಭಾವಭಂಗಿಗಳಿಂದ, ಅವಳು ಕುಲರಮಣಿಯೇ ಎಂದು ಯುವಕನು ನಂಬಿದನು. ಅಲ್ಲದೆ ಅವಳ ಆ ಅವಸ್ಥೆಯ ಕಾರಣವನ್ನು

ತಿಳಿವುದಕ್ಕೆ ಅವನ ಮನಸ್ಸು ತುಂಬ ತವಕಗೊಂಡಿತು. ನೀವು ಕುಲಾಂಗನೆಯರಾಗಿದ್ದು ಈ ಅವೇಳೆಯಲ್ಲಿ ಇಂತಹ ಭಯಂಕರ ಸ್ಥಾನಕ್ಕೆ ಏತಕ್ಕಾಗಿ ಬಂದಿರೋ ತಿಳಿಯಲಿಲ್ಲವಲ್ಲ?—ಎಂದು ಕೇಳಿದನು.

---

## ಹತ್ತನೆಯ ಪರಿಚ್ಛೇದ

### ಸುಂದರಿಯ ಪರಿಚಯ

ಆ ಅವಗುಂಠನವತಿಯು ಹೇಳತೊಡಗಿದಳು—ನನ್ನ ಸ್ವಾಮಿಯು ಇಂದಿಗೆ ಎರಡು ವರ್ಷಗಳಿಂದ ಕಾಹಿಲೆ. ಅನೇಕ ಮಂದಿ ಚಿಕಿತ್ಸಕರು ನೋಡಿದರು; ಆದರೆ ರೋಗವೆಂತಹದು? ಅಥವಾ ರೋಗಕ್ಕೆ ಕಾರಣವಾವುದು? ಎಂಬುದನ್ನು ಯಾರೂ ಕಂಡುಹಿಡಿಯಲಾರದೆ ಹೋದರು. ಅವರ ಔಷಧಿಗಳಿಂದಂತೂ ಏನೇನೂ ಫಲವಿಲ್ಲವಾಯಿತು. ಒಬ್ಬಿಬ್ಬ ಹಿಂದೂ ವೈದ್ಯರು ಅದೊಂದು ಬಗೆಯ ವಾಯುರೋಗವೆಂದು ಹೇಳಿ ಚಿಕಿತ್ಸೆಮಾಡಿದರು. ಅದರಿಂದಲೂ ಏನೂ ಅನುಕೂಲ ತೋರಲಿಲ್ಲ. ಅನುಕೂಲ ತೋರುವುದಕ್ಕೆ ಬದಲಾಗಿ ನನ್ನ ಸ್ವಾಮಿಯ ಕಾಹಿಲೆ ಹೆಚ್ಚುತ್ತ ಬಂದಿತು; ಮೊದಲು ದಿನ ಒಂದಕ್ಕೆ ಒಂದುಸಲ ಮೂರ್ಛೆ ಬರುತ್ತಿದ್ದಿತು; ಈಗ ದಿನವಹಿ, ಎರಡು ಮೂರಾವರ್ತಿ ಮೂರ್ಛೆ ಬರುವುದಕ್ಕೆ ಮೊದಲಾಯಿತು. ಮೊದಲು ಒಂದು ಗಂಟೆಯ ವರೆಗೆ ಮೂರ್ಛಿತನಾಗಿರುತ್ತಿದ್ದನು. ಮೂರ್ಛೆ ತಿಳಿದನಂತರ ಚೆನ್ನಾಗಿ ಜ್ಞಾನ ಬರುತಿತ್ತು; ಈಗ ಒಂದುಸಲ ಮೂರ್ಛೆ ಬಂದರೆ ಎರಡು ಗಂಟೆಯವರೆಗೂ ಜ್ಞಾನ ಬರುವಹಾಗಿಲ್ಲ. ಮೂರ್ಛೆ ತಿಳಿದರೂ ಅರ್ಧ ಗಂಟೆಯ ತನಕ ಆ ಮಂಪರ ಇದ್ದೇ ಇರುತ್ತದೆ; ಹುಚ್ಚನಹಾಗೆ ಏನೇನೋ ಮಾತನಾಡಿಕೊಳ್ಳುತ್ತಲೇ ಇರುತ್ತಾನೆ. ಕಲಿಕತ್ತೆಗೆ ತೀರ ದಕ್ಷಿಣವಾಗಿ 'ಬೇಹಾಲಾ' ಎಂಬ ಗ್ರಾಮವಿದೆ. ಅಲ್ಲಿ ಮೂರ್ಛೆ ರೋಗಕ್ಕೆ ಒಂದು ಮಹೌಷಧವಿರುತ್ತದೆ. ನಾಳೆ ಶನಿವಾರ; ಶನಿವಾರ ಬೆಳಿಗ್ಗೆ ಆ ಔಷಧಿ ತೆಗೆದುಕೊಳ್ಳಬೇಕು—ಎಂದು ಹೇಳಿ, ಈ ರಾತ್ರಿಯೇ ನನ್ನ ಸ್ವಾಮಿಯ ಸಂಗಡ ದೋಣಿಯಲ್ಲಿ ಅಲ್ಲಿಗೆ ಪ್ರಯಾಣಮಾಡು

ತ್ತಿದ್ದೆನು. ಈ ಪ್ರಾಂತರವನ್ನು ಕಳೆದು ಬಂದನಂತರ ನನ್ನ ಸ್ವಾಮಿಯು ಅಧೈರ್ಯಗೊಂಡು ಮನೆಗೆ ಹಿಂದಿರುಗಬೇಕೆಂದು ಸಂಕಲ್ಪಿಸಿ, ಇಂದು ಮುಂದೆ ಪ್ರಯಾಣಮಾಡುವುದಿಲ್ಲವೆಂದು ಅನೇಕವಾಗಿ ಆತಂಕಗಳನ್ನು ಒಡ್ಡಿದನು ; ದೋಣಿಯನ್ನು ಹಿಂದಿರುಗಿಸೆಂದು ಅಂಬಿಗನಿಗೂ ಹೇಳಿದನು. ಕೂಡದೆಂದು ಅಂಬಿಗನಿಗೆ ನಾನು ಸೂಚಿಸಿದೆನು. ದೋಣಿಯು ದಾರಿ ಹಿಡಿದು ಮುಂಬರಿಯಿತು. ನನ್ನ ಗಂಡನು ದೋಣಿಯಿಂದ ಧುಮುಕಿ ತೀರವನ್ನು ಸೇರಿದನು ; ಸೇರಿದವನೇ ಚೀತ್ಕಾರ ಮಾಡುತ್ತಾ ಊರಿನ ಕಡೆಗೆ ಊರ್ಧ್ವಶ್ವಾಸದಿಂದ ಓಡತೊಡಗಿದನು. ಆಗ ನಾನೂ ಆತನ ಸಂಗಡಲೇ ಇಳಿದುಬಿಟ್ಟೆನು. ಆ ಸ್ಥಳದಲ್ಲಿ ದಟ್ಟವಾದ ಅರಣ್ಯ ; ಅದರ ಮಧ್ಯೆ, ಆತನಲ್ಲಿಯೋ ಕಣ್ಮರೆಯಾದನು ; ಪುನಃ ಕಾಣಿಸಲಿಲ್ಲ. ಆತನು ಮನೆಗೆ ಹಿಂದಿರುಗಿ ಹೋಗಿದ್ದರೂ ಹೋಗಿರಬಹುದು. ಹೋಗಿದ್ದ ಪಕ್ಷದಲ್ಲಿ ಅಲ್ಲಿ ಆತನು ಜ್ಞಾನವಿಲ್ಲದೆ ಬಿದ್ದಿರಬಹುದು ; ಮೂರ್ಛೆ ಬರುವುದಕ್ಕೆ ಮೊದಲು ಆತನ ಮನಸ್ಸು ಹೀಗೆ ಚಂಚಲ ವಾಗುತ್ತದೆ.

ಯುವಕನು ಆ ಅಪರಿಚಿತ ಯುವತಿಯ ಮಾತುಗಳನ್ನು ಒಂದೇ ಮನಸ್ಸಿನಿಂದ ಕೇಳಿದನು. ಆಕೆಯ ಕಾತರೋಕ್ತಿಗಳಿಂದಲೂ ಉತ್ಕಂಠಿತ ಭಾವಭಂಗಿಗಳಿಂದಲೂ ಯುವಕನು ಆಕೆಯ ಮಾತಿನಲ್ಲಿ ವಿಶ್ವಾಸಿಯಾದುದಲ್ಲದೆ ದುಃಖಿತನಾಗದೆ ಇರಲಾರದವನಾಗಿ,—ನಡೆಯಿರಿ, ನಿಮ್ಮನ್ನು ಮನೆಗೆ ಸೇರಿಸಿ ಬರುತ್ತೇನೆ. ನನಗೂ ಪಾಶ್ಚಾತ್ಯ ವೈದ್ಯ ವಿದ್ಯೆಯಲ್ಲಿ ಸ್ವಲ್ಪ ಪರಿಶ್ರಮವುಂಟು. ಸಮ್ಮತಿಸುವುದಾದರೆ ನಿಮ್ಮ ಯಜಮಾನರ ದೇಹ ಸ್ಥಿತಿಯನ್ನು ಕುರಿತು ಸ್ವಲ್ಪ ಪ್ರಯತ್ನಮಾಡಿ ನೋಡಬಲ್ಲೆನು.—ಎಂದು ಹೇಳಿದನು.

ರಮಣಿಯು ವಿಸ್ಮಿತಳಾಗಿ, "ನೀವು ಡಾಕ್ಟರರೇ ! ಒಳ್ಳೆಯದೇ ಆಯಿತು ; ಆದರೆ—ಆದರೆ—"

ರಮಣಿಯು ಮಾತು ಮುಗಿಯಿಸದೆ ಸುಮ್ಮನಾದುದನ್ನು ಕಂಡು,—ಅದೇನು ಹೇಳುತ್ತಿದ್ದಿರಲ್ಲ ? ಹೇಳಿಬಿಡಿ—ಎಂದು ಯುವಕನು ಹೇಳಿದನು.

ರಮಣಿಯು ಹೇಳಿದಳು—ಬಹು ದಿನಗಳಿಂದಲೂ ಡಾಕ್ಟರ್, ಕವಿರಾಜ ಮುಂತಾದವರಿಂದ ಚಿಕಿತ್ಸೆ ಮಾಡಿಸಿದ್ದರಲ್ಲಿ ಗುಣಮುಖ ವಾಗುವುದು ಹಾಗಿರಲಿ, ದುರ್ಗುಣಗಳೇ ಹೆಚ್ಚುತ್ತ ಬಂದುದರಿಂದ ನನ್ನ ಸ್ವಾಮಿಯು ಈಚೀಚೆಗೆ ಡಾಕ್ಟರು, ಪಂಡಿತ ಮೊದಲಾದವರ ಹೆಸರೆತ್ತಿ ದರೆ ಕಿಡಿಕಿಡಿಯಾಗುತ್ತಾನೆ; ಅಷ್ಟೇನು! ಅವರ ಒಬ್ಬೊಬ್ಬ ಸ್ನೇಹಿತರು ಪ್ರಖ್ಯಾತರಾದ ಡಾಕ್ಟರರು; ಈಗ ಅವರೊಡನೆ ನನ್ನ ಸ್ವಾಮಿಯು ಮಾತನ್ನೂ ಆಡುವುದಿಲ್ಲ; ಡಾಕ್ಟರು, ಪಂಡಿತ ಮುಂತಾದವರ ವಿಷಯದಲ್ಲಿ ಸದ್ಯಃ ಆತನಿಗೆ ಉಂಟಾಗಿರುವ ದ್ವೇಷಭಾವವನ್ನು ನೋಡಿದರೆ, ನಿಮಗೆ ಎಲ್ಲಿಯಾದರೂ ಅಪಮಾನಕರವಾದ ಮಾತುಗೀತು ಆಡಿಯಾನೇನೋ ಎಂದು ಆಲೋಚಿಸುತ್ತೇನೆ.

ಯುವಕ—ಆ ವಿಷಯದಲ್ಲಿ ನೀವೇನೂ ಆಲೋಚಿಸಬೇಕಾಗಿಲ್ಲ.

ರಮಣಿ—ಒಂದು ಕೆಲಸ ಮಾಡೋಣಾಗಲಿ. ನೀವು ಡಾಕ್ಟರರೆಂಬ ವಿಚಾರವನ್ನು ಆತನಿಗೆ ಹೇಳಲೇಬೇಡಿ.

ಯುವಕ—ಹೇಗೆ ಅನುಕೂಲವೋ, ಹಾಗೆ ಮಾಡುತ್ತೇನೆ.

ರಮಣಿ—ಇಲ್ಲವಪ್ಪಾ, ನಿಮಗೆ ಆತನ ವಿಷಯವು ತಿಳಿಯದು. ಆತನು ಕಡುಕೋಪದ ಸ್ವಭಾವದವನು; ನೀವು ನಾನು ಹೇಳುವಂತೆ ನಡೆಯಿರಿ.

ಯುವಕ—ಹಾಗೆಯೇ ಆಗಲಿ.

ಈ ರೀತಿ ಮಾತುಕತೆಗಳಾದ ಮೇಲೆ ಯುವಕನು ಆ ಅಪರಿಚಿತ ಳಾದ ಸುಂದರಿಯನ್ನು ತನ್ನ ದೋಣಿಯಲ್ಲಿ ಕುಳ್ಳಿರಿಸಿಕೊಂಡನು. ಅಂಬಿಗನು ಬೇಡವೆಂದು ನಿಷೇಧಿಸಿದನು. ಹೆಣ್ಣು ದೆವ್ವಗಳು ಈ ಬಗೆ ಯಾಗಿ ಸುಂದರಾಕಾರದಿಂದ ಕಾಣಿಸಿಕೊಂಡು, ದಾರಿಗರ ದಾರಿ ತಪ್ಪಿಸು ವುದೆಂಬ ಭಯವನ್ನು ಸೂಚಿಸಿದನು; ಅಲ್ಲದೆ ಅನೇಕ ಮಂದಿ ಹೆಂಗಸರು ದರೋಡೆಖೋರರಲ್ಲಿ ಹಣ ತಿಂದು ಪಿಶಾಚಿಯರ ಹಾಗೆ ಈ ರೀತಿ ರಾತ್ರಿ ಯೆಲ್ಲಾ 'ಶಿಕಾರಿ'ಗಳನ್ನು ಹುಡುಕುತ್ತಾ ಅಲೆದು ಬಹು ಬಗೆಯಾದ ಕೌಶಲಗಳಿಂದ ಮೈ ಮರಸಿ ಕೈಗೆ ಸಿಕ್ಕಿದವರನ್ನು ಕರೆದುಕೊಂಡು

ಹೋಗಿ, ಪರೋಪಕಾರಿಯುಪರ ಪಶವಾಡುವುದುಂಟೆಂದೂ ಹೇಳಿದನು. ದೆವ್ವ ಅಥವಾ ಪಿಶಾಚಗಳ ಭಯವು ಯುವಕನ ಹೃದಯದಲ್ಲಿ ಅರೆಗಳಿಗೆಯೂ ನಿಲ್ಲಲಿಲ್ಲ. ಆತನು ಅಂಬಿಗನ ಕುಸಂಸ್ಕಾರಪೂರ್ಣವಾದ ಉಕ್ತಿಯು ಯುಕ್ತಿಯುಕ್ತವಾದುದೆಂದು ತಿಳಿಯಲಾರದವನಾದನು; ಆತನು ಯುವಕ, ಸಾಹಸಿ, ಬಲಶಾಲಿ, ಬುದ್ಧಿವಂತ, ಪೌರುಷ ಸೋತ್ಸಾಹಿ. ಆತನು ಆ ಅಪರಿಚಿತ ಯುವತಿಯನ್ನು ದೋಣಿಯಲ್ಲಿ ಕೂಡಿಸಿ, ದೋಣಿಯನ್ನು ಹಿಂದಿರುಗಿಸುವಂತೆ ಅಂಬಿಗನಿಗೆ ಹೇಳಿದನು. ಅಂಬಿಗನು ಇಚ್ಛೆಯಿಲ್ಲದವನಾದರೂ ಆರೋಹಿಯ ಅಪ್ಪಣೆಯಂತೆ ದೋಣಿಯನ್ನು ಹಿಂದಿರುಗಿಸಿದನು. ಆಗ ಅವನ ಮನಸ್ಸಿನಲ್ಲಿ ತುಂಬ ಭಯ; ಎಂತಹ ಅಪಾಯವಾಗುವುದೋ ಯಾರು ಬಲ್ಲರು? ಈ ದೋಣಿ ನಡೆಯದೆ ನಿಂತರೂ ನಿಲ್ಲಬಹುದು. ದೋಣಿಯು ಮುಳುಗಲೂ ಬಹುದು. ಆಗ, ಈ ಪಿಶಾಚವು ದೋಣಿಯೊಡನೆ ನನ್ನನ್ನೂ ಮುಳುಗಿಸುವುದಿಲ್ಲವೇನು? ಇದು ಹೇಗೆ ಸಾಧ್ಯ? ಆಗ ಉಸಿರುಕಟ್ಟಿ ಪ್ರಾಣಹೋಗುವುದೇನೊ?—ಎಂದು ಮುಂತಾಗಿ ಕಾತರಿಸಿದನು. ಆ ಸಮಯದಲ್ಲಿ ಅವನ ಗೃಹಿಣಿಯ ವಿಚಾರ ಸ್ಮರಣೆಗೆ ಬಂತು, ಮಕ್ಕಳು ಮರಿಗಳ ವಿಚಾರವೂ ಜ್ಞಾಪಕಕ್ಕೆ ಬಂತು; ಹೀಗೆ, ಬಗೆ ಬಗೆಯಾಗಿ ಆಲೋಚಿಸುತ್ತಾ ಅವನ ಪ್ರಾಣವು ತುಡಿದುಕೊಳ್ಳಲಾರಂಭವಾಯಿತು. ಅವನು ಪೆಟ್ಟು ತಿಂದ ಪಕ್ಷಿಯು ಪಂಜರ ಮಧ್ಯೆ ಒದ್ದಾಡುವ ಹಾಗೆ ಒದ್ದಾಡುತ್ತಿದ್ದನು.

ಅನಂತರ, ಪ್ರವಾಹಮುಖದಲ್ಲಿ ದೋಣಿಯು ಓಡೋಡುತ್ತ, ಸ್ವಲ್ಪ ಹೊತ್ತಿನೊಳಗಾಗಿ ವನಭೂಮಿಯನ್ನು ದಾಟಿ, ಮಾವಿನ ತೋಪಿಗೆ ಹೋಗುವ ದಾರಿಯ ಬಳಿ ದಡಕ್ಕೆ ಸೇರಿತು. ಯುವಕನು ಆ ರಮಣಿಯ ಸಂಗಡ ಇಳಿದು ದಡವನ್ನು ಸೇರಿದನು. ಆಗ ದಕ್ಷನಾದ ಆ ಅಂಬಿಗನು ನಿರ್ಭಯವಾದೊಂದು ನಿಶ್ವಾಸವನ್ನು ಬಿಟ್ಟು ಬದುಕಿಕೊಂಡನು. ಒಂದು ವಿಪತ್ತು ಕಳೆಯಿತೆಂದು ಅವನು ಈಶ್ವರನಿಗೆ ಮನಸಾ ಅನೇಕ ವಂದನೆಗಳನ್ನು ಸಮರ್ಪಿಸಿದನು.

ಯುವಕನು ಹೊರಡುವ ಸಮಯದಲ್ಲಿ "ನಾನು ಹಿಂದಿರುಗಿ ಬರುವವರೆಗೂ ದೋಣಿಯು ಇಲ್ಲಿಯೇ ಇರಬೇಕು" ಎಂದು ಹೇಳಿ ಹೋದನು.

ಯುವಕನು ಹಿಂದಿರುಗಲಾರನೆಂಬ ವಿಚಾರದಲ್ಲಿ ಅಂಬಿಗನಿಗೆ ಸಂದೇಹವಿಲ್ಲ.

---

## ಹನ್ನೊಂದನೆಯ ಪರಿಚ್ಛೇದ

### ಸುಂದರಿಯ ಕೃತಜ್ಞತೆ

ಮಾವಿನ ತೋಟದಲ್ಲಿ ಆ ಹೆಂಗಸು ಮುಂದು ಮುಂದಾಗಿ ನಡೆಯುತ್ತಿದ್ದಳು. ಯುವಕನು ಅವಳ ಹಿಂದೆ ಹಿಂದೆ ಹೋಗುತ್ತಿದ್ದನು.

ಯುವಕನ ವಯಸ್ಸು ಹದಿನೆಂಟು ವರ್ಷಕ್ಕೆ ಮೀರಿಲ್ಲ. ಸುಂದರವಾದ ಮುಖ, ಅಚ್ಚ ಕಪ್ಪಾದ ಗಡ್ಡ ಮತ್ತು ಬತ್ತಿಲ್ಲದ ಮೀಸೆ, ತಲೆಯಲ್ಲಿ ಹೆಚ್ಚಾಗಿ ಬಾಗಿಕೊಂಡಿರದೆ ಸ್ವಲ್ಪವೇ ಉದ್ದವಾಗಿರುವ ಕೂದಲು; ಪ್ರಶಸ್ತವಾದ ಲಲಾಟವೂ, ಎತ್ತರವಾದ ಮೂಗೂ—ಆ ಮುಖಮಂಡಲದ ಕಾಂತಿಯನ್ನು ಇಮ್ಮಡಿಗೊಳಿಸಿದ್ದುವು. ದೇಹವು ಅಷ್ಟು ಉದ್ದವೂ ಅಲ್ಲ, ಅಷ್ಟು ಗಾತ್ರವೂ ಅಲ್ಲ; ಆದರೆ ಬಲಮಯವಾಗಿದೆ. ಎಲ್ಲ ಅವಯವಗಳೂ ಮಾಂಸಪೂರಿತಗಳಾಗಿ ಪೂರ್ಣತೆಗೊಂಡಿರುವುವು. ದೇಹವು ಗೌರವರ್ಣ. ಮುಖ ಮತ್ತು ಕಣ್ಣುಗಳ ಭಾವದಿಂದ ಯುವಕನು ಬುದ್ಧಿಶಾಲಿಯೆಂದು ತೋರುವುದು.

ಅವರಿಬ್ಬರೂ ಮಾವಿನ ತೋಪಿನಿಂದ ಪಾರಾಗಿ ದೊಡ್ಡದೊಂದು ಕಾಡುದಾರಿಗೆ ಬಂದರು. ವನಮಧ್ಯದಲ್ಲಿ ಸಣ್ಣದಾಗಿಯೂ ಇಕ್ಕಟ್ಟಾಗಿಯೂ ಇರುವ ದಾರಿಯು, ಸ್ವಲ್ಪ ದೂರ ಹೋಗುವುದರೊಳಗಾಗಿ ತೋಟದ ಎಲ್ಲೆಯನ್ನೇ ಅತಿಕ್ರಮಿಸಿರುವುದು. ಅಪರಿಷ್ಕಾರವಾಗಿ, ಬಹು ದೀರ್ಘವಾಗಿರುವ ಆ ಕಾಡುದಾರಿಯಲ್ಲಿ ಎಲೆಗಳ ಸಂದಿನಲ್ಲಿ ನುಸುಳಿಬಂದ ಕ್ಷೀಣವಾದ ಬೆಳದಿಂಗಳ ರೇಖೆಗಳನ್ನು ನೋಡಿದರೆ

ಜ್ಯೋತ್ಸ್ನೆಯು ಮೂರ್ಛೆಗೊಂಡು ಬಿದ್ದಿರುವಂತೆ ತೋರುತ್ತಿದೆ. ಆದರೆ ಮೂರ್ಛೆಗೊಂಡಿದ್ದ ಜ್ಯೋತ್ಸ್ನಾರೇಖೆಯು ಆ ಅತುಲ ಸೌಂದರ್ಯ ಮಯಿಯಾದ ಯುವತಿಯು ಒಂದೊಂದು ಹೆಜ್ಜೆಯಿಟ್ಟಾಗಲೂ, ಆವಳ ಸುಕೋಮಲ ಚರಣ ಸ್ಪರ್ಶದಿಂದ, ಆ ಜ್ಯೋತ್ಸ್ನೆಯು ಸಜೀವಗೊಳ್ಳು ತ್ತಿರುವಂತೆ ಯುವಕನಿಗೆ ಕಾಣುತ್ತದೆ. ಆ ಸಮಯದಲ್ಲಿ ಗಾಳಿಯ ದೆಸೆಯಿಂದ ಹಾರಾಡುವ ಆವಳ ಸೀರೆಯ ಸೆರಗು ಒಂದೊಂದು ಸಾರಿ ಯುವಕನ ಮೈಗೆ ಸೋಂಕುತ್ತಿದೆ! ಆ ವೇಳೆಯಲ್ಲಿ ವಿಜನವಾದಾ ವನ ಪಥವು ಝಿಲ್ಲೀರವದಿಂದ ಮುಖರಿತವಾಗಿದೆ ; ಹಾಗೆಯೇ ಅಸಂಖ್ಯಾಕ ವಾಗಿ ಗಿಡಬಳ್ಳಿಗಳಿಂದೊಡಗೂಡಿದ ವನಭೂಮಿಯು ಕತ್ತಲೆ ಬೆಳಕು ಗಳಿಂದ ಚಿತ್ರಿತವಾಗಿ ಪ್ರದರ್ಶಿಸಲ್ಪಟ್ಟ ಒಂದು ಚಿತ್ರದಂತೆ ಬಹು ಸುಂದರ ವಾಗಿ ಕಾಣಿಸುತ್ತಿದೆ ; ಮನೋಹರವಾದ ಬೆಳದಿಂಗಳು, ವನಕುಸುಮಗಳ ಸುಗಂಧ, ಹಿತಕರವಾಗಿ ಮೆಲ್ಲಗೆ ಬೀಸುವ ಮಲಯ ಮಾರುತ, ಹಾಗೆಯೇ ವನಪಕ್ಷಿಗಳ ಮಧುರ ಕಂಠದ ಸ್ವರಲಹರಿ—ಇವು ಚಿತ್ರದಲ್ಲಿ ಬರೆದಂತಿರುವ ಆ ವನಸ್ಥಳವನ್ನು ಪ್ರತಿಕ್ಷಣದಲ್ಲಿಯೂ ಸಜೀವಿತ ವನ್ನಾಗಿ ಮಾಡುತ್ತಿವೆ.

ಕಾಂತಶಿಲೆಯೊಡನೆ ಕಬ್ಬಿಣದ ತುಂಡಿಗೆ ಯಾವ ಸಂಬಂಧವಿರು ವುದೋ ಹೆಂಗಸಿನ ಸೌಂದರ್ಯಕ್ಕೂ ಪುರುಷನ ಹೃದಯಕ್ಕೂ ಅದೇ ಸಂಪರ್ಕವಿರುತ್ತದೆ. ಕಾಂತಶಿಲೆ (ಸೂಜಿಕಲ್ಲು)ಗೆ ಸಮಾನವಾದ ಹೆಂಗ ಸಿನ ಸೌಂದರ್ಯಕ್ಕೆ ಬಂದು ಬಗೆಯಾಗಿ ಅಸಾಧಾರಣವಾದ ಆಕರ್ಷಣ ಶಕ್ತಿಯಿರುತ್ತದೆ ; ಆದುದರಿಂದ ಪುರುಷ ಹೃದಯವು ಬಹು ಸುಲಭ ವಾಗಿ, ಯಾರೊಬ್ಬರಿಗೂ ಗೋಚರವಾಗದ ಹಾಗೆ ಆಕರ್ಷಿತವಾಗುವುದು. ಆ ಆಕರ್ಷಣ ಶಕ್ತಿಯಿಂದಲೇ ಯುವಕನು ಇಷ್ಟುದೂರದವರೆಗೆ ಯಾವುದೊಂದು ಮಾತನ್ನೂ ಆಡದೆ, ಮಂತ್ರಮುಗ್ಧನಾದವನ ಹಾಗೆ, ಯಂತ್ರದಿಂದ ನಡೆಸಲ್ಪಟ್ಟವನಂತೆ ನಡೆಯುತ್ತಿರುವನು. ಯುವಕನು ಮಾಧವನ ತೋರಿಸಿದ ದೀರ್ಘಪಥವನ್ನು ಬಿಟ್ಟು ಕಾಡುದಾರಿಗೆ ಬಂದದ್ದೂ ಆ ಆಕರ್ಷಣದಿಂದಲೇ ; ಸರ್ಪ ಸಂಕುಲವಾಗಿಯೂ, ಭಯಭರಿತ

ವಾಗಿಯೂ, ನೀರವತಾ ಪೂರ್ಣವಾಗಿಯೂ ಇರುವ ವನ ಮಧ್ಯದಲ್ಲಿ ಪ್ರವೇಶವಾಡಲು ಹಿಂಜರಿಯದಿದ್ದುದೂ ಆ ಆಕರ್ಷಣ ಬಲದಿಂದಲೇ. ಅನಂತರ ಆ ಅರಣ್ಯದ ಮಹಾ ಗಭೀರತೆಯ ಮಧ್ಯೆ, ಆ ನಿರ್ಮಾನುಷತೆಯ ಮಧ್ಯೆ ಒಂದು ದಾರಿ ತಪ್ಪಿದಾಗ ಕನಸಿನ ಕಡೆಯಲ್ಲಿ ಎಚ್ಚರ ಗೊಳ್ಳುವ ಹಾಗೆ, ಹಠಾತ್ತಾಗಿ ಮಿಂಚಿದರೆ ಹೇಗೋ ಹಾಗೆ ಒಂದು ಬಗೆಯ ಶಂಕೆಯು ಯುವಕನ ಹೃದಯದಲ್ಲಿ ಜಾಗರಿತವಾಯಿತು. ಅವನು ಆ ಅಪರಿಚಿತಳನ್ನು ಕುರಿತು,—ನಾವು ಇನ್ನೂ ಎಷ್ಟು ದೂರ ಹೋಗ ಬೇಕು? ಈ ಗಭೀರವಾದ ವನ ಮಧ್ಯಕ್ಕೆ ನನ್ನನ್ನು ಕರೆದುತಂದು ದೇಕೆ? ಸಮೀಪದಲ್ಲಿ ಯಾವುದೊಂದು ಗ್ರಾಮವೂ ತೋರುವುದಿಲ್ಲವಲ್ಲ? ಈವರೆಗೆ ಇಷ್ಟುದೂರ ನಡೆದರೂ ಈ ವನದಿಂದ ಪಾರಾಗಲಿಲ್ಲ. ಜಾಗ್ರತೆ ಪಾರಾಗಬಹುದೆಂಬ ಭರವಸೆಯೂ ಕಂಡುಬರುವುದಿಲ್ಲ. ನಾನು ಯಾವ ದಿಕ್ಕಿನ ಕಡೆಗೆ ಹೋಗುತ್ತಿರುವೆನೋ ಅದೇ ತಿಳಿಯದಾಗಿದೆ; ನನಗೆ ದಿಗ್ಭ್ರಮೆಯುಂಟಾಗಿದೆ. ಈಗ ನೀವು ನನ್ನನ್ನು ಎಲ್ಲಿಗೆ ಕರೆದುಕೊಂಡು ಹೋಗುತ್ತಿರುವಿರಿ? ನಾವು ಹೋಗುತ್ತಿರುವುದು ಪೂರ್ವವೋ, ಪಶ್ಚಿಮವೋ; ಉತ್ತರವೋ ಅಥವಾ ದಕ್ಷಿಣವೋ?—ಎಂದನು.

ಈಗ ನಾವು ದಕ್ಷಿಣ ಮುಖವಾಗಿ ಹೋಗುತ್ತಿದ್ದೇವೆ. ಇನ್ನು ಹೆಚ್ಚು ದೂರವಿಲ್ಲ; ದಕ್ಷಿಣದ ಕಡೆಗೆ ಇನ್ನು ಕೊಂಚ ನಡೆದರೆ ಪೂರ್ವ ಕಡೆಗೆ ಹೋಗುವ ದಾರಿಯೊಂದು ಸಿಗುತ್ತದೆ. ಆ ದಾರಿಯಲ್ಲಿ ಸ್ವಲ್ಪ ದೂರ ನಡೆಯುವುದರೊಳಗಾಗಿ ನಾವು ಈ ಕಾಡನ್ನು ಬಿಟ್ಟು ಒಂದು ತೋಟಕ್ಕೆ ಹೋಗುವೆವು; ಆ ತೋಟದಲ್ಲಿಯೇ ನಮ್ಮ ಮನೆ.—ಎಂದು ಮುಂದೆ ಹೋಗುತ್ತಿದ್ದವಳು ಮೆಲ್ಲಗೆ ಹೇಳಿದಳು.

ಯುವಕ—ಇರಬಹುದು; ಆದರೆ ನೀವು ನನ್ನನ್ನು ಬಹು ತೊಡ ಕಾದ ಕಾಡುದಾರಿಯಲ್ಲಿ ಕರೆದುಕೊಂಡು ಬಂದಿರಿ; ನಾನು ನಿಮ್ಮ ಮನೆ ಯಿಂದ ಹೊರಟು, ಈ ಮಾರ್ಗವನ್ನು ಗುರ್ತಿಸುತ್ತಾ, ಒಬ್ಬನೇ ದೋಣಿಯಬಳಿ ಸೇರುವುದು ಅಸಂಭವವೆಂದು ತೋರುವುದು.

ಆದಕ್ಕಾಗಿ ತಾವು ಆಲೋಚಿಸಬೇಕಾದುದಿಲ್ಲ. ಸುಗಮವಾದ ಇನ್ನೊಂದು ದಾರಿಯಿದೆ; ಆ ಮಾರ್ಗವಾಗಿ ಹೊರಟರೆ ಬಹಳ ಸುತ್ತಾ ಗುವುದರಿಂದ ಮನೆಯನ್ನು ಬೇಗ ಸೇರಬೇಕೆಂಬ ಲವಲವಿಕೆಯಿಂದ ಈ ಕಾಡುದಾರಿಯಲ್ಲಿ ನುಸುಳಿ ಬಂದುದಾಯಿತು. ನಿಮ್ಮಂತಹ ದೊಡ್ಡಮನುಷ್ಯರನ್ನು ದುರ್ಗಮವಾದ ಈ ದಾರಿಗೆ ಕರೆದುತಂದುದು ಒಳ್ಳೆಯದಲ್ಲವೆಂಬುದು ನನಗೂ ಗೊತ್ತು; ಆದರೆ ಮಾಡುವುದೇನು? ತಾವು ನನ್ನ ಮನಸ್ಸಿನ ಉತ್ಕಂಠತೆಯನ್ನು ಸರಿಯಾಗಿ ತಿಳಿಯದೇ ಹೋದಿರಿ. ಹೋಗಲಿ, ಹಿಂದಿರುಗುವಾಗ್ಗೆ ನಮ್ಮ ಸೇವಕರಲ್ಲಿ ಒಬ್ಬ ನನ್ನು ನಿಮ್ಮ ಸಂಗಡ ಕಳುಹಿಸುತ್ತೇನೆ; ಅವನು ನಿಮ್ಮನ್ನು ಆ ಕಡೆ ಯಲ್ಲಿನ ಸುಗಮವಾದ ಮಾರ್ಗದಲ್ಲಿ ಕರೆದುಕೊಂಡುಹೋಗಿ ದೋಣಿಯ ಬಳಿ ಬಿಟ್ಟುಬರುತ್ತಾನೆ. ಈ ಕಾಡುದಾರಿಯಲ್ಲಿ ಕರತಂದು ನಾನು ತಮಗೆ ತುಂಬ ತೊಂದರೆಕೊಟ್ಟೆ; ಇದಕ್ಕಾಗಿ ಈ ಹತಭಾಗಿನಿಯ ಅಪರಾಧಗಳೆಲ್ಲವನ್ನೂ ಮನ್ನಿಸಿರಿ—ಎಂದು ಅವಗುಂಠನವತಿಯು ಮೊದಲಿ ನಂತೆಯೇ ಮೃದುಸ್ವರದಿಂದ ಹೇಳಿದಳು.

ಅವಳ ವಿನಯಪೂರ್ಣವಾದ ಮಾತು ಕೇಳಿ ಯುವಕನು ಮೈ ಮರೆತನು. ಸಜಲವಾದ ಅವನ ಹೃದಯ ಮಧ್ಯದಲ್ಲಿನ ದುಸ್ಸಾಹಸಿ ಕೆಯ ಮೇಲೆ, ಒಂದು ಬಗೆಯ ಅಶುಭಸೂಚಕವಾದ ಶಂಕೆಯ ಸೂಕ್ಷ್ಮ ಛಾಯೆಯು ತೋರುತ್ತಿದ್ದಿತು. ಆದರೆ, ಆ ಅವಗುಂಠನವತಿಯಾದ ಸುಂದರ ರಮಣಿಯ ವಿಷ್ಣತೆಯಿಂದಲೂ, ಅದಕ್ಕೂ ಮಿಗಿಲಾಗಿ, ಆಕೆಯ ಮಧುರ ವಾಕ್ಯಗಳಿಂದಲೂ ಆ ಛಾಯೆಯು ಮರಳಿನ ರಾಶಿಯಮೇಲೆ ಬಿದ್ದ ಮಳೆಯ ಹನಿಯ ಹಾಗೆ ಉತ್ತರ ಕ್ಷಣದಲ್ಲಿಯೇ ಮಾಯ ವಾಯಿತು. ಯುವಕನು—ಇಲ್ಲ, ಇದಕ್ಕಾಗಿ ನೀವು ಇಷ್ಟು ಕೇಳಿ ಕೊಳ್ಳಬೇಕೆ? ನನಗೇನೂ ತೊಂದರೆಯಾಗಲಿಲ್ಲ. ಸಾಮಾನ್ಯನಾದ ನನ್ನಿಂದ ನಿಮಗೆ ಈ ಅಲ್ಪವಾದ ಉಪಕಾರವಾದುದರಿಂದ ನಾನು ಬಹು ಮಟ್ಟಿಗೆ ಸುಖಿಯೇ ಆಗಿದೇನೆ. ಮನುಷ್ಯಮಾತ್ರನಾದವನಿಗೆ ಕರ್ತವ್ಯ ವಾಗಿರುವುದಕ್ಕಿಂತಲೂ ಹೆಚ್ಚಾಗಿ ನಾನೇನೂ ಮಾಡಿಲ್ಲ—ಎಂದು ಹೇಳಿದನು.

ರಮಣಿ—ಮಹಾಶಯ, ನನಗೆ ಇಂತಹ ವಿಪತ್ಸಮಯದಲ್ಲಿ ತಾವು ಮಾಡಿದ ಸಹಾಯದಿಂದ ಎಷ್ಟರ ಮಹೋಪಕಾರವಾಯಿತೆಂಬುದನ್ನು ಹೇಗೆ ವ್ಯಕ್ತಪಡಿಸಲಿ? ಒಂದುವೇಳೆ ನಾನು ಕೃತಘ್ನಳೇ ಆದರೂ, ನನ್ನ ಜೀವವಿರುವವರೆಗೂ ತಮ್ಮ ಸ್ಮರಣೆಯೇನೋ ತಪ್ಪುವಹಾಗಿಲ್ಲ. ತಮಗೆ ನಾನು ಎಷ್ಟರಮಟ್ಟಿಗೆ ಋಣಿಯಾಗಿರುವೆನೆಂಬುದನ್ನು ತಮಗೆ ತಿಳಿಯ ಹೇಳುವುದು ಸಾಧ್ಯವಿಲ್ಲ. ಇಂದು ತಾವು ಇಷ್ಟು ದೂರ ತೊಂದರೆ ತೆಗೆದು ಕೊಳ್ಳದೆ ಇದ್ದಿದ್ದ ಪಕ್ಷದಲ್ಲಿ, ನನ್ನ ಅವಸ್ಥೆಯೇನಾಗುತಿದ್ದಿತೆಂಬುದನ್ನು ನೀವೇ ಆಲೋಚಿಸಿರಿ. ಯಾವನಾವನೊಬ್ಬ ಪಾಪಿಷ್ಠನ ಕೈಗೆ ಸಿಕ್ಕಿ ನನಗೆ ಎಂತಹ ಸರ್ವನಾಶವಾಗುತ್ತಿದ್ದಿತೋ? ಇಂತಹ ರಾತ್ರಿಯಲ್ಲಿ, ಈ ಭಯಂಕರ ಸ್ಥಳಗಳು ಕುಲಾಂಗನೆಯರಿಗೆ ಎಷ್ಟರಮಟ್ಟಿಗೆ ವಿಪತ್ತುಂಟುಮಾಡತಕ್ಕುದೆಂಬುದನ್ನು ಕುರಿತು ತಮ್ಮಂತಹ ವಿಚಕ್ಷಣರಿಗೆ ಹೇಳಿ ತಿಳಿಸುವುದೇನಿದೆ? ತಮ್ಮ ಹೃದಯವು ಬಹು ಉದಾರವಾದದ್ದು ಮತ್ತೂ ಮಹತ್ತರವಾದದ್ದು. ತಮ್ಮಂತೆ ಪರೋಪಕಾರಿಗಳೂ ದಯಾಶೀಲರೂ ಆದ ಜನರು ಈ ಪ್ರಪಂಚದಲ್ಲಿ ತೀರ ಕಡಮೆ. ತಾವು ನನ್ನ ವಿಷಯದಲ್ಲಿ ಈ ರೀತಿಯಾಗಿ ದಯಾವಂತರಾಗದೇ ಇದ್ದಲ್ಲಿ, ನನ್ನ ಈ ವಿಪತ್ತಿಗೆ ಈ ಅವೇಳೆಯಲ್ಲಿ ಮತ್ತಾರು ತಾನೇ ಬಂದು ತಲೆಗೊಡುತ್ತಿದ್ದರು! ತಮ್ಮ ಸಮಯವನ್ನು ನಷ್ಟಮಾಡಿಕೊಂಡು, ಅಪರಿಚಿತಳಾದ ಹೆಂಗಸೊಬ್ಬಳಿಗಾಗಿ, ಇಷ್ಟರ ತೊಂದರೆ ಸಹಿಸಿ ಬರುವವರಾದರೂ ಯಾರಿದ್ದಾರೆ. ಸಹಾಯಮಾಡುವುದು ಹಾಗಿರಲಿ, ಈ ಅಪರಿಚಿತಳ ಮಾತನ್ನು ಈ ಸಮಯದಲ್ಲಿ ಇತರರು ಸಂಪೂರ್ಣವಾಗಿ ನಂಬುತಿದ್ದರೆಂದು ಹೇಳುವುದೂ ಕಷ್ಟವಾಗಿದೆ.—ಎಂದು ಹೇಳುತ್ತ ಆ ಹೆಂಗಸು ಮುಂದೆ ಮುಂದೆ ನಡೆಯುತ್ತಿದ್ದಳು.

---

# ಹನ್ನೆರಡನೆಯ ಪರಿಚ್ಛೇದ

## ತೋಟದ ಮನೆ

ಅನಂತರ ಸ್ವಲ್ಪ ಹೊತ್ತಿನೊಳಗಾಗಿ ಆ ಯುವಕನೂ ಆ ಅವಗುಂಠನವತಿಯೂ ಕಾಡುದಾರಿಯನ್ನು ಬಿಟ್ಟು ಒಂದು ತೋಟದ ಸಮೀಪಕ್ಕೆ ಬಂದರು. ತೋಟವು ವಿಸ್ತಾರವಾದ್ದು; ಸುಮಾರು ಐವತ್ತು ವಿಘಾಕ್ಕೆ* ಕಡಿಮೆ ಇಲ್ಲವೆಂದು ತೋರುವುದು. ತೋಟದ ನಾಲ್ಕು ಕಡೆಯಲ್ಲಿ ದೊಡ್ಡ ದೊಡ್ಡ ಮರಗಳು ಚಂದ್ರಕಿರಣದಲ್ಲಿ ಮಂದು ದೃಷ್ಟಿಹೀನವಾ ಜವನಿಕೆಯಲ್ಲಿ ಸುದೃಶ್ಯವಾಗಿ ಚಿತ್ರಿತವಾದ ಚಿತ್ರದಂತೆ ಬಹು ಮನೋಹರವಾಗಿ ಕಾಣಿಸುತ್ತಿವೆ. ಕೆಲವು ಕಡೆಗಳಲ್ಲಿ ಎತ್ತರವಾದ ನೇರಳೆ ಮರ, ಕೆಲವೆಡೆಗಳಲ್ಲಿ ಅವಕ್ಕೂ ಎತ್ತರವಾದ, ದಟ್ಟವಾಗಿ ಬೆಳೆದಿರುವ ದೇವದಾರುವೃಕ್ಷ ಶ್ರೇಣಿ, ಅವುಗಳೆದುರಾಗಿ ಮಾವು, ಲಿಂಬೆ, ಹಲಸು, ತಾಳೆ, ತೆಂಗು ಮುಂತಾದ ಬಗೆ ಬಗೆಯ ಫಲವೃಕ್ಷಗಳು. ಮಧ್ಯ ಭಾಗದಲ್ಲಿ ಬಹು ವಿಸ್ತಾರವಾದ ಎರಡಂತಸ್ತಿನ ಹಳೆಯ ಮನೆ; ಬಹು ದಿನಗಳಿಂದ ಸುಧಾರಣೆಯಿಲ್ಲದ ಕಾರಣ ತುಂಬ ಕಾಂತಿಹೀನವಾಗಿದೆ. ಗೋಡೆಗೆ ಹಾಕಿದ್ದ ಗಾರೆಯು ಅನೇಕ ಕಡೆಗಳಲ್ಲಿ ಕಳಚಿಬಿದ್ದಿದ್ದುದರಿಂದ ಅದರೊಳಗಿನ ಇಟ್ಟಿಗೆಯ ಕಟ್ಟಡವು ಕಾಣಿಸುತ್ತಿದೆ.

ರಮಣಿಯು ಯುವಕನೊಡನೆ ಆ ಎರಡಂತಸ್ತಿನ ಮನೆಯ ಬಾಗಿಲ ಬಳಿಗೆ ಬಂದಳು. ಯುವಕನು, ಈ ಮನೆ ನಿಮ್ಮದೇ ?—ಎಂದು ಪ್ರಶ್ನೆ ಮಾಡಿದನು.

ರಮಣಿಯು ವಿನಯಭಾವದಿಂದ ತಲೆಯನ್ನಾಡಿಸಿ ಒಪ್ಪಿಕೊಂಡು, –ರಾತ್ರಿ ಬಹಳ ಹೊತ್ತಾಗಿದೆ. ಸೇವಕರೆಲ್ಲರೂ ನಿದ್ರಿಸುತ್ತಿರುವಂತೆ ತೋರುವುದು. ಯಜಮಾನನು ಸರಿಯಾಗಿ ವಿಚಾರಮಾಡುವುದಿಲ್ಲ ವಾದರೆ ಸೇವಕ ಸೇವಕಿಯರ ಅಲಕ್ಷ್ಯಭಾವವು ಈ ರೀತಿ ಮೇರೆ

* ೭೨೦ ಚದರಡಿಗಳುಳ್ಳ ಜಮೀನಿಗೆ ‘ಖಾತೆ’ ಎಂದೂ, ೨೦ ಖಾತೆಗಳಿಗೆ ಒಂದು ‘ವಿಘಾ’ ಎಂದೂ ಬಂಗಾಳಾ ದೇಶದಲ್ಲಿ ಪ್ರಸಿದ್ಧಿ.

ವಿಕಾರಿರುತ್ತದೆ;—ಹೀಗೆಂದು ಹೇಳಿ ಬಾಗಿಲನ್ನು ತಳ್ಳಿದಳು. ಅಷ್ಟಕ್ಕೇ ಬಾಗಿಲು ತೆರೆಯಿತು. ಅದರಿಂದ ಬಹುಮಟ್ಟಿಗೆ ಧೈರ್ಯ ತಂದುಕೊಂಡವಳಾಗಿ,-ಬದುಕಿದೆ, ಬಾಗಿಲು ತೆರೆದೇ ಇದೆ; ಇದರಿಂದ ಅವರು ಮನೆಗೆ ಹಿಂದಿರುಗಿ ಬಂದಿರಬೇಕೆಂದು ತೋರುತ್ತದೆ—ಎಂದಳು.

ಯುವಕ—ಹಾಗಾದರೆ ನೀವು ಮನೆಯೊಳಕ್ಕೆ ಹೋಗಿರಿ; ಬಂದುವೇಳೆ ಅವರು ಬಂದು ಮೂರ್ಛಿತರಾಗಿದ್ದ ಪಕ್ಷದಲ್ಲಿ ನನಗೆ ವರ್ತಮಾನ ಕೊಡಿ; ಅವರೆಗೆ ನಾನು ಇಲ್ಲಿಯೇ ಇರುತ್ತೇನೆ—ಎಂದನು.

"ಅದೇಕೆ, ಮಹಾಶಯ, ಹಾಗೆಂದಿಗೂ ಆಗದು" ಎಂದು ಹೇಳಿ, ಆ ರಮಣಿಯು ಚಕಿತಳಾಗಿ ಹಿಂದಿರುಗಿ ನಿಂತುಕೊಂಡಳು. ಆ ಸಮಯದಲ್ಲಿ ಒಂದು ಸಲ ಗಾಳಿ ಬೀಸಿದ್ದರಿಂದ ಅವಳ ಮುಖ ಫರದೆಯು ಸಂಪೂರ್ಣವಾಗಿ ತೆರೆಯಿತು. ಆಗ ಆಕೆಯು ಬಹುವಾಗಿ ಲಜ್ಜಿತಳೂ ವ್ಯಸ್ತಳೂ ಆಗಿ, ಅವಗುಂಠನವನ್ನು ಸರಿಮಾಡಿ ಪುನಃ ಮುಖದಮೇಲೆ ಎಳೆದುಕೊಂಡಳು. ಆ ಅಲ್ಪ ಸಮಯದಲ್ಲಿ ಯುವಕನ ಸತೃಷ್ಣ ದೃಷ್ಟಿಯು ಆ ಸುಂದರಿಯ ಸುಂದರ ಮುಖಮಂಡಲದ ಸೌಂದರ್ಯ ಸುಧೆಯನ್ನು ಕ್ಷಣಕಾಲದ ಮಟ್ಟಿಗೆ ಅಸಂಪೂರ್ಣವಾಗಿ ಪಾನಮಾಡಿಬಿಟ್ಟಿತು. ಸುಂದರಿಯ ಆ ಸಮಯದ ಸತಮಳಿಯು ಯುವಕನ ಮುಗ್ಧ ಹೃದಯವನ್ನು ಮೆಲ್ಲನೆ ಕಲಕಿತು. ಕೊಂಚವಾಗಿ ಮಲಿನತೆಯ ಛಾಯೆ ನೋಂಕಿದ ಮಾತ್ರದಿಂದ ಆಕೆಯ ವಿಸ್ತಾರವಾದ ಕೃಷ್ಣಚಕ್ಷುಗಳಲ್ಲಿ ವ್ಯಕ್ತಗೊಂಡ ಲಜ್ಜಾಶೀಲತೆ ಮತ್ತೂ ಉತ್ಕಂಠಿತೆಗಳಿಂದುಂಟಾದ ಚಾಂಚಲ್ಯವೂ, ಸ್ವಲ್ಪಮಟ್ಟಿಗೆ ಉಬ್ಬಿದ ಹಾಗಿರುವ ಆಕೆಯ ಅಧರೋಷ್ಠದಲ್ಲಿ ಆಯಾಸದಿಂದುಂಟಾದ ಮೃದುಕಂಪನವೂ ಮಾಧುರ್ಯಪರಿಪೂರ್ಣವಾದ ಆ ಮುಖ ಕಾಂತಿಯನ್ನು ಕಾಂತಿಮಯವಾಗಿರುವಂತೆ ಮಾಡಿರುವುದನ್ನು ಯುವಕನು ಆ ಅರೆಗಳಿಗೆಯೊಳಗಾಗಿ ನೋಡಿದನು; ಅದರಿಂದ ಅವನ ತೃಷಿತ ನೇತ್ರಗಳ ತೃಷೆಯು ಇನ್ನೂ ವೃದ್ಧಿಯಾಯಿತು.

ಪರಸ್ತ್ರೀ ದರ್ಶನದ ವಿಷಯದಲ್ಲಿ ಇಷ್ಟರ ಅಧೈರ್ಯವೂ, ವ್ಯಗ್ರತೆಯಿಂದೊಡಗೂಡಿದ ತೃಷ್ಣೆಯೂ ಸಚ್ಚರಿತ್ರನಾದ ಯುವಕನ ವಿಷಯ

ದಲ್ಲಿ ಮಹಾಪಾಪಕರವಾದ ವಿಚಾರವೇ ಆದರೂ, ಆತನ ಮನಸ್ಸಿನಲ್ಲಿ ಕಲುಷಿತ ಭಾವವಿರಲಿಲ್ಲ. ಸ್ತ್ರೀ ಸೌಂದರ್ಯಕ್ಕಾಗಿ ವ್ಯಗ್ರತೆಗೊಂಡ ಆಕಾಂಕ್ಷೆಯೊಂದು, ಪ್ರಾಯಶಃ, ಎಲ್ಲ ಪುರುಷರ ಹೃದಯದಲ್ಲಿಯೂ ಇದ್ದೇ ಇರುತ್ತದೆ; ಇದು ಅವರ ವಿನಾ ಮತ್ತೇನೂ ಅಲ್ಲ. ಸ್ವಾಭಾವಿಕವಾದ ಈ ಕೋರಿಕೆಯೊಂದಿಗೆ ಅಲ್ಪ ಸ್ವಲ್ಪವಾಗಿ ಪಾಪ ಬೆರೆತರೂ ಸರಿ, ಆಗ ಅದು ಮಾನವನಿಂದ ನಿಗ್ರಹಿಸಲು ಅಸಾಧ್ಯವಾಗುವ ಹಾಗೆ ಪ್ರಜ್ವಲ್ಯಮಾನವಾಗಿ ಉರಿಯತೊಡಗುವುದು. ಅದು ಹೇಗಾದರೂ ಆಗಲಿ, ಯುವಕನ ವಿಷಯದಲ್ಲಿ ಹೀಗೆ 'ವಕಾಲತು' ನಡಿಸುತ್ತಾ ಗ್ರಂಥವನ್ನು ಬೆಳೆಸುವುದು ನಮಗೆ ಸರಿಯಾಗಿ ತೋರುವುದಿಲ್ಲ; ಅಲ್ಲದೆ ಇದರಿಂದ ಅನೇಕ ಮಂದಿ ಪಾಠಕರು ಬೇಸರಗೊಂಡಾರೆಂದೂ ಭಯಪಡಬೇಕಾಗಿದೆ. ಈ ಯುವಕನು ಈ ತಪ್ಪಿತಕ್ಕಾಗಿ ದಂಡಾರ್ಹನೋ ಅಥವಾ ಕ್ಷಮಾರ್ಹನೋ ಎಂಬುದನ್ನು ನಿರ್ಣಯಿಸುವ ಭಾರವು ವಿವೇಚಕರಾದ ಪಾಠಕ ಪಾಠಿಕಾ ವರ್ಗಕ್ಕೆ ಸೇರಿದೆ. ಅವರುಗಳ ವಿಚಾರದಿಂದ ಅವನು ಎಂಥವನೆಂದು ತೀರ್ಮಾನವಾಗುವುದೋ ನಮ್ಮ ಈ ಯುವಕನು ಅಂಥವನೇ ಎಂದು ನಾವೂ ಒಪ್ಪಿಕೊಳ್ಳುವೆವು.

ಸಂಬಂಧಪಡದ ವಿಚಾರಗಳಿಂದ ಸಮಯವು ನಷ್ಟವಾಗುತ್ತಿದೆ. ರಮಣಿಯು ಮುಖ ಪರದೆಯನ್ನು ಸರಿಯಾಗಿ ಹಾಕಿಕೊಂಡು,—ನಾವು ಒಳಗೆ ದಯಮಾಡಿ, ಬಹಳವಾಗಿ ದಣಿದಿದ್ದೀರಿ; ಈ ರೀತಿಯಲ್ಲಿ ಹೊರಗಡೆ ಒಬ್ಬರೇ ಎಷ್ಟು ಹೊತ್ತು ನಿಂದಿರಲಾದೀತು ?—ಎಂದಳು.

ಯುವಕನು ಮರುಮಾತಾಡದೆ ಮನೆಯೊಳಕ್ಕೆ ಹೋದನು; ಹಾಗೆಯೇ, ಆ ಸುಂದರಿಯನ್ನೇ ಹಿಂಬಾಲಿಸಿಕೊಂಡು ನಡೆದನು. ಮೊದಲು ಒಂದು ಹಜಾರಕ್ಕೆ ಬಂದರು. ಹಜಾರವು ಬಹು ದೊಡ್ಡದು; ಆದರೆ ಪರಿಷ್ಕಾರವಾಗಿಲ್ಲ. ಅದರ ಪೂರ್ವ ಕಡೆ ಒಂದು ನಡವೆ; ಅಲ್ಲಿ ಬೆಳಕಿಲ್ಲ. ಅಲ್ಲಿ ಗಭೀರವಾದ ಅಂಧಕಾರವೂ ನಿಸ್ತಬ್ಧತೆಯೂ ನಿರ್ವಿಘ್ನವಾಗಿ ರಾಜ್ಯಭಾರ ಮಾಡುತ್ತಿದ್ದುವು. ಅದರ ಮಧ್ಯೆ ಇಬ್ಬರೂ ಪ್ರವೇಶಿಸಿದರು. ಆ ಗಾಢಾಂಧಕಾರದಲ್ಲಿ ರಮಣಿಯನ್ನು ಪುನಃ

ನೋಡಲಾಗಲಿಲ್ಲ; ತನ್ನನ್ನು ತಾನು ಕಾಣುವುದೇ ಕಷ್ಟವಾಗಿರುವ ಹಾಗೆ, ಆ ಸ್ಥಾನದಲ್ಲಿ ಕತ್ತಲೆ ಕವಿದಿದೆ. ಆ ಸ್ಥಳದಲ್ಲಿ ಸಂಪೂರ್ಣವಾಗಿದ್ದ ನೀರವತೆಯ ಮಧ್ಯೆ, ದುರ್ಭೇದ್ಯವಾದ ತಿಮಿರ ರಾಶಿಯ ಮಧ್ಯೆ, ಮೃದುವಾದ ಹೆಜ್ಜೆಯ ಸದ್ದೂ, ಕೈಬಳೆಗಳ ಮೃದುಮಧುರವಾದ ಕಿಂಕಿಣೀರವವೂ ಮುಂದಾಗಿ ಹೋಗುತ್ತಿರುವ ಅದೃಶ್ಯ ಸುಂದರಿಯ ಇರುವಿಕೆಗೆ ಸಾಕ್ಷಿಗಳಾಗಿದ್ದುವು.

* * * * *

ಆ ನಡವೆಯ ಈಶಾನ್ಯ ಮೂಲೆಯಲ್ಲಿ ಮಹಡಿಗೆ ಹೋಗುವ ಮೆಟ್ಟಿಲು. ರಮಣಿಯು ಮೆಟ್ಟಿಲ ಮೇಲೆ ಹತ್ತಿ ಯುವಕನನ್ನು ಕುರಿತು,—ತಾವು ಇಲ್ಲಿ ಸ್ವಲ್ಪ ನಿಂತಿರಿ, ಒಂದು ದೀಪ ತರುತ್ತೇನೆ—ಎಂದು ಹೇಳಿದಳು. ಉತ್ತರ ಕ್ಷಣದಲ್ಲಿಯೇ ಸುಂದರಿಯ ಚಂಚಲವಾದ ಹೆಜ್ಜೆಯ ಸದ್ದು ಕ್ರಮ ಕ್ರಮವಾಗಿ ಸೋಪಾನವನ್ನೇರಿ ಮೇಲಕ್ಕೆ ಹೋಗುತ್ತಾ ಲೀನವಾಯಿತು.

ಆಗ ಯುವಕನು ನಡವೆಯಲ್ಲಿ ಏಕಾಂಗಿ; ಯುವಕನ ಸುತ್ತಲೂ ದಟ್ಟವಾದ ಕಗ್ಗತ್ತಲೆ.

---

## ಹದಿಮೂರನೆಯ ಪರಿಚ್ಛೇದ

### ರೋಗಿಯ ಕೊಠಡಿಯಲ್ಲಿ

ಆ ಸ್ಥಳದಲ್ಲಿ, ಆ ರೀತಿಯಾಗಿ, ಒಬ್ಬನೇ ನಿಂತಿರುವುದು ಯುವಕನಿಗೆ ಕಷ್ಟಕರವಾಗಿ ತೋರಿತು. ಅಲ್ಲದೆ ನೆಲವು ಜೌಗಾಗಿದ್ದುದರಿಂದ ಅಲ್ಲಿ ಉಂಟಾಗಿದ್ದ ದುರ್ಗಂಧವು ಯುವಕನಿಗೆ ಅಸಹ್ಯವಾಯಿತು. ಗಾಳಿಯು ಸರಾಗವಾಗಿ ಬಂದುಹೋಗುವುದಕ್ಕೆ ಅನುಕೂಲವಾದ ಮಾರ್ಗಗಳಿಲ್ಲದುದರಿಂದ ಅಸಹ್ಯವಾದ ಆ ದುರ್ಗಂಧದಿಂದ ಯುವಕನಿಗೆ ಉಸಿರಾಡುವುದೂ ಕಷ್ಟವಾಗಿ ತೋರುತ್ತಿತ್ತು. ಸಾಮಾನ್ಯವಾಗಿ ಈ ನಡವೆಯನ್ನು ಸದಾ ಸರ್ವದಾ ಮುಚ್ಚಿರುತ್ತಾ, ಬಳಕೆಯಲ್ಲಿಲ್ಲದುದೇ

ಅದರ ಆ ದುರ್ದೆಸೆಗೆ ಕಾರಣವೆಂದು ಯುವಕನು ಊಹಿಸಿದನು. ಹೆಂಗಸು ಹಿಂದಿರುಗಿ ಬರುವುದಕ್ಕೆ ಹೆಚ್ಚು ಹೊತ್ತಾದುದರಿಂದ ಯುವಕನು ಗೋಡೆಯ ಮೇಲೆ ಎರಡು ಕೈಗಳನ್ನು ಆಡಿಸುತ್ತಾ ಮುಚ್ಚಿರುವ ಕಿಟಕಿಗಳನ್ನು ಹುಡುಕತೊಡಗಿದನು. ಹೀಗೆ ಹುಡುಕಿ, ಮುಚ್ಚಿದ್ದ ಒಂದು ಕಿಟಕಿಯನ್ನು ಕಂಡುಹಿಡಿದನಾದರೂ ಅದನ್ನು ತೆರೆಯುವುದಕ್ಕಾಗಿ ಮಾಡಿದ ಅವನ ಕೌಶಲವೆಲ್ಲವೂ ಅಂದು ಆ ಅಂಧಕಾರ ಗೃಹದಲ್ಲಿ ವ್ಯರ್ಥವಾದುದು ವಿಷಾದಕರವಾದ ವಿಷಯವೇ ಸರಿ. ಪ್ರಾಯಶಃ, ಅದು ಹೊರಗಡೆಯಿಂದ ಮುಚ್ಚಿದುದಾಗಿರಬೇಕು ಎಂದು ತೋರಿತು. ಆಗ, ಹೀಗೆ ಇಲ್ಲಿ ಈ ರೀತಿ ಕಾದು ನಿಂತಿರುವುದಕ್ಕಿಂತಲೂ ಹೊರಗಡೆ ನಿಂತಿರುವುದು ಮೇಲೆಂದು ಭಾವಿಸಿ ಯುವಕನು ಒಂದೆರಡು ಹೆಜ್ಜೆ ಇಡುವಷ್ಟರಲ್ಲಿಯೇ ಸೋಪಾನದ ಮೇಲ್ಭಾಗದಿಂದ ಉಜ್ವಲತರವಾದ ದೀಪದ ಬೆಳಕು ಬಂದು ವಿಸ್ತಾರವಾದ ಆ ನಡುವೆಯ ಕೊಂಚ ಭಾಗವನ್ನು ಬೆಳಕುಮಾಡಿತು.

ಯುವಕನು ತಲೆಯೆತ್ತಿ ಅತ್ತ ಕಡೆ ನೋಡಿದನು. ಆ ಹೆಂಗಸು ಅದೇ ರೀತಿಯಲ್ಲಿ ಮುಖ ಪರದೆಯನ್ನೆಳೆದುಕೊಂಡು, ಕೈಯಲ್ಲಿ ಲಾಂದ್ರವನ್ನು ತೆಗೆದುಕೊಂಡು ಅವಸರವಸರವಾಗಿ ಇಳಿದುಬರುತ್ತಿದ್ದಾಳೆ. ರಮಣಿಯು ಸೋಪಾನ ಶ್ರೇಣಿಯಲ್ಲಿ ಅರ್ಧಕ್ಕೆ ಇಳಿದುಬಂದು,—ಮಹಾಶಯ, ಬೇಗನೆ ಬನ್ನಿ, ಇದುವರೆಗೆ ಏತಕ್ಕಾಗಿ ಭಯಪಡುತ್ತಿದ್ದೆನೋ, ಅದೇ ಸಂಭವಿಸಿದೆ; ಅವರು ಇಲ್ಲಿ ಬಂದು ಮೂರ್ಛಿತರಾಗಿದ್ದಾರೆ. ಅಕಟಕಟಾ! ಎಷ್ಟು ಹೊತ್ತಿನಿಂದ ಅವರು ಹೀಗಿರುವರೋ ಇದರಿಂದೇನಾಗುವುದೋ ತಿಳಿಯದಲ್ಲ?—ಎಂದು ಉತ್ಕಂಠಿತ ಭಾವದಿಂದ ಹೇಳಿದಳು.

ಭಯವಿಲ್ಲ, ವ್ಯಸ್ತರಾಗಬೇಡಿ ಎಂದು ಹೇಳುತ್ತ, ಯುವಕನು ಬೇಗ ಬೇಗನೆ ಅವಳನ್ನು ಹಿಂಬಾಲಿಸಿದನು. ಸೋಪಾನಶ್ರೇಣಿಯನ್ನು ಹತ್ತಿ ಅವರು ಒಂದು ಕೈಸಾಲೆಗೆ ಬಂದರು. ಅಲ್ಲಿಂದ ಮೂರು ನಾಲ್ಕು ಕೊಠಡಿಗಳಲ್ಲಿ ಪಾರಾಗಿ ಎತ್ತರವಾಗಿಯೂ ಪ್ರಶಸ್ತವಾಗಿಯೂ ಇದ್ದ

ಕೊಠಡಿಯೊಂದಕ್ಕೆ ಬಂದರು. ರಮಣಿಯು ಲಾಂದ್ರವನ್ನು ಕೈಸಾಲೆಯಲ್ಲಿಯೇ ಇಟ್ಟುಬಂದಿದ್ದಳು. ಆ ಪ್ರಕಾಶಮಾನವಾದ ಬೆಳಕನ್ನು ರೋಗಿಯ ಕೊಠಡಿಗೆ ತೆಗೆದುಕೊಂಡುಹೋಗುವ ಧೈರ್ಯವು ಅವಳಿಗಿರಲಿಲ್ಲ. ಆ ಕೊಠಡಿಯ ಒಂದು ಪಾರ್ಶ್ವದಲ್ಲಿ ಅರ್ಧ ಮಟ್ಟಿಗೆ ಮುಗಿದಿದ್ದ ಒಂದು ಮೇಣದಬತ್ತಿ ಉರಿಯುತ್ತಿತ್ತು. ಆ ಅಸ್ಪಷ್ಟವಾದ ಬೆಳಕಿನಲ್ಲಿ ಯುವಕನು ನೋಡಿದನು, ಆ ಕೊಠಡಿಯ ಒಂದು ಪಾರ್ಶ್ವದಲ್ಲಿ ಪರಿಷ್ಕಾರವಾದೊಂದು ಹಾಸುಗೆಯಲ್ಲಿ ಪ್ರೌಢ ವ್ಯಕ್ತಿ; ಅವನ ವಯಸ್ಸು ನಾಲ್ವತ್ತಕ್ಕೆ ಕಡಿಮೆಯಿಲ್ಲ, ಶರೀರವನ್ನು ಅಲುಗಿಸದೆ ಸತ್ತವನಂತೆ ಬಿದ್ದಿರುವನು ; ಆತನ ಮುಖವು ವಿವರ್ಣವಾಗಿದೆ. ಕಣ್ಣು ಅರ್ಧ ಮಾತ್ರ ಮುಚ್ಚಿದೆ. ಕೈಕಾಲುಗಳು ಓರೆಕೋರೆಯಾಗಿ ಬಿದ್ದಿವೆ. ಹಾಸುಗೆಯ ಅವಸ್ಥೆಯೂ ಕೂಡ ಹಾಗೆಯೇ. ದಿಂಬುಗಳು ಕ್ರಮತಪ್ಪಿ ಇಲ್ಲೊಂದು ಅಲ್ಲೊಂದರಂತೆ ಬಿದ್ದಿವೆ; ತಲೆ ಕಡೆಯ ದಿಂಬು ನೆಲಕ್ಕೆ ಉರುಳಿಕೊಂಡಿದೆ, ಹೊದ್ದಿಕೆಯು ಹೇಗೆ ಹೇಗೋ ಸುತ್ತಿಕೊಂಡಿದೆ.

ಯುವಕನು ಒಳಕ್ಕೆ ಹೋದನು, ಪ್ರಜ್ಞಾಶೂನ್ಯನಾದ ಆ ವ್ಯಕ್ತಿಯ ನಾಡಿಯನ್ನು ಹಿಡಿದು ಪರೀಕ್ಷಿಸಿದನು. ನಾಡಿಯು ನಿರೋಗಿಯ ನಾಡಿಯಂತೆ ತೋರಿತು ; ಆಗ ಆತನ ಮನಸ್ಸಿಗೆ ಹಠಾತ್ತಾಗಿ ಸ್ವಲ್ಪ ಸಂದೇಹವುಂಟಾಯಿತು ; ಇದು ಈ ಮನುಷ್ಯನ ನಟನೆಯಾಗಿರಬೇಕು. ಇಲ್ಲವಾದರೆ ಈ ರೋಗವು ಈ ಪ್ರಪಂಚದಲ್ಲಿ ಹೊಸ ಬಗೆಯದಾಗಿರಬೇಕು ಎಂದಂದುಕೊಂಡನು.

ರಮಣಿಯು ವ್ಯಸ್ತಳಾಗಿ,—ಹೇಗೆ ತೋರುವುದು ?—ಎಂದು ಕೇಳಿದಳು.

ಯುವಕ—ನಾಡಿ ನೋಡಿದ್ದರಲ್ಲಿ ರೋಗದ ಚಿಹ್ನೆಗಳೊಂದೂ ಕಂಡುಬರಲಿಲ್ಲ; ಸಾಮಾನ್ಯ ಮನುಷ್ಯನ ನಾಡಿಯ ಸ್ಥಿತಿ ಹೇಗಿರುವುದೋ ಈತನ ನಾಡಿಯೂ ಹಾಗೆಯೇ ಇದೆ.

ರಮಣಿ—ಅನೇಕ ಮಂದಿ ಡಾಕ್ಟರರೂ, ಪಂಡಿತರೂ ಹೇಗೆ ಹೇಳಿದರೋ ನೀವೂ ಹಾಗೆಯೇ ಹೇಳುತ್ತೀರಿ.

ಯುವಕ—ಈತನು ಮೂರ್ಛಿತನಾಗುವ ಮೊದಲು ತುಂಬ ಒದೆ ದಾಡುವನೋ ?

ರಮಣಿ—ಹೌದು, ಆ ಸಮಯದಲ್ಲಿ ಹಿಡಿದು ನಿಲ್ಲಿಸಲು ಯಾರಿಗೂ ಸಾಧ್ಯವಿಲ್ಲ.

ಯುವಕ—ಹಾಸುಗೆಯ ಸ್ಥಿತಿ ನೋಡುವಲ್ಲಿ ಹಾಗೆಯೇ ಕಾಣು ವುದು. ಹೊರಗಡೆ ಇರುವ ಲಾಂದ್ರುವನ್ನು ಸ್ವಲ್ಪ ತೆಗೆದುಕೊಂಡುಬನ್ನಿ.

ರಮಣಿ—ಯಾತಕ್ಕೆ ?

ಯುವಕ—ನಾಡಿಯ ಪರೀಕ್ಷೆಯಿಂದ ಇಂತಹ ರೋಗವೆಂದು ಗೊತ್ತುಮಾಡುವುದಕ್ಕೆ ಆಗದಿರುವಾಗ ಇತರ ವಿಧವಾದ ಪರೀಕ್ಷೆಗಳಿಂದ ನಿರ್ಣಯಿಸಬೇಕಾಗುವುದು.

ರಮಣಿ—ಇದರಿಂದ ರೋಗಪರೀಕ್ಷೆಯಾಗುವುದೇನು ?

ಯುವಕ—ಈತನು ನಟಿಸುತ್ತ ಬಿದ್ದಿರಬೇಕೆಂದು ತೋರುವುದು.

ರಮಣಿ—ಹಾಗೂ ಆಗುವುದುಂಟೇನು ?

ಯುವಕ—ಅದನ್ನು ಒಂದು ಸಲ ಪರೀಕ್ಷಿಸಿ ನೋಡುವುದರಲ್ಲಿ ದೋಷವೇನು ?

ರಮಣಿಯು ಲಾಂದ್ರುವನ್ನು ತಂದ ಕೂಡಲೇ ಯುವಕನು ಅದ ರೊಳಗಿನ ಉರಿಯನ್ನು ಹೆಚ್ಚಿಸಿದನು. ಅನಂತರ ಮೂರ್ಛಿತನಾಗಿದ್ದ ವ್ಯಕ್ತಿಯ ಮುಖದ ಮೇಲೆ ಬೆಳಕು ಬೀಳುವಂತೆ ಲಾಂದ್ರುವನ್ನು ಎತ್ತಿ ಹಿಡಿದುಕೊಳ್ಳಬೇಕೆಂದು ಹೇಳಿದನು.

ಆಮೇಲೆ ಯುವಕನು ಜ್ಞಾನವಿಲ್ಲದೆ ಬಿದ್ದಿದ್ದ ವ್ಯಕ್ತಿಯ ಕಣ್ಣಿನ ರೆಪ್ಪೆಗಳೆರಡನ್ನೂ ತೆರೆದು ಹಿಡಿದುಕೊಂಡನು. ಮೂರ್ಛಿತ ವ್ಯಕ್ತಿಯ ಕಣ್ಣುಗುಡ್ಡೆಗಳೆರಡೂ ಸ್ಥಿರವಾಗಿದ್ದುವು ; ಅಂತಹ ಪ್ರಕಾಶಮಾನವಾದ ಬೆಳಕು ಬಿದ್ದರೂ ಅವು ಅಲುಗಲಿಲ್ಲ ; ಚಿತ್ರದಲ್ಲಿ ಬರೆದಿಟ್ಟ ಹಾಗೆ ಸ್ಥಿರವಾಗಿದ್ದುವು. ಈ ಮನುಷ್ಯನು ನಟನೆ ಮಾಡುತ್ತಾ ಈ ರೀತಿ ಬಿದ್ದುಕೊಂಡಿರುವವನಾದರೆ ಈ ವ್ಯಕ್ತಿಯು ಈ ವಿಚಾರದಲ್ಲಿ ದಕ್ಷನೇ

ಸರಿ ಎಂದೂ, ಅವನ ಈ ನಟನೆಯು ಪ್ರಶಂಸನೀಯವೆಂದೂ ಯುವಕನು ಮನಸಾ ಭಾವಿಸಿದನು.

ಇಷ್ಟುಮಾತ್ರದಿಂದಲೇ ಯುವಕನು ಸುಮ್ಮನಾಗಲಿಲ್ಲ. ಆತನ ಕುತೂಹಲವು ಮತ್ತೂ ವೃದ್ಧಿಯಾಯಿತು. ಕೈಯೊಳಗಿನ ಲಾಂದ್ರವನ್ನು ರೋಗಿಯ ಕಣ್ಣಿನ ಹತ್ತಿರ ತೂಗಾಡಿಸಬೇಕೆಂದು ರಮಣಿಗೆ ಹೇಳಿದನು. ರಮಣಿಯು ಹಾಗೆಯೇ ಮಾಡಿದಳು. ಆಗ ಮೂರ್ಛಿತನಾದ ವ್ಯಕ್ತಿಯ ಕಣ್ಣುಗುಡ್ಡೆಗಳೆರಡೂ ಲಾಂದ್ರವನ್ನು ಅನುಸರಿಸಿ ಅಲುಗುತ್ತಿದ್ದುವು—ಯುವಕನ ಸಂಶಯವು ಬಲವಾಯಿತು. ಆಗ ಯುವಕನು ಒಂದು ಕಣ್ಣಿನ ರೆಪ್ಪೆಯನ್ನು ಬಿಟ್ಟುಬಿಟ್ಟು, ಇನ್ನೊಂದು ಕಣ್ಣಿನ ಗುಡ್ಡೆಯನ್ನು ಬೆರಳಿಂದ ಮುಟ್ಟುವುದಕ್ಕೆ ಪ್ರಯತ್ನಮಾಡುವಾಗ್ಗೆ, ರೋಗಿಯು ಭಯ ಪಟ್ಟು ಕಣ್ಣನ್ನು ಮುಚ್ಚಿಕೊಂಡನು; ಇಷ್ಟೇ ಪರೀಕ್ಷೆಯು ಸಾಕು.

ರಮಣಿಯು ಮೊದಲಿನಂತೆಯೇ ಆತುರದಿಂದ, –ಏನಾದರೂ ಗೊತ್ತಾಯಿತೆ ?—ಎಂದು ಕೇಳಿದಳು.

ಯುವಕನು ಮಂದಹಾಸದಿಂದ,—ಈ ರೋಗವನ್ನು ನಾನು ವಾಸಿಮಾಡಿಕೊಡುತ್ತೇನೆ; ಭಯಪಡಬೇಡಿ.—ಎಂದನು.

ರಮಣಿ—ಈಗ ಪ್ರಜ್ಞೆ ಬರುವುದಕ್ಕೆ ಏನು ಮಾಡಬೇಕು ?

ರೋಗಿಗೆ ಚೆನ್ನಾಗಿ ಪ್ರಜ್ಞೆ ಇದೆ; ರೋಗಿಯು ತಾನಾಗಿ ತೋರ್ಪಡಿಸಿಕೊಳ್ಳದ ಪಕ್ಷದಲ್ಲಿ ಮತ್ತೇತರಿಂದಲೂ ಅವನಿಗೆ ಪ್ರಜ್ಞೆ ಬರಮಾಡುವುದು ಸಾಧ್ಯವಿಲ್ಲವೆಂದು ಯುವಕನು ತನ್ನೊಳಗೆ ತಾನೇ ತಿಳಿದುಕೊಂಡು, ಪ್ರಕಾಶವಾಗಿ,—ಈಗ ನೀವು ಈತನ ಮುಖದ ಮೇಲೆ ತಣ್ಣೀರೆರಚಬಹುದು; ಅಥವಾ ನಿದ್ದೆ ಹೋಗುತ್ತಿರುವ ನಿಮ್ಮ ಸೇವಕ ರಲ್ಲಿ ಯಾರನ್ನಾದರೂ ಬರಮಾಡಿಕೊಂಡು ಈತನಿಗೆ ಪ್ರಜ್ಞೆ ಬರುವ ವರೆಗೂ ಬೀಸಣಿಗೆಯಿಂದ ಬೀಸುವಂತೆಮಾಡಲೂ ಮಾಡಬಹುದು—ಎಂದು ಹೇಳಿದನು.

ರಮಣಿಯು ಸಮ್ಮತಿಸೂಚಕವಾಗಿ ತಲೆಯಾಡಿಸಿ ಆ ಕೊಠಡಿಯಿಂದ ಹೊರಟುಹೋದಳು.

---

# ಹದಿನಾಲ್ಕನೆಯ ಪರಿಚ್ಛೇದ

## ಆಶ್ಚರ್ಯ ರೋಗಿ

ರಮಣಿಯು ಹೊರಟುಹೋದ ಮೇಲೆ, ರೋಗಿಯು ಯಾತನಾ ಸೂಚಕವಾದ ಒಂದೆರಡು ಶಬ್ದಗಳನ್ನು ಮಾಡಿ, ನಿದ್ರೆಯಿಂದ ಎಚ್ಚರಗೊಂಡವನ ಹಾಗೆ ಎದ್ದು ಕುಳಿತನು; ಯುವಕನನ್ನು ನೋಡಿ ದಾಗ ರೋಗಿಯ ದೃಷ್ಟಿಯಲ್ಲಿ ಒಂದು ಬಗೆಯ ವಿಸ್ಮಯ ಭಾವವು ವ್ಯಕ್ತಪಟ್ಟಿತು;—ತಾವು ಯಾರು? ತಮ್ಮ ಹೆಸರು?—ಎಂದು ಮೆಲ್ಲಗೆ ಕೇಳಿದನು.

ಯುವಕ—ನನ್ನ ಹೆಸರು "ದೇವೇಂದ್ರವಿಜಯಪುತ್ರ" ಎಂದು.

ರೋಗಿ—ಏನು, ಈ ಹೆಸರನ್ನು ನಾನು ಎಂದೂ ಕೇಳಿದ್ದಿಲ್ಲವಲ್ಲ?

ಯುವಕ—ನಾನು ಈ ಪ್ರಾಂತದವನಲ್ಲ; ನನ್ನ ಊರು ಭವಾನೀ ಪುರ; ಕಲಿಕತ್ತೆಗೆ ಸ್ವಲ್ಪ ದಕ್ಷಿಣ ಕಡೆ.

ರೋಗಿ—ಇರಬಹುದು, ತಾವು ಇಲ್ಲಿಗೆ ಬಂದದ್ದು ಹೇಗೆ? ತಮ್ಮನ್ನು ಇಲ್ಲಿಗೆ ಯಾರು ಕರೆದುಕೊಂಡು ಬಂದರು?

ಯುವಕ—ನೀವು ನಿಮ್ಮ ಹೆಂಡತಿಯನ್ನು ಆ ನದಿಯ ಹತ್ತಿರ ಒಂಟಿಯಾಗಿ ಬಿಟ್ಟು ಬಂದಿದ್ದಿರಿ. ಅವರು ಇಷ್ಟು ದೂರ ಒಬ್ಬಂಟಿಗರಾಗಿ ಹಿಂದಿರುಗಿ ಬರಲು ಧೈರ್ಯಪಡಲಿಲ್ಲ. ಆ ಸಮಯಕ್ಕೆ ಸರಿಯಾಗಿ ನಾನು ಆ ಮಾರ್ಗವಾಗಿ ದೋಣಿಯಲ್ಲಿ ಪ್ರಯಾಣ ಮಾಡುತಲಿದ್ದೆ; ನನ್ನನ್ನು ಕಂಡು ತಮ್ಮ ಹೆಂಡತಿ ಅವರನ್ನು ಈ ಸ್ಥಳಕ್ಕೆ ಸೇರಿಸಿ ಬರಬೇಕೆಂದು ಬಹಳವಾಗಿ ಕೇಳಿಕೊಂಡರು; ಅದರಿಂದ ಅವರನ್ನು ಬಿಟ್ಟು ಹೋಗಲು ಬಂದೆನು. ನೀವು ಅಸ್ವಸ್ಥರೆಂಬ ವಿಚಾರವನ್ನೂ ಆಕೆಯಿಂದ ಕೇಳಿದೆ. ನಾನೂ ಡಾಕ್ಟರ, ಆದಕಾರಣ ತಮ್ಮನ್ನು ಒಂದು ಬಾರಿ ನೋಡಿ ಹೋಗೋಣವೆಂದು ಇಲ್ಲಿಗೆ ಬಂದುದಾಯಿತು.

ರೋಗಿ—ನೀವು ಡಾಕ್ಟರೆ? ಡಾಕ್ಟರ ವಿಷಯದಲ್ಲಿ ನನಗೆ ಕೊಂಚವೂ ನಂಬುಗೆಯಿಲ್ಲವೆಂಬ ಅಂಶವನ್ನು ನನ್ನ ಹೆಂಡತಿ ನಿಮಗೆ ಹೇಳಲಿಲ್ಲ ವೇನು?

ಯುವಕ—ಹೌದು, ಒಂದು ಸಲ ಹೇಳಿದರು, ನಿಶ್ಚಯ.

ರೋಗಿ—ಅವಳು ಹೇಳಿದ ಮೇಲೂ ನೀವು ಇಷ್ಟು ಶ್ರಮಪಟ್ಟು ಕೊಂಡು ನನ್ನನ್ನು ನೋಡಬಂದುದೇಕೆ? ಅವಳಾದರೂ ನಿಮ್ಮನ್ನು ವ್ಯರ್ಥವಾಗಿ ಯಾತಕ್ಕೆ ಕರೆದುಕೊಂಡು ಬಂದಳು?

ಯುವಕ—ಇಲ್ಲಿಗೆ ಬಂದಾಗ ತಾವು ಮೂರ್ಛೆಯಿಂದ ಸತ್ತವರಂತೆ ಬಿದ್ದುಕೊಂಡಿದ್ದಿರಿ; ಈಗ ಪ್ರಕೃತಿಸ್ಥರಾದುದನ್ನೂ ನೋಡಿದುದಾ ಯಿತು; ಇನ್ನು ನಾನು ಇಲ್ಲಿರಬೇಕಾದ ಆವಶ್ಯಕವಿಲ್ಲ. ಇನ್ನು ಹೊರಡುತ್ತೇನೆ.—ಎಂದು ಹೊರಡಲು ಸಿದ್ಧನಾದನು.

ರೋಗಿ—ಕುಳಿತುಕೊಳ್ಳಿರಿ, ಕೋಪಮಾಡಿಕೊಂಡಿರೋ? ನನ್ನನ್ನು ಕ್ಷಮಿಸಿ; ತಮ್ಮ ಪರಿಚಯಲಾಭವಾದುದರಿಂದ, ತಮ್ಮ ಕೈಯಿಂದಲೂ ಒಂದು ಸಲ ಔಷಧ ತೆಗೆದುಕೊಳ್ಳೋಣವೆಂದಿದ್ದೇನೆ. ಡಾಕ್ಟರ ಚಿಕಿತ್ಸೆ ಯಲ್ಲಿ ಇದೇ ಕಡೆಯದು. ನನ್ನ ಈ ರೋಗವು ಜಾಗ್ರತೆ ಗುಣವಾಗುವ ಹಾಗೆ ಔಷಧ ಕೊಡಬಲ್ಲಿರಾ?

ಯುವಕ—ಒಂದುಬಾರಿ ಪ್ರಯತ್ನಮಾಡಿ ನೋಡಬಲ್ಲೆ. ಆದರೆ ಪ್ರಥಮತಃ ರೋಗಿ ಮತ್ತು ಚಿಕಿತ್ಸಕರು ಒಬ್ಬರನ್ನೊಬ್ಬರು ತಿಳಿದಿರುವುದು ಆವಶ್ಯಕ. ಅನಂತರ ರೋಗದ ಚಿಕಿತ್ಸೆ. ನಿಮ್ಮ ದೇಹಸ್ಥಿತಿಯ ವಿಚಾರ ವನ್ನು ನನ್ನಲ್ಲಿ ಮರೆಮಾಚುವುದಾದರೆ, ನಾನು ನನ್ನ ಜೀವಮಾನವೆಲ್ಲ ತಮಗೆ ಚಿಕಿತ್ಸೆ ಮಾಡಿದರೂ ತಮ್ಮ ಅಸ್ವಸ್ಥತೆಯನ್ನು ಕೊಂಚವೂ ಶಮನ ಗೊಳಿಸುವುದಕ್ಕೆ ಸಾಧ್ಯವಾಗದು. ನನ್ನ ಮನಸ್ಸಿನಲ್ಲಿರುವುದನ್ನು ಮೊದಲು ಹೇಳಿ ಬಿಡುತ್ತೇನೆ; ನಾನು ಮೊದಲು ಬಂದು ನೋಡಿದಾಗ, ನೀವು ಮೂರ್ಛಿತರಾದವರಂತೆ ಇದ್ದುದೇನೋ ನಿಜ. ಆದರೆ ನೀವು ನಿಜವಾಗಿಯೂ ಮೂರ್ಛಿತರಾಗಿರಲಿಲ್ಲ—ಮೂರ್ಛಿತರಾಗಿದ್ದಂತೆ ನಟಿ ಸುತ್ತಾ ಬಿದ್ದುಕೊಂಡಿದ್ದಿರಿ. ಅಲ್ಲವೆ?

ರೋಗಿ—ತಾವು ಸರಿಯಾಗಿ ಹೇಳಿದಿರಿ. ನಾನು ಮೂರ್ಛಿತನಾದ ಹಾಗೆ ನಟಿಸಿದೆ, ಆಗ ನನಗೆ ಚೆನ್ನಾಗಿ ಜ್ಞಾನವಿದ್ದಿತು.

ಯುವಕ—ಹಾಗೆ ಏಕೆ ಮಾಡಿದಿರಿ?

ಯುವಕನ ಈ ಬಗೆಯ ಪ್ರಶ್ನೆಯಿಂದ ರೋಗಿಯ ಕಣ್ಣುಗಳು ಅರೆಗಳಿಗೆಯವರೆಗೆ ಕೆಂಪೇರಿದ್ದು ಪುನಃ ಮೊದಲಿನ ಭಾವವನ್ನು ಧಾರಣ ಮಾಡಿದುವು. ಅನಂತರ ಅವನು ಶೂನ್ಯದೃಷ್ಟಿಯಿಂದ ಒಂದು ಸಲ ಬಾಗಿಲಕಡೆ ನೋಡಿ, ಸುತ್ತಲೂ ತಿರುಗಿನೋಡಿದನು; ಪುನಃಪುನಃ ಆ ಬಾಗಿಲಕಡೆ ನೋಡುತ್ತಾ ಉದ್ವೇಗ ಕಂಪಿತ ಸ್ವರದಿಂದ ಹೇಳಿದನು:—ಕೇವಲ ನನ್ನ ಹೆಂಡತಿಗಾಗಿ—ಮತ್ತೇತಕ್ಕಾಗಿಯೂ ಅಲ್ಲ, ಡಾಕ್ಟರ್ ಮಹಾಶಯ; ನನ್ನ ಈ ಮೂರ್ಛೆಯು ಇಪ್ಪತ್ತನಾಲ್ಕು ಗಂಟೆಗಳ ಹೊತ್ತು ಸ್ಥಾಯಿಯಾಗಿರುವಂತೆ ಮಾಡಬಲ್ಲ, ಯಾವುದಾದರೂ ಚಿಕಿತ್ಸೆ ಇದೆಯೆ? ನಾನು ಮೂರ್ಛಿತನಾಗಿದ್ದಾಗ್ಗೆ ನಿರೋಗಿಯಾಗಿರುತ್ತೇನೆ; ನಾನು ಸಂಪೂರ್ಣವಾಗಿ ಸ್ವಸ್ಥಗೊಂಡಿರುವುದೂ ಆಗಲೇ. ಅದಾದ ನಂತರ ಪ್ರಜ್ಞೆ ಬಂದಾಗ ನನಗೆ ತುಂಬ ಯಾತನೆಗಳು. ಹೃದಯದಲ್ಲಿ ಯಾತನೆ, ತಲೆಯಲ್ಲಿ ಯಾತನೆ; ಎದೆಯೊಡೆಯುವುದೊ ಎನ್ನುವಂತಾಗುವುದು, ತಲೆ ಸಿಡಿಯುವುದೊ ಎನ್ನುವಹಾಗಿರುವುದು—ಹೀಗೆ ನನಗೆ ಬಹು ಭಯಂಕರ ಯಾತನೆಗಳು. ಈ ಯಾತನೆಯೆಲ್ಲವೂ ಸ್ವಯಂಕೃತವೆಂಬುದನ್ನು ಬಲ್ಲೆ; ಆತ್ಮವಂಚನೆಯೊಂದಲ್ಲದೆ ಮತ್ತೆ ಯಾವುದೂ ಅಲ್ಲ. ಒಂದಲ್ಲ ಒಂದು ದಿನ, ಇದರಿಂದಲೇ ನನ್ನ ಜೀವನವು ಕಡೆಗಾಣುವುದೆಂದೂ ಬಲ್ಲೆ. ನಾನಾಗಿ ನರಕಾಗ್ನಿಯನ್ನು ನನ್ನ ಹೃದಯ ಮಧ್ಯೆ ಉರಿಯಿಸುತ್ತಿರುವೆನೆಂದು ತಿಳಿದಿದ್ದೇನೆ; ಆದರೆ ಆ ವಿಚಾರವನ್ನು ಪ್ರಾಣ ಹೋಗುವಾಗಲೂ ಪ್ರಕಾಶಪಡಿಸಲಾರೆ,—ಅನಂತರವೂ ಮಾಡುವುದಿಲ್ಲ. ನೀವು ಈಗ ಒಂದು ಕೆಲಸಮಾಡಿ; ಈಗ ಇನ್ನೊಂದು ಕೊಠಡಿಯಲ್ಲಿ ಹೋಗಿ ಕುಳಿತುಕೊಳ್ಳಿ; ನಾನು ಈಗ ಏಕಾಂಗಿಯಾಗಿರುವುದಕ್ಕೆ ಸಾಧ್ಯವಾದರೆ ಬಹುಮಟ್ಟಿಗೆ ಸ್ವಸ್ಥನಾಗುತ್ತೇನೆ. ನಿಮ್ಮ ಸಂಗಡ ಹೇಳಿದ ಮಾತುಗಳಲ್ಲಿ ಒಂದು ಬಿಂದುವನ್ನಾದರೂ ನನ್ನ ಹೆಂಡತಿಗೆ ಹೇಳಬೇಡಿ. ಈಗ ಇಲ್ಲಿಗೆ ಬರಕೂಡದೆಂದು ಅವಳಿಗೂ ದಯಮಾಡಿ ತಿಳಿಯಿಸಿ. ಮುಖ್ಯವಾಗಿ ನಾನು ಸ್ವಲ್ಪ ಹೊತ್ತು ಏಕಾಂಗಿಯಾಗಿ ಇರಬೇಕೆಂ

ಬಿದ್ದೇನೆ. ಸ್ವಲ್ಪ ಸುಧಾರಿಸಿಕೊಂಡು ನಂತರ ನಿಮಗೆ ಹೇಳಿ ಕಳುಹುತ್ತೇನೆ.—ಹೀಗೆಂದು ಹೇಳಿ, ಆತನು ಹಾಸುಗೆಯಿಂದೆದ್ದು ಹೋಗಿ, ತೆರದಿದ್ದ ಕಿಟಕಿಯೊಂದರ ಹತ್ತಿರ ತಲೆಯಮೇಲೆ ಕೈಯಿರಿಸಿಕೊಂಡು ಕುಳಿತುಕೊಂಡನು; ಹಾಗೆಯೇ ನಿಟ್ಟುಸಿರಿಡುತ್ತಿದ್ದನು.

ಯುವಕನಿಗೆ ಅವನ ಮಾತಿನ ಅಭಿಪ್ರಾಯಗಳೊಂದೂ ತಿಳಿಯಲಿಲ್ಲ. ರೋಗಿಯ ಮೆದುಳು ಹೇಗೋ ಕೆಟ್ಟಿರಬೇಕೆಂದು ಭಾವಿಸಿದನು. ಅನಂತರ ಆ ಅದ್ಭುತ ರೋಗಿಯ ಕೊಠಡಿಯಿಂದ ಹೊರಟು ಕೈಸಾಲೆಗೆ ಬಂದು ನಿಂತುಕೊಂಡನು. ಆ ಹೊತ್ತಿಗೆ ಸರಿಯಾಗಿ ರೋಗಿಯ ಹೆಂಡತಿ ಆತುರದಿಂದ ಬಂದು, ಅಲ್ಲಿ ಯುವಕನು ಹೊರಗಡೆ ನಿಂತಿರುವುದನ್ನು ಕಂಡು—ತಾವು ಒಬ್ಬರೇ ಇಲ್ಲಿ ನಿಂದಿರುವಿರಲ್ಲಾ—ಆತನೇನಾ......

ಯುವಕನು, ಮಾತು ಪೂರೈಸಗೊಡದೆ, ಆತನಿಗೆ ಈಗ ಪ್ರಜ್ಞೆ ಬರುತ್ತಲಿದೆ. ಆತನು ಎದ್ದು ಕಿಟಕಿಯ ಬಳಿ ಗಾಳಿಗಿದಿರಾಗಿ ಕುಳಿತುಕೊಂಡಿರುವನು; ಈಗ ಆತನು ಏಕಾಂಗಿಯಾಗಿರಲು ಅಪೇಕ್ಷಿಸಿದನು. ನಿಮ್ಮ ಯಜಮಾನರ ಮನಸ್ಸಿನಲ್ಲಿ ಯಾವುದೋ ಒಂದು ಬಗೆಯ ಶೋಕವೂ ದುಃಖವೂ ಸೇರಿ ಇಂತಹ ತೊಂದರೆಗೆ ಅವಕಾಶವಾಯಿತೆಂದು ತೋರುತ್ತದೆ. ಅದರಿಂದಲೇ ಆತನು ಅಧೀರನೂ ಆತುರಗಾರನೂ ಆಗಿರುವನು. ಸ್ವಲ್ಪ ಮಟ್ಟಿಗೆ ಮೆದುಳು ಕೆಟ್ಟಿರಬಹುದೆಂದೂ—ಏತರಿಂದಲೂ ಆತನು ತಾನಾಗಿಯೇ ಸುಧಾರಿಸಿಕೊಳ್ಳಲಾರನೆಂದೂ ಭಾವಿಸುತ್ತೇನೆ—ಎಂದು ಹೇಳಿದನು.

---

## ಹದಿನೈದನೆಯ ಪರಿಚ್ಛೇದ

### ವಿಪತ್ತಿನ ಛಾಯೆ

ರಮಣಿಯು ಚಿಂತಿತ ಭಾವದಿಂದ ಸ್ವಲ್ಪ ಹೊತ್ತು ತಲೆ ತಗ್ಗಿದವಳಾಗಿದ್ದು, ಯಾಕೆ, ಅಂತಹ ನಡವಳಿಗಳೊಂದೂ ನಡೆದಿಲ್ಲವಲ್ಲ! ತಾವು ಈಗ (ಬೆರಳಿಂದ ತೋರಿಸಿ) ಈ 'ವರಾಂಡದ' ಅತ್ತ ಕಡೆ ಮೂಲೆಯಲ್ಲಿರುವ ಕೊಠಡಿಯಲ್ಲಿ ಹೋಗಿ ಕುಳಿತುಕೊಳ್ಳಿರಿ; ಆ ಕೊಠಡಿಯಲ್ಲಿ ದೀಪವಿರು

ವುದು ಕಾಣಿಸುತ್ತಿದೆ. ತನಗೆ ಬಹಳ ಸಾವಕಾಶವಾಯಿತು; ಅದಕ್ಕಾಗಿ ಏನೂ ತಿಳಿದುಕೊಳ್ಳಕೂಡದು; ಬಹಳ ವಿಪತ್ತಿಗೆ ಸಿಕ್ಕಿರುದರಿಂದ ತನಗೆ ತೊಂದರೆ ಕೊಡಬೇಕಾಯಿತು—ಎಂದು ಮೆಲ್ಲಗೆ ಹೇಳಿ, ಆ ಅವಗುಂಠನ ವತಿಯು ರೋಗಿಯ ಕೊಠಡಿಗೆ ಹೋದಳು. ಅನಂತರ ಯುವಕನು ಒಂದೆರಡು ಹೆಜ್ಜೆ ಇಡುವುದರೊಳಗಾಗಿ, ರೋಗಿಯ ಕೊಠಡಿಯಿಂದ ಭಯಂಕರವಾದ ಒಂದೆರಡು ಮಾತುಗಳು ಅವನಿಗೆ ಕೇಳಿಸಿತು. ಆ ಮಾತುಗಳನ್ನು ಬಹು ಮೆಲ್ಲಗೆ ಉಚ್ಚಾರಮಾಡಿದರಾದರೂ, ಅದು ಸ್ಪಷ್ಟವಾಗಿಯೇ ಕೇಳಿಸಿತು. ಯುವಕನು ಅಲ್ಲಿಯೇ ನಿಂತು ಕೇಳ ತೊಡಗಿದನು.

ರಮಣಿ—ಇವನೇ ಹೌದೇನು! ನಿಮಗೆ ಚೆನ್ನಾಗಿ ಗುರುತಾಯಿತೆ?

ರೋಗಿ—ಹೌದು, ಇವನೇ.

ರಮಣಿ—ಇವನ ಹೆಸರು ದೇವೇಂದ್ರವಿಜಯನೆಂತಲೆ?

ರೋಗಿ—ಹೌದು, ಇವನ ಹೆಸರು ಅದೇ.

ರಮಣಿ—ಹಾಗಾದರೆ ನಾನು ಮೋಸಹೋಗಲಿಲ್ಲ?

ರೋಗಿ—ಎಂದೂ ಆಗದಿದ್ದುದು ಇಂದಾದೀತೇ?

ಹೀಗೆಂದು ಹೇಳಿ ರೋಗಿಯು ಮೆಲ್ಲಗೆ ನಕ್ಕನು. ಆ ಶಬ್ದವನ್ನು ಸಹ ಯುವಕನು ಹೊರಗಿನಿಂದಲೇ ಸ್ಪಷ್ಟವಾಗಿ ಕೇಳಿದನು.

ರಮಣಿ—ಈಗ ಏನು ಮಾಡಬೇಕು?

ರೋಗಿ—ನಿನಗೆ ಇಷ್ಟಬಂದ ಹಾಗೆ.

ರಮಣಿ—ನೀನು ಹೇಗೆ ಹೇಳಿದರೆ, ಹಾಗೆ ಮಾಡುತ್ತೇನೆ.

ರೋಗಿ—ಕೊಲೆಮಾಡು.

ರಮಣಿ—ಕೊಲೆಮಾಡಲೆ!

ರೋಗಿ—ಇದೇನು ಬಹು ಆಶ್ಚರ್ಯವಾಗಿದೆಯಲ್ಲ! ಯಾತ ಕ್ಕೆಂದರೆ ಇಂತಹ ಮಾತನ್ನು ಎಂದೂ ನಿನ್ನಿಂದ ಕೇಳಿದ್ದಿಲ್ಲವಲ್ಲ? ಇಂದು 'ಕೊಲೆ' ಎಂಬ ಮಾತು ಕೇಳಿ ಆಕಾಶದಿಂದ ನೆಲಕ್ಕುರುಳಿದಂತಾದೆ ಯಲ್ಲ! ಮೊದಮೊದಲು ಕೊಲೆಮಾಡುವುದರಲ್ಲಿ ನಿನಗೆ ಎಷ್ಟೋ ಅಭಿ

ರುಚಿ ಇತ್ತು. ಯಾರು ಬಲ್ಲರು, ಯುವಕನ ರೂಪವನ್ನು ಕಂಡು ಬೆರಗಾಗಿಲ್ಲವಷ್ಟೆ? ನೋಡಿಕೊ ನನ್ನನ್ನು ಕೈಬಿಡಬೇಡ.

ರಮಣಿ—ಅಂತಹ ಭಯವೇನೂ ಇಲ್ಲ, ಹಾಗಿದ್ದ ಪಕ್ಷದಲ್ಲಿ ಅಸಂಖ್ಯವಾದ ವಿಪತ್ತುಗಳ ಭಾರವನ್ನು ಹೊತ್ತುಕೊಂಡು, ಇಷ್ಟು ಕಾಲ ನಿನ್ನೊಡನೆ ಅಲೆದಾಡಿ ಸಾಯುತ್ತಿರಲಿಲ್ಲ. ನೀನು ನನ್ನ ವಿಚಾರದಲ್ಲಿ ಈ ರೀತಿ ಭಾವಿಸಿದೆಯಾ? ಈ ಮನುಷ್ಯನ ವಿಷಯವಾಗಿ ಮೊದಲು ಮಾಡಿದ್ದ ಪರಾಮರ್ಶದಂತೆ ಕೆಲಸ ಮಾಡುವುದು ಒಳ್ಳೆಯದಲ್ಲವೆ?

ರೋಗಿ—ಆ ಪರಾಮರ್ಶದಂತೆಯೇ ಕೆಲಸಮಾಡು. ಆ ಕಾರಣದ ದೆಸೆಯಿಂದ ಈ ಮನುಷ್ಯನು ಅತ್ಯಾವಶ್ಯಕ.

ಕೇಳಿ ಯುವಕನ ದೃಷ್ಟಿ ನಟ್ಟಿತು. ಕೇಳಿದುದರಿಂದ ಜಟಿಲವಾದೊಂದು ರಹಸ್ಯದಿಂದ ಜಟಿಲತರವಾದ ಮತ್ತು ದುರ್ಭೇದ್ಯವಾದ ರಹಸ್ಯದ ಮಧ್ಯೆ ಯುವಕನು ಮಗ್ನನಾದನು. ಅವರ ಬಾಯಲ್ಲಿ ಅವನದೇ ಹೆಸರು! ಅವನ ಹೆಸರೇ ದೇವೇಂದ್ರಬಾಬು—ಅವನನ್ನೇ ಕೊಲೆ ಮಾಡಬೇಕೆಂಬ ಸಂಕಲ್ಪ. ಮೊದಲಿನ ಪರಾಮರ್ಶದಂತೆ ಕೆಲಸ ನಡೆಯುವುದಂತೆ! ಇವುಗಳೆಲ್ಲದರ ಅರ್ಥವೇನು? ಆಲೋಚಿಸಿ ತಿಳಿವುದಕ್ಕೆ ಯುವಕನಿಗೆ ಸಾಧ್ಯವಾಗಲಿಲ್ಲ. ಅವನ ತಲೆ ತಿರುಗುವಂತೆ ತೋರಿತು; ಅವನ ಹೃದಯದಲ್ಲಿನ ರಕ್ತನಾಡಿಗಳಲ್ಲಿ ರಕ್ತಪ್ರವಾಹವು ತುಂಬಿ ಹರಿಯತೊಡಗಿತು.

ಯುವಕನು ಬಹು ಪ್ರಯಾಸದಿಂದ ಧೈರ್ಯನಾಂತು, ಸನ್ನಿಹಿತವಾದ ವಿಪತ್ತಿಗೆ ಸಿದ್ಧನಾದನು. ಯಾವಾಗ ಅವರ ಮಾತು ಕತೆಗಳು ಕೇಳಿಬರಲಿಲ್ಲವೋ ಆಗ ಅವನು ಅಲ್ಲಿಂದ ಸ್ವಲ್ಪ ಮುಂದಾಗಿ ಇನ್ನೊಂದು ಕಡೆಯ ಕೈಸಾಲೆಯ ಕಟಕಟೆಗೆ ಒರಗಿ ನಿಂತುಕೊಂಡನು. ಅಲ್ಲಿಯೂ ವಿಪರೀತ ಕತ್ತಲೆ; ಯುವಕನು ಆ ಅಂಧಕಾರದಲ್ಲಿ ನಿಂತುಕೊಂಡು ತನ್ನ ಹಣೆಯ ಬರಹವನ್ನೂ ಸನ್ನಿಹಿತವಾಗಿರುವ ವಿಪತ್ತನ್ನೂ ಕುರಿತು ಆಲೋಚಿಸತೊಡಗಿದನು. ಅವನ ದೃಷ್ಟಿಗೆ ಇಂದು ನಾಲ್ಕೂ ಕಡೆಯಲ್ಲಿ ಕತ್ತಲು ದಟ್ಟವಾಗಿ ಕವಿದುಕೊಂಡಿದ್ದಿತು.

## ಹದಿನಾರನೆಯ ಪರಿಚ್ಛೇದ

### ಭಯ ಮತ್ತು ಸಂದೇಹ

ಕೊಂಚ ಹೊತ್ತಿನೊಳಗಾಗಿ ಆ ರಮಣಿಯು ಪ್ರಕಾಶಮಾನವಾದ ದೀಪವೊಂದನ್ನು ತೆಗೆದುಕೊಂಡು ದೇವೇಂದ್ರವಿಜಯನಿದ್ದಲ್ಲಿಗೆ ಬಂದಳು. ಅವಳ ಆ ಮುಖಪರದೆಯು ಬದ್ದದಲ್ಲಿ ಮೊದಲಿಗಿಂತಲೂ ಬಹಳ ಪೊಟಕಾಗಿದ್ದಿತು. ಬೆವರಿನಿಂದ ತೊಯಿದ ಮುಂಗುರುಳು ಹಣೆಯ ಮೇಲ್ಭಾಗದ ಕೊಂಚ ಭಾಗವನ್ನು ಆವರಿಸಿಕೊಂಡಿತ್ತು. ಅವಳ ಕೃಷ್ಣ ಕೇಶರಾಶಿಯ ದೀರ್ಘವಾದ ಕೇಶಗುಚ್ಛವೊಂದು ಅವಳ ಕಿವಿಯ ಹಿಂಭಾಗದಿಂದ ಹೊರಟು, ಅವಳ ಆ ಸೂಕ್ಷ್ಮ ವಸ್ತ್ರಾಚ್ಛಾದಿತವಾಗಿ ಎತ್ತರವಾಗಿರುವ ವಕ್ಷದ ಮೇಲೆ ಇಳಿಯುದ್ದ ಅಲೆದಾಡುತ್ತಿದೆ. ಅವಳ ಆ ಅಪ್ರಶಸ್ತವಾದ ಮುಖಪರದೆಯನ್ನೂ, ಕೃಷ್ಣ ಕೇಶಗುಚ್ಛವನ್ನೂ, ಕಾಂತಿಮಯವಾದ ಅವಳ ಮುಖಮಂಡಲವನ್ನೂ ನೋಡಿದಾಗ, ವಸಂತಮಾಸದಲ್ಲಿ ಹುಣ್ಣಿಮೆಯ ಚಂದ್ರನಿಗೆ ಒಂದು ಕಡೆ ಕಪ್ಪು ಮೋಡವೂ ಇನ್ನೊಂದು ಕಡೆ ಬಿಳಿಯ ಮೋಡವೂ ಅನುಸರಿಸಿ ನಿಂತಿರುವಂತೆ ತೋರುವುದು. ಕೈಯೊಳಗಿನ ದೀಪದ ಬೆಳಕು ರಮಣಿಯ ಕೆಂಪು ಮಿಶ್ರವಾದ ಮುಖಮಂಡಲವನ್ನು ಹೊಳೆಸ್ಕಿ, ಚಂಚಲವೂ ಹಾಸ್ಯಮಯವೂ ಆದ, ಅಚ್ಚ ಕಪ್ಪಾದ, ಕರ್ಣಾಂತವಿಸ್ತಾರವಾಗಿರುವ ಕಣ್ಣುಗಳ ಪ್ರಾಚುರ್ಯದಿಂದ ಮನೋಹರವಾಗಿಯೂ, ತೀಕ್ಷ್ಣತೆಯಿಂದ ಮಧುರವಾಗಿಯೂ, ಚಾಂಚಲ್ಯದಿಂದ ಮಧುರತರವಾಗಿಯೂ ಇರುವ ಸ್ವಾಭಾವಿಕ ಸೌಂದರ್ಯದೊಂದಿಗೆ ಮೋಹಕವಾದ ರಮಣೀಯತೆಯನ್ನು ಸಂಪೂರ್ಣ ಭಾವದಿಂದ ವಿಕಸನಗೊಳಿಸುತ್ತಿದೆ!

ಭುವನ–ಚಾಂಚಲ್ಯ ವಿಧಾಯಿನಿಯಾದ ಆ ವಿಲೋಲ ಕಟಾಕ್ಷ ಶಾಲಿನಿಯ ಆಗಮನದಿಂದಲೂ, ಆಕೆಯ ಆ ಲಲಿತ ಕೋಮಲ ಭಾವ ಭಂಗಿಯಿಂದಲೂ ಮೊದಲೇ ಮುಗ್ಧನಾಗಿದ್ದ ದೇವೇಂದ್ರವಿಜಯನು ಮೊದಲಿಗಿಂತಲೂ ಹೆಚ್ಚಾಗಿ ಮೈಮರೆದನು; ಅವನಿಗೆ ತನ್ನ ವಿಪತ್ತಿನ ವಿಚಾರವೇ ಮರೆದುಹೋಯಿತು; ಅವನ ಮನಸ್ಸಿನಲ್ಲಿ ಹಿಂದಣ

ಆಲೋಚನೆಗಳೊಂದೂ ಉಳಿಯಲಿಲ್ಲ. ಆಗ, ಆ ದೊಡ್ಡ ಕಾಡಿನ ಮಧ್ಯೆ ಇರುವ, ಅಂಧಕಾರಮಯವಾದ, ಪಾಳು ಬೀಳುತ್ತಲಿರುವ, ಬಹು ವಿಸ್ತಾರವಾದರೂ ಜನಶೂನ್ಯವಾದ, ಮಿತ್ರ ಬಾಂಧವರಿಲ್ಲದ ಆ ಊರೇ ಅವನು ತಲ್ಲಣಗೊಳ್ಳುವುದಕ್ಕೆ ಏಕಮಾತ್ರ ಕಾರಣವೆಂದೂ, ಅಲ್ಲಿರುವ ಆ ಅಪರಿಚಿತ ರಮಣಿಯೇ ತನಗೆ ಪರಿಚಿತಳಾದವಳೆಂದೂ ಅವನು ಭಾವಿಸಿದನು. ಮತ್ತೂ ಭಾವಿಸಿಕೊಂಡನೇನೆಂದರೆ, ಮರೆಯಾಗಿ ನಿಂತು ಕೇಳಿದ ಅವಳ ಆ ಭಯಂಕರವಾದ ಮಾತುಗಳೆಲ್ಲವೂ ಬೇಸರಗೊಂಡಿದ್ದ ತನ್ನ ಮನಸ್ಸನ್ನು ಚಂಚಲಗೊಳಿಸುವುದಕ್ಕಾಗಿ ಅಕಾರಣವಾದ ಕಲ್ಪನೆಯೊಂದು ಅಂಧಕಾರದಲ್ಲಿ ಮರೆಯಾಗಿ ಬಂದು, ಗೋಚರವಾಗದಂತೆ ತನ್ನ ಮಸ್ತಿಷ್ಕದಲ್ಲಿ ಪ್ರವೇಶಮಾಡಿ ಅಲ್ಲಿ ಒಂದು ನೆಲೆಯನ್ನು ನಿರ್ಮಾಣ ಮಾಡಿಕೊಳ್ಳುತಿದ್ದಿತೇ ಹೊರತು ಮತ್ತೇನೂ ಅಲ್ಲವೆಂದು ಭಾವಿಸಿದನು. ಅವನಿಗೆ ತಾನು ಕೇಳಿದುದೆಲ್ಲವೂ ಸುಳ್ಳು—ನಿರರ್ಥಕ ಎಂದು ತೋರಿತಲ್ಲದೆ ಯಾವುದೂ ನಿಶ್ಚಯವೆಂದು ತೋರಲಿಲ್ಲ.

ಹೀಗೆ ದೇವೇಂದ್ರವಿಜಯನ ಮನಸ್ಸು ಅಲ್ಲೋಲ ಕಲ್ಲೋಲವಾಗುತಿದ್ದಾಗ ರಮಣಿಯು—ತಾವು ಇಲ್ಲಿಯೇ ನಿಂತಿರುವಿರಾ! ನನ್ನೊಡನೆ ದಯಮಾಡಿ ಬರಬೇಕು—ಎಂದು ಮಂದಹಾಸದೊಡನೆ ಹೇಳಿದಳು.

ದೇವೇಂದ್ರ—ಮತ್ತೇಕೆ, ಬಹಳ ಹೊತ್ತಾಗಿದೆ; ನನ್ನನ್ನು ದೋಣಿಯ ಬಳಿ ಬಿಟ್ಟುಬರುವುದಕ್ಕೆ ನಿಮ್ಮ ಸೇವಕನೊಬ್ಬನಿಗೆ ಹೇಳಿ. ಈ ದಾರಿಯನ್ನು ನಾನು ಗುರ್ತಿಸುವುದು ಸಾಧ್ಯವಿಲ್ಲ.

ಮಹಾಶಯ, ಕ್ಷಮಿಸಬೇಕು, ಸ್ವಲ್ಪ ಫಲಾಹಾರ ಮಾಡದೆ ತಾವು ಇಲ್ಲಿಂದ ಹೊರಡಲಾಗದು.—ಎಂದು ರಮಣಿಯು ವಿನೀತಭಾವದಿಂದ ಹೇಳಿದಳು.

ದೇವೇಂದ್ರ—ಆ ವಿಚಾರದಲ್ಲಿ ನೀವು ನನ್ನನ್ನು ಮನ್ನಿಸಿ.

ರಮಣಿ—ಹಾಗಾಗುವುದಾದರೆ ನನಗೆ ತುಂಬ ಅಸಮಾಧಾನವಾಗುವುದು. ಮಹಾಶಯರ ಹೆಸರನ್ನಾದರೂ ಕೇಳಬಾರದೆ; ಇಂತಹ

ಉಪಕಾರಿಗಳ ಹೆಸರು ಚಿರಕಾಲ ನಮ್ಮ ನೆನಪಿನಲ್ಲಿರುವುದಕ್ಕೆ ಯೋಗ್ಯವಾದುದು.

ದೇವೇಂದ್ರ—"ದೇವೇಂದ್ರವಿಜಯ"

---

## ಹದಿನೇಳನೆಯ ಪರಿಚ್ಛೇದ

### ಸುಂದರಿಯ ಮನೋಭಾವ

ದೇವೇಂದ್ರವಿಜಯನನ್ನು ಸಂಗಡ ಕರೆದುಕೊಂಡು ಆ ರಮಣಿಯು ಪಶ್ಚಿಮಾಭಿಮುಖವಾಗಿ ದೀರ್ಘವಾಗಿರುವ ಆ ಕೈಸಾಲೆಯ ಕೊಟ್ಟ ಕೊನೆಯವರೆಗೂ ಹೋದಳು. ಅಲ್ಲಿ ಒಂದು ಕೊಠಡಿಗೆ ಬೀಗ ಹಾಕಿತ್ತು. ಆ ಹೆಂಗಸಿನ ಹತ್ತಿರದಲ್ಲಿಯೇ ಬೀಗದ ಕೈ ಇದ್ದುದರಿಂದ ಕೂಡಲೇ ಬಾಗಿಲನ್ನು ತೆರೆದಳು. ಇಬ್ಬರೂ ಆ ಕೊಠಡಿಯೊಳಕ್ಕೆ ಹೋದರು. ಕೂಡಲೆ ಅವಳು ಬಾಗಿಲನ್ನು ಮುಚ್ಚಿ ಅಗಳಿ ಹಾಕಿದಳು. ಅಲ್ಲಿ ಮೇಲಕ್ಕೆ ಹತ್ತಿ ಹೋಗುವುದಕ್ಕೋಸ್ಕರ ಒಂದು ಮರದ ಹಂತವು ಇದ್ದಿತು; ಇಬ್ಬರೂ ಆ ಹಂತವನ್ನು ಹತ್ತಿ ಮೇಲಕ್ಕೆ ಹೋದರು. ಅಲ್ಲಿ ಪ್ರಕೃತೀ ದೇವಿಯ ಅಪೂರ್ವವಾದ ಸೌಂದರ್ಯವು ತಾನೇ ತಾನಾಗಿ ಶೋಭಿಸುತ್ತಿದೆ! ಸ್ವಚ್ಛವಾದ ತಿಂಗಳ ಬೆಳಕಿನಿಂದ ತುಂಬಿದ ಬಿಸಿಲು ಮಹಡಿಯು ಬಹಳ ವಿಸ್ತಾರವಾಗಿದೆ. ಅಲ್ಲಿಗೆ ಬಂದ ಮೇಲೆ ದೇವೇಂದ್ರವಿಜಯನು—ನನ್ನನ್ನು ಎಲ್ಲಿಗೆ ಕರೆದುಕೊಂಡು ಹೋಗುವಿರಿ? ಎಂದು ಕೇಳಿದನು.

ರಮಣಿಯು ಮುಗುಳ್ನಗೆಯೊಂದಿಗೆ ದೇವೇಂದ್ರವಿಜಯನ ಮೇಲೆ ತೀವ್ರವಾದೊಂದು ಕಟಾಕ್ಷವನ್ನು ಬೀರಿ,—ನೀವು ಇಷ್ಟು ಭಯ ಪಡುವುದೇಕೆ? ನಾನು ನಿಮ್ಮನ್ನು ತಿಂದುಬಿಡುತ್ತೇನೆಯೆ? ನಾನು ಹೆಂಗಸು, ನೀವು ಗಂಡಸರು—ನಿಮಗೆ ಅಂತಹ ಭಯವೇನೂ ಇಲ್ಲ. ದಯಮಾಡಿ ಬನ್ನಿ, ಎಂದಳು.

ದೇವೇಂದ್ರವಿಜಯನು ತನ್ನ ಪ್ರಶ್ನೆಗೆ ಅನಿರೀಕ್ಷ್ಯವಾದ ಮತ್ತೂ ಅಪೂರ್ವವಾದ ಇಂತಹ ಸದುತ್ತರ (?) ಬಂದುದರಿಂದ ಮರುಮಾತಾಡದೆ ರಮಣಿಯ ಸಂಗಡ ಮುಂದೆ ನಡೆದನು. ಆಗ ಅವನ ಬುದ್ಧಿಶಕ್ತಿಯು ಬಹು ತೀವ್ರತರವಾಗಿ ನಡೆಯತೊಡಗಿತು. ವಸ್ತುತಃ ಯಾವುದನ್ನೂ ಸರಿಯಾಗಿ ಊಹಿಸಿ ತಿಳಿಯಲಾರದವನಾದನು. ಇವೆಲ್ಲವೂ ಭಾವನಾತೀತವಾದ ಮತ್ತೂ ಅನಾಕಾಂಕ್ಷಿತವಾದ ಸ್ವಪ್ನದ ಹಾಗೆ ಬಹು ಮನೋಹರವಾಗಿ ತೋರುತಿದ್ದಿತು. ಹಾಗೆ ತೋರುವುದೂ ಸಹಜವೇ. ನಿರ್ಜನವಾದ ಆ ನದಿಯ ತೀರದಲ್ಲಿ, ಅಸ್ಫುಟವಾದ ಬೆಳದಿಂಗಳಲ್ಲಿ, ನದೀ ಪ್ರವಾಹದ ಮಧುರ ಕಲಕಲನಾದವಾಗುತ್ತಿರುವಾಗ, ಹಠಾತ್ತಾಗಿ ಯಾರಿಗೂ ತಿಳಿಯದ ಹಾಗೆ ಯುವಕನ ಹೃದಯ ಮಧ್ಯ ಪ್ರವೇಶಿಸಿ ಇಷ್ಟರೊಳಗಾಗಿ ಅವನ ಹೃದಯದೊಳಗೆ ಮಹತ್ತಾಗಿ ಬೆಳೆದ ಆ ಮೋಹವೆಂಬುದು ಇಷ್ಟು ಬೇಗನೆ ಅಲ್ಲಿಂದ ಸರಿದುಹೋಗುವಂತಹುದಲ್ಲ.

ರಮಣಿಯು ನಾಲ್ಕು ಹೆಜ್ಜೆ ಮುಂದೆ ನಡೆದು ದೇವೇಂದ್ರವಿಜಯನ ಕಡೆ ತಿರುಗಿ,—ತಾವು ಅಪರಿಚಿತರು, ರೂಪವಂತರು, ಯುವಕರು, ಮೇಲಾಗಿ ಪರಪುರುಷರು ; ನಾನೋ ಹೆಂಗಸು, ನನಗೂ ಸೌಂದರ್ಯವಿದೆ, ಯೌವ್ವನವಿದೆ, ಮೇಲಾಗಿ ಪರಸ್ತ್ರೀ. ಹೀಗಿರುವಾಗ ಇಂತಹ ರಾತ್ರಿಯಲ್ಲಿ ನಾವಿಬ್ಬರೇ ವಿಜನವಾದ ಈ ಬಿಸಲು ಮಹಡಿಯಲ್ಲಿರುವುದನ್ನು ಯಾರಾದರೂ ನೋಡಿದುದೇ ಆದರೆ ಅವರು ಏನೆಂದುಕೊಂಡಾರೋ ಹೇಳುವಿರಾ ? ಎಂದು ಕೇಳಿದಳು.

ಇದೆಂತಹ ಪ್ರಶ್ನೆ ! ಇದಕ್ಕೆ ಏನೆಂದು ಉತ್ತರ ಹೇಳಬೇಕು ಎಂಬುದನ್ನು ದೇವೇಂದ್ರವಿಜಯನು ನಿರ್ಧರಿಸಿಕೊಳ್ಳಲಾರದವನಾಗಿ ತನ್ನೊಳಗೆ ತಾನೇ ಅಸ್ಥಿರನಾದನು. ಯಾವಳನ್ನು ಕುಲೀನಳಾದ ಹೆಂಗಸೆಂದು ತಿಳಿದು ತಾನು ಅವಳಿಗೆ ಸಹಾಯಕನಾಗಿ ಬಂದನೋ ಅವಳು ದುಶ್ಚಾರಿಣಿಯಾದೊಂದು ಪಿಶಾಚಿಯೆಂದೂ—ಪಿಶಾಚಿಗಿಂತಲೂ ಭಯಂಕರಳೆಂದೂ ತಿಳಿದುಕೊಂಡನು. ರಮಣಿಯು ದೇವೇಂದ್ರವಿಜಯನ ಮನೋಭಾವವನ್ನು ಬಹು ಮಟ್ಟಿಗೆ ಊಹಿಸಿ

ತಿಳಿದುಕೊಂಡಳು. ತಿಳಿದುಕೊಂಡವಳೇ ತನ್ನ ಮನೋಗತವನ್ನು ಹೊರಗೆಡಹದೆ ತಾವು, ನನ್ನ ಈ ಬಗೆಯ ನಡವಳಿಗಳಿಂದ, ನನ್ನಲ್ಲಿ ದೋಷಾರೋಪಣೆ ಮಾಡಿದರೂ ಮಾಡಬಹುದು. ಅದೇನೂ ಆಶ್ಚರ್ಯವಲ್ಲ. ಇದು ತಮ್ಮ ದೋಷವೂ ಅಲ್ಲ; ಹೆಂಗಸರ ಮನಸ್ಸು ಬಹು ದುರ್ಬಲವಾದದ್ದು. ಸಾಮಾನ್ಯವಾದ ಪೆಟ್ಟಿನಿಂದಲೇ ಒಡೆದು ಬಟ್ಟ ಬಯಲಾಗುವುದು;—ತನ್ನ ಕರ್ತವ್ಯದಲ್ಲಿ ಸರಿಯಾಗಿರಲು ಸಾಧ್ಯವಿಲ್ಲದ್ದು. ಏನಾದರೂ ಆಗಲಿ, ನೀವು ನನ್ನನ್ನು ಬಹು ನಿರ್ಲಜ್ಜಳೆಂದು ಭಾವಿಸಿದ್ದೀರೆಂಬುದರಲ್ಲಿ ಸಂದೇಹವಿಲ್ಲ. ನಾನೇನು ಮಾಡಲಿ, ನನ್ನ ಈ ಬಗೆಯ ವಾಚಾಲತೆಯ ದೆಸೆಯಿಂದ ನಾನು ಹುಟ್ಟಿದಂದಿನಿಂದಲೂ ಕೆಟ್ಟ ನಿಂದೆಗೆ ಗುರಿಯಾಗಿದ್ದೇನೆ. ಬಾಲ್ಯದಾರಭ್ಯ ಈವರೆಗೆ ಎಷ್ಟೇ ಪ್ರಯತ್ನಪಟ್ಟರೂ ನನ್ನ ಈ ಕೆಟ್ಟ ಸ್ವಭಾವವನ್ನು ದೂರಮಾಡಲಾಗಲಿಲ್ಲ. ಇಷ್ಟರಿಂದಲೇ ತಾವು ನನ್ನನ್ನು ದೋಷಿಯೆಂದು ತಿಳಿಯಬೇಡಿರಿ ಎಂದಳು.

ಆಗ, ಸರಳಸ್ವಭಾವದವನಾದ ದೇವೇಂದ್ರವಿಜಯನ ಮನಸ್ಸಿನ ಮೇಲಿನಿಂದ ಹಠಾತ್ತಾಗಿ ಒಂದು ಮೇಘವು ಸರಿದುಹೋಯಿತು.

---

## ಹದಿನೆಂಟನೆಯ ಪರಿಚ್ಛೇದ

### ಸುಂದರಿಯ ಆತ್ಮಪ್ರಕಾಶ

ಈ ಮೇಲ್ಮಹಡಿಯ ದಕ್ಷಿಣ ಪಾರ್ಶ್ವದ ಮೂಲೆಯಲ್ಲಿ ಒಂದು ಸಣ್ಣ ಕೊಠಡಿ ಇದೆ. ರಮಣಿಯು ಯುವಕನನ್ನು ಕರೆದುಕೊಂಡು ಆ ಕೊಠಡಿಯೊಳಕ್ಕೆ ಹೋದಳು. ಕೊಠಡಿಯ ನಾಲ್ಕು ಕಡೆಯೂ ಚೆನ್ನಾಗಿ ಮುಚ್ಚಿತ್ತು. ಒಂದು ಪಕ್ಕದಲ್ಲಿ ಸುಸಜ್ಜಿತವಾದೊಂದು ಸಣ್ಣ ಹಾಸುಗೆ; ಇನ್ನೊಂದು ಕಡೆ ಒಂದು 'ಅಲಮೇರಾ'; ರಮಣಿಯು ಯುವಕನನ್ನು ಕುಳಿತುಕೊಳ್ಳಬೇಕೆಂದು ಹೇಳಿ ಆ 'ಅಲಮೇರಾ'ದಿಂದ ಸೇಬು, ಅಂಜೂರ, ಕಿತ್ತಳೆ, ದ್ರಾಕ್ಷಿ ಮೊದಲಾದ ಉತ್ತಮ ತರದ ಫಲ

ವಸ್ತುಗಳಿಂದಲೂ, ಖಾದ್ಯಪದಾರ್ಥಗಳಿಂದಲೂ ತುಂಬಿರುವ ಬೆಳ್ಳಿಯ ಪಾತ್ರೆಯೊಂದನ್ನು ತೆಗೆದು ತಂದು ದೇವೇಂದ್ರವಿಜಯನ ಮುಂದೆ ಇರಿಸಿದಳು. ಅದರೊಳಗಿರುವ ಆಹಾರ್ಯಸಾಮಗ್ರಿಗಳಿಂದ ಹೊರ ಹೊಮ್ಮುತ್ತಿರುವ ಹಿತಕರವಾದ ವಾಸನೆಯ ದೆಸೆಯಿಂದ, ಜಠರಾಂತದ ಏಕಾಂತಪ್ರದೇಶದಲ್ಲಿ ತೃಪ್ತಿಗೊಂಡು ನಿದ್ರಿಸುತ್ತಿರುವ ಕ್ಷುಧೆಯು ಕೂಡ ಕನಸು ಕಂಡು ಎದ್ದವರ ಹಾಗೆ, ಒಂದೊಂದು ಸಲ ಭಯದಿಂದೆದ್ದು ತಲೆಯಾಡಿಸುತ್ತಾ ತನ್ನ ಅಸ್ತಿತ್ವದ ವಿಚಾರವನ್ನು ಕುರಿತು 'ರುಜುವಾತು' ಕೊಡುವಂತಿದ್ದಿತು.

ದೇವೇಂದ್ರವಿಜಯನು ಆ ಪದಾರ್ಥಗಳಲ್ಲಿ ಯಾವುದನ್ನೂ ಮುಟ್ಟಲಿಲ್ಲ; ಸಾಧ್ಯವಾದ ಮಟ್ಟಿಗೆ, ವಿನೀತಭಾವದಿಂದ, ಏನೂ ಬೇಕಿಲ್ಲವೆಂದು ಹೇಳಿದನು. ದೇವೇಂದ್ರವಿಜಯನು ನತದೃಷ್ಟನೋ ಅಥವಾ ಅದೃಷ್ಟಶಾಲಿಯೋ ನಮಗೆ ತಿಳಿಯದು; ಆದರೆ ಆ ಸುಂದರಿಯು ಅವನು ಬೇಕಿಲ್ಲವೆಂದುದೇ ಸಾಕೆಂದು ಸುಮ್ಮನಾಗಲಿಲ್ಲ. ಆ ಕೂಡಲೇ ದ್ರಾಕ್ಷಿಯ ಗೊಂಚಲಿನಿಂದ ಸುಪಕ್ವವಾದೊಂದು ದ್ರಾಕ್ಷಿಯ ಹಣ್ಣನ್ನು ತೆಗೆದುಕೊಂಡು ದೇವೇಂದ್ರವಿಜಯನ ಬಾಯಿಗೆ ಹಾಕಿ ಗಟ್ಟಿಯಾಗಿ ಅದುಮಿ ಹಿಡಿದುಕೊಂಡಳು. ದೇವೇಂದ್ರವಿಜಯನು ಅವಳ ಕೈಯಿಂದ ತನ್ನ ಮುಖವನ್ನು ಬಿಡಿಸಿಕೊಂಡನು; ಎಷ್ಟು ಬಗೆಯಾಗಿ ಹೇಳಿದರೂ ಹಣ್ಣನ್ನು ತಿನ್ನಲು ಸಮ್ಮತಿಸಲಿಲ್ಲ. ಆಗ, ಆ ಹೆಂಗಸು ದೀಪವನ್ನು ಆರಿಸಿಬಿಟ್ಟಳು, ಹಾಗೆಯೇ ಎರಡು ತೋಳುಗಳಿಂದಲೂ ದೇವೇಂದ್ರವಿಜಯನ ಕುತ್ತಿಗೆಯನ್ನು ಸುತ್ತಿ ಹಿಡಿದುಕೊಂಡು ಮೇಲಿಂದ ಮೇಲೆ ಅವನ ಮುಖಚುಂಬನ ಮಾಡತೊಡಗಿದಳು. ರಮಣಿಯು ಮಾಡಿದ, ಈ ಬಗೆಯ ಅಸಂಭವವಾದ, ಅನ್ಯಾಯವಾದ ದುರ್ವ್ಯವಹಾರದಿಂದ ದೇವೇಂದ್ರವಿಜಯನ ಹೃದಯದಿಂದ ಮೆದುಳಿನವರೆಗೂ ಒಂದು ಬಗೆಯ ವಿದ್ಯುತ್ಪ್ರವಾಹವು ಹರಿದಾಡತೊಡಗಿತು. ರಮಣಿಯು ತೆರಪುಗೊಡದೆ ಮಾಡಿದ ಚುಂಬನವರ್ಷಣದಲ್ಲಿ ದೇವೇಂದ್ರವಿಜಯನಿಗೆ ವಿಸ್ಮಯಪ್ರಕಾಶ ಮಾಡುವುದಕ್ಕೆ ಕೂಡ ಅರಗಳಿಗೆಯ

ಅವಕಾಶವೂ ದೊರಿಯಲಿಲ್ಲ. ತನಗೆ ಉಂಟಾದ ವಿಸ್ಮಯದ ದೆಸೆಯಿಂದ ದೇವೇಂದ್ರವಿಜಯನು ಸಂಜ್ಞಾಹೀನನಾದನು ; ಕಾರಣವೇನೆಂದರೆ, ಅಪರಿಚಿತಳಾದ ಹೆಂಗಸು ಹೀಗೆ ಧರ್ಮವಿರುದ್ಧವಾದ ನಡವಳಿ ನಡೆಯಿಸುವಳೆಂದು ಊಹಿಸುವುದಕ್ಕೂ ಸಾಧ್ಯವಿಲ್ಲವೆಂಬುದೇ. ಆದರೆ ಅವನ ಆ ನಿಸ್ಸಂಜ್ಞಭಾವವು ಬಹಳ ಹೊತ್ತಿನವರೆಗೆ ಇರಲಿಲ್ಲ ; ಹಠಾತ್ತಾಗಿ ಬಿಸಿಲು ಬಂದಹಾಗೆ, ನಿದ್ರಾಭಂಗವಾದ ಕೂಡಲೇ ಎಚ್ಚರವಾಗುವ ಹಾಗೆ, ಅಂಧಕಾರಾವೃತವಾಗಿ ಅಚೇತನವಾಗಿದ್ದ ಅವನ ಹೃದಯದಲ್ಲಿ ಸಂಜ್ಞೆ ಎಂಬ ಜಾಗೃತಭಾವವು ಮೂಡಿತು. ಅವನು ರಮಣಿಯನ್ನು ಬಲಪ್ರಯೋಗದಿಂದ ದೂರಕ್ಕೆ ದೂಡಿ, ಎದ್ದು ನಿಂತನು. ಅಷ್ಟಾದರೂ ಆ ಹೆಂಗಸು ಅವನ ಕೈಗಳೆರಡನ್ನೂ ಭದ್ರವಾಗಿ ಹಿಡಿದುಕೊಂಡು ನನ್ನನ್ನು ಕ್ಷಮಿಸಿ–ಕ್ಷಮಿಸಿದೆನೆಂದು ಹೇಳಿ ; ಇಲ್ಲವಾದರೆ ನಾನು ಬೇರೆ ನಿಮ್ಮನ್ನು ಬಿಡುವುದಿಲ್ಲ. ಈ ಹೃದಯವು ಹೇಗೆ ದುರ್ಬಲವಾದುದೋ ಹಾಗೆಯೇ ಇದು ನಿಗ್ರಹಿಸಲು ಅಸಾಧ್ಯವಾದುದೂ ಆಗಿರುತ್ತದೆ. ಏನು ಮಾಡಿದರೂ ನಿರ್ಬಂಧಕ್ಕೆ ದಕ್ಕತಕ್ಕುದಲ್ಲ, ಎಂದು ಮೃದುಸ್ವರದಿಂದ ಹೇಳಿದಳು.

ದೇವೇಂದ್ರವಿಜಯನು ತಾನು ಪಿಶಾಚಿಯ ಕೈಗೆ ಸಿಕ್ಕಿಬಿದ್ದೆನೆಂದೂ, ಸುಲಭವಾಗಿ ಬಿಡುಗಡೆ ಹೊಂದುವ ಹಾಗಿಲ್ಲವೆಂದೂ ತಿಳಿದನು. ಆ ಸಮಯದಲ್ಲಿ ದೇವೇಂದ್ರವಿಜಯನಂತಹ ಗುಣಶಾಲಿಯಾದ ಯುವಕನು ಎಂತೆಂತಹ ಮಾತುಗಳಾಡಬಹುದೋ ಅಂತಹ ಮಾತುಗಳೇ ಅವನ ಬಾಯಿಂದ ಹೊರಟುವು. ನೀವು ದೊಡ್ಡ ಮನುಷ್ಯರ ಮನೆಯ ಹೆಂಗಸರು. ಹೀಗೆಲ್ಲಾ ಮಾಡುವುದೇ ? ನಾನು ಪರಪುರುಷ, ಆತ್ಮೀಯನೂ ಅಲ್ಲ, ಅಪರಿಚಿತ, ನನ್ನನ್ನು ಮುಟ್ಟಬಾರದು ; ನನ್ನನ್ನು ಮುಟ್ಟುವುದರಿಂದ ನಿಮ್ಮ ಸ್ತ್ರೀ ಧರ್ಮಕ್ಕೆ ಹಾನಿಯಾಗುವುದು— ಎಂದನು.

ರಮಣಿಯು ದೇವೇಂದ್ರವಿಜಯನ ಮಾತುಗಳನ್ನು ಮನಮುಟ್ಟಿ ಕೇಳಿದಳು ; ಹಾಗೆಯೇ ದೀಪವನ್ನು ಹೊತ್ತಿಸಿದಳು ; ಇಷ್ಟಾದರೂ

ಅವಳ ಭಾವ ಭಂಗಿಗಳಲ್ಲಿ ಯಾವ ಬಗೆಯ ಮಾರ್ಪೂ ಕಾಣಬರಲಿಲ್ಲ ; ಅವಳು ಲಜ್ಜಿತಳೂ ಅಲ್ಲ, ಸಂಕೋಚಪಟ್ಟವಳೂ ಅಲ್ಲ, ಅಪ್ರತಿಭಳೂ ಅಲ್ಲ, ವಿಸ್ಮಿತಳೂ ಅಲ್ಲ—ಏನೂ ಅಲ್ಲ ; ಅವಳು ಅರೆಗಳಿಗೆಯ ಮೇಲೆ–ದೇವೇಂದ್ರಬಾಬೂ, ನೀವೇನೋ ಒಂದೇ ತಡವೆಗೆ ಎಷ್ಟೋ ಮಾತುಗಳಾಡಿಬಿಟ್ಟಿರಿ ; ಅವೆಲ್ಲಕ್ಕೂ ನಾನು ಉತ್ತರ ಹೇಳಬೇಕೆಂದಿದ್ದೇನೆ. ದೇವೇಂದ್ರಬಾಬೂ, ತಾವು ಹೇಳಿದುದೇನು—ನನ್ನನ್ನು ಗೌರವಸ್ಥರ ಮನೆಯ ಹೆಂಗಸೆಂದಲ್ಲವೆ? ನಾನು ಹೇಗೆ ತಾನೇ ಗೌರವಸ್ಥರ ಮನೆಯ ಹೆಂಗಸಾದೇನು? ಯಾವನು ತನ್ನ ಕಡೆಗಾಲದಲ್ಲಿ ತಾನೇ ಸಾಯುವುದಕ್ಕೆ ಸಿದ್ಧವಾಗಿರುವ ಸ್ಥಿತಿಯಲ್ಲಿದ್ದುಕೊಂಡು, ನನ್ನಂತಹಳೊಬ್ಬ ಸುಂದರ ಯುವತಿಯನ್ನು ಮದುವೆಯಾಗಿ, ಅವಳ ಆ ನಾರೀಜೀವನದ ಸಕಲ ಸೌಖ್ಯಗಳನ್ನೂ ನಷ್ಟಗೊಳಿಸಲೆಳಸುವನೋ ಅವನೆಂತಹ ದೊಡ್ಡ ಮನುಷ್ಯ? ಮತ್ತೆಂತಹ ಗೌರವಸ್ಥ? ನನ್ನ ಈ ವಯಸ್ಸು, ಈ ರೂಪು, ಈ ಯೌವನ—ಇವೆಲ್ಲವೂ ಕಾಡಿಗೆ ಕಾಲು ನೀಡಿರುವ ಮುದುಕನಿಗೆ ತಕ್ಕುವೇನು? ಅದು ಹಾಗಿರಲಿ, ತಾವು ಅಪರಿಚಿತರೆಂದಲ್ಲವೆ? ಯಾವಾತನು ಒಮ್ಮೆ ನೋಡಿದ ಮಾತ್ರದಿಂದ ಹೃದಯ ಮಧ್ಯೆ ಪ್ರವೇಶ ಮಾಡಿ, ಅಲ್ಲಿ ಸ್ಥಿರವಾದೊಂದು ಆಸನದಲ್ಲಿ ಮಂಡಿಸಿದನೋ ಅಂತಹನೂ ಅಪರಿಚಿತನೆ? ಈ ಒಂದು ಮುಹೂರ್ತದೊಳಗಾದ ಇಂದಿನ ಈ ಪರಿಚಯವು—ಸಾಮಾನ್ಯವಾಗಿ ಒಂದು ಸಾವಿರ ವರ್ಷಗಳಲ್ಲಿಯೂ ಆಗಲಾರದಲ್ಲ! ಮೂರನೆಯದಾಗಿ, ನಾನು ಪರಮೇಶ್ವರನಲ್ಲಿ ಹೇಗೆ ತಾನೇ ಅಪರಾಧಿನಿಯಾದೇನು? ಪರಿಶೀಲಿಸಿದರೆ ಈಶ್ವರನೇ ನನಗೆ ಅಪರಾಧಿಯಾಗಿರುವನು. ನನಗೆ ಜಗನ್ಮೋಹನಾಕಾರವಾದ ರೂಪವನ್ನು ಕೊಟ್ಟು, ಉದ್ದಾಮವಾದ ಯೌವನವನ್ನು ಕೊಟ್ಟು, ಅದರಲ್ಲಿಯೂ ಬಹು ತೃಷ್ಣಾತುರವಾದ ಹೃದಯವನ್ನು ಕೊಟ್ಟು, ಕಡೆಗೆ ನನ್ನನ್ನು ಒಬ್ಬ ವೃದ್ಧನ ಕೈಯ್ಯಲ್ಲಿಟ್ಟು, ತಾನು ಮಾತ್ರ ನಿಶ್ಚಿಂತನಾಗಿರಲೆಳಸಿರುವ ಆ ಪರಮೇಶ್ವರನು ನನ್ನ ವಿಚಾರದಲ್ಲಿ ಅಪರಾಧಿಯಲ್ಲವೇನು? ಈ ಪ್ರಪಂಚದಲ್ಲಿ ಜ್ಞಾನವಂತನಾದ ವೃದ್ಧನೊಬ್ಬನು ಧರ್ಮವನ್ನು ಬಿಟ್ಟಿರಬಹುದು! ದೇವರು ಧರ್ಮವನ್ನು ತೊರೆದಿರ

ಬಹುದು! ಹೀಗಿರುವಾಗ, ನಾನು ಸಾಮಾನ್ಯೆಯಾದ ಹೆಂಗಸು—ಅಲ್ಪದರಲ್ಲಿ ಅಲ್ಪವಾದವಳು, ಹುಲ್ಲಿಗೂ ಹಗುರವಾದವಳು—ಇಂತಹ ನನಗೆ ಈ ಧರ್ಮಾಧರ್ಮಗಳಗೊಡವೆ ಯಾಕೆ?

ಹೀಗೆ ದುರಭಿಸಂಧಿ ಪೂರ್ಣವಾದ, ರಮಣಿಯ ಈ ದೀರ್ಘವಾದ ಭಾಷಣವನ್ನು ದೇವೇಂದ್ರವಿಜಯನು ಕೇಳಿ, ತಾನು ಹೆರರ ಕಷ್ಟದಲ್ಲಿ ನೆರವಾಗುವುದಕ್ಕೆಂದು ಬಂದುದಕ್ಕೆ ಅಪಾರವಾದ ಮತ್ತೂ ಬಹು ಅನ್ಯಾಯವಾದ ಭಯಂಕರ ವಿಪತ್ತು ತನಗೇ ಸಂಭವಿಸಿರುವುದೆಂದು ಭಾವಿಸಿದನು. ಹಾಗೆಯೇ ರಮಣಿಯನ್ನು ಕುರಿತು ನೀವು ಎಂತಹ ರಾದರೂ ಆಗಿರಿ, ಎಂತಹ ಸ್ವಭಾವದವರಾದರೂ ಆಗಿರಿ, ನನ್ನಲ್ಲಿ ಈ ಎಲ್ಲ ಪ್ರಸ್ತಾವ ಮಾಡದಿರುವುದೇ ಮೇಲು. ನನಗೆ ದಾರಿ ತೋರಿಸಿಕೊಡಿ. ಹೀಗೆಲ್ಲಾ ಆಗುವುದೆಂದು ತಿಳಿದಿದ್ದ ಪಕ್ಷದಲ್ಲಿ ನಾನು ಎಂದಿಗೂ ನಿಮ್ಮ ಸಂಗಡ ಬರುತ್ತಿರಲಿಲ್ಲ—ಎಂದು ಹೇಳಿದನು.

ಬಾರದಿದ್ದಿದ್ದರೆಯೇ ಚೆನ್ನಾಗಿರುತ್ತಿದ್ದಿತು. ನೀವು ಇಷ್ಟು ಸ್ವಲ್ಪ ಕಾಲದೊಳಗಾಗಿ ನನ್ನ ಹೃದಯದಲ್ಲಿ ಹೀಗೆ ಸರ್ವನಾಶಕರವಾದ ಪರಿವರ್ತನೆಯನ್ನುಂಟುಮಾಡುವಿರೆಂದು ಯಾರು ತಿಳಿದಿದ್ದರು? ದೇವೇಂದ್ರ ಬಾಬೂ, ಸತ್ಯವಾಗಿ ಹೇಳುತ್ತೇನೆ. ನಾನು ಸಾಯುವುದರಲ್ಲಿದ್ದೇನೆ, ನನ್ನನ್ನು ಕಾಪಾಡಿರಿ. ನಾನು ನಿಮ್ಮ ಪಾದದೆಡೆಯಲ್ಲಿ ಆಶ್ರಯ ಬೇಡುವವಳು; ನನ್ನನ್ನು ಹೀಗೆ ಕಠಿಣ ಭಾವದಿಂದ ದೂಡಿಬಿಡಬೇಡಿ. ಹಾಗಾದ ಪಕ್ಷದಲ್ಲಿ ನಾನು ಬದುಕಲಾರೆ; ನನಗುಂಟಾಗಿದ್ದ ವಿಪತ್ತಿನಿಂದ ನನ್ನನ್ನು ಕಾಪಾಡುವುದಕ್ಕಾಗಿ ಬಂದ ನೀವೇ ನನ್ನನ್ನು ಈಗ ಗಂಡಾಂತರಗಳಿಗೆ ಗುರಿಮಾಡುತ್ತಿರುವಿರಲ್ಲ? ನೀವು ಇಷ್ಟು ದಯಾಹೀನರೆಂದು ನಾನು ನಂಬಿರಲಿಲ್ಲ.

## ಹತ್ತೊಂಭತ್ತನೆಯ ಪರಿಚ್ಛೇದ

### ತಿರಸ್ಕೃತಳು

ದೇವೇಂದ್ರವಿಜಯನ ಹೃತ್ಪಿಂಡದಲ್ಲಿ ಬಿಸಿ ರಕ್ತವು ಬಹು ವೇಗವಾಗಿ ಓಡತೊಡಗಿತು. ಅವನು ತಿರಸ್ಕಾರ ಸೂಚಕವಾದ ನೋಟದಿಂದ ಒಂದು ಸಲ ಆ ಹೆಂಗಸಿನ ಮುಖವನ್ನು ನೋಡಿದನು. ಆಮೇಲೆ ಆ ಕೊಠಡಿಯಿಂದ ಹೊರಗೆ ಹೋಗಬೇಕೆಂದು ಬಾಗಿಲ ಕಡೆಗೆ ಮುಂದರಿದನು. ದೇವೇಂದ್ರವಿಜಯನು ಕೊಠಡಿಯಿಂದ ಹೊರಗೆ ಹೊರಡುವ ಮೊದಲೇ ರಮಣಿಯು ಬಾಗಿಲನ್ನು ಮುಚ್ಚಿ ಅದನ್ನು ಒರಗಿಕೊಂಡು ನಿಂತಿದ್ದಳು. ನಾಲದುದಕ್ಕೆ ಕಟಾಕ್ಷದ ಮೇಲೆ ಕಟಾಕ್ಷವನ್ನು ಬೀರುತ್ತಾ,—ನಿಮ್ಮಂತಹ ಅರಸಿಕರಾದವರಿಗೆ ಮರುಳಾಗಿ ಹೀಗೆ ಹಂಬಲಪಡುವ ನನ್ನ ಜನ್ಮವನ್ನು ಸುಡಬೇಕು—ಎಂದು ಮಂದಹಾಸದೊಡನೆ ಹೇಳಿದಳು.

ದೇವೇಂದ್ರವಿಜಯನು—ದಾರಿ ಬಿಡಿರಿ, ದಯಮಾಡಿ ನನ್ನನ್ನು ಈ ವಿಪತ್ತಿನಿಂದ ಕಾಪಾಡಿ ಎಂದು ಕರ್ಕಶ ಸ್ವರದಲ್ಲಿ ಹೇಳಿದನು.

ರಮಣಿಯು—ಅದಾಗದು, ಹೋಗುವುದಾದರೆ, ನನ್ನನ್ನು ಕೊಂದು ಬಿಡಿ ಎಂದು ಹೇಳುತ್ತಾ, ತನ್ನ ನಡುವಿನಲ್ಲಿದ್ದ ದೊಡ್ಡ ಚೂರಿಯೊಂದನ್ನು ದೇವೇಂದ್ರವಿಜಯನ ಮುಂದೆ ಎಸೆದು—ಈ ಚೂರಿಯನ್ನು ತೆಗೆದುಕೊಳ್ಳಿರಿ. ನನ್ನನ್ನು ತುಂಡು ತುಂಡಾಗಿ ಕತ್ತರಿಸಿಬಿಡಿ. ಇಲ್ಲಿಗೆ ಯಾರೂ ಬರುವಹಾಗಿಲ್ಲ, ಯಾರಿಗೂ ಏನೂ ತಿಳಿವಹಾಗಿಲ್ಲ; ಏತರ ಭಯವೂ ಇಲ್ಲ. ನನ್ನನ್ನು ಕಡಿದುಹಾಕಿದನಂತರ ನಿಮ್ಮ ಇಷ್ಟವಿದ್ದಲ್ಲಿಗೆ ಹೊರಟುಹೋಗಬಹುದು. ಆಗ ನಾನು ಅಡ್ಡಿ ಮಾಡುವುದಿಲ್ಲ. ದೇವೇಂದ್ರಬಾಬು, ತಾವು ಎಂಥವರೋ ತಿಳಿಯದು; ಆದರೆ, ಹೀಗೆ ಮೋಹಪರವಶಳಾಗಿ ಬಂದ ಹೆಂಗಸನ್ನು ತಿರಸ್ಕರಿಸಿ ಕಳುಹುವುದು ಪುರುಷರಿಗೆ ಸುಲಭಸಾಧ್ಯವಲ್ಲ, ಎಂದು ದೃಢಸ್ವರದಿಂದ ಹೇಳಿ, ಆ ಮೋಹಿನೀ ಮೂರ್ತಿಯು ಪುನಃ ದೇವೇಂದ್ರವಿಜಯನ ಕೈಹಿಡಿದುಕೊಂಡು ಸಾಧ್ಯವಾದಮಟ್ಟಿಗೆ ಅವನ ಸಮೀಪದಲ್ಲಿ ನಿಂತುಕೊಂಡಳು.

ಇತ್ತ ಕಡೆ ಕಾತರಳಾದ ಸುಂದರಿಯ ಉದ್ದಾಮವಾದ ಹಟವೂ, ಅನುಚಿತವಾದ ಪ್ರಾರ್ಥನೆಯೂ ಹೇಗೆ ಹದ್ದುಮೀರುತ್ತಿದ್ದುವೋ ಹಾಗೆಯೇ ಅತ್ತ ಕಡೆ ದೇವೇಂದ್ರವಿಜಯನಲ್ಲಿ ಆ ಹೆಂಗಸಿನ ವಿಚಾರವಾಗಿ ಅತ್ಯಧಿಕವಾದ ದ್ವೇಷವೂ ಅದಕ್ಕೂ ಮೀರಿದ ಕೋಪವೂ ಹದ್ದುಮೀರಿ ಬಂದು ಕ್ರೋಧರೂಪವಾಗಿ ಪರಿಣಮಿಸಿದುವು. ದೇವೇಂದ್ರವಿಜಯನು ಕ್ರೋಧಭರದಿಂದ ಅವಳನ್ನು ದೂರಕ್ಕೆ ನೂಕಿ—ನೀನು ಪಿಶಾಚಿ, ದೂರ ಹೋಗು, ನನ್ನನ್ನು ಮುಟ್ಟಬೇಡ! ಎಂದು ಕರ್ಕಶ ಕಂಠದಿಂದ ಗದ್ದಿಸಿದನು.

ರಮಣಿಯು ಪುನಃ ಓಡಿಬಂದು ದೇವೇಂದ್ರವಿಜಯನ ಕೈಹಿಡಿದು ಕೊಂಡಳು. ಕೊಂಚವಾದರೂ ಭಯಗೊಳ್ಳದೆ—ಓಹೋ ದೇವೇಂದ್ರಾ! ನೀನು ಇಷ್ಟು ಕಠಿಣ ಸ್ವಭಾವದವನೆ! ಗಂಡಸರು ಇಷ್ಟು ಕಠಿಣಾತ್ಮ ರೆಂಬುದು ನನಗೆ ತಿಳಿದಿರಲಿಲ್ಲ—ಎಂದಳು.

ದೇವೇಂದ್ರವಿಜಯನು ಈ ಬಾರಿ ಅವಳನ್ನು ಮೊದಲಿಗಿಂತಲೂ ಬಲವಾಗಿ ನೂಕಿ,—ನಾನು ನಿನ್ನನ್ನು ಸಂಪೂರ್ಣವಾಗಿ ದ್ವೇಷಿಸುತ್ತೇನೆ—ಎಂದನು.

ಆದರೂ ಅವಳು ಪುನಃ ಓಡಿಬಂದು; ಅದೇ ಆತುರ ಭಾವದಿಂದ ದೇವೇಂದ್ರವಿಜಯನ ಕೈಹಿಡಿದುಕೊಂಡು, ಅವನ ಮೇಲೆ ಮಿಂಚಿನಂತೆ ಬಹು ತೀವ್ರವಾದ ಕಟಾಕ್ಷವನ್ನು ಬೀರಿ,—ಹಾಗಾದರೂ ನಾನು ಮೊದಲಿನ ಹಾಗೆಯೇ ನಿನ್ನಲ್ಲಿ ಅನುರಕ್ತಳಾಗಿದ್ದೇನೆ—ಎಂದು ನಮ್ರ ಸ್ವರದಿಂದ ಹೇಳಿದಳು.

ರಮಣಿಯ ಸೆರಗು ಸರಿದುಹೋಗಿದೆ; ಯೌವ್ವನ ಭಾರದಿಂದ ತೂಗಾಡುವ ಅವಳ ಪರಿಪುಷ್ಟವಾದ ಶರೀರವು ದೀಪದ ಬೆಳಕಿನಲ್ಲಿ ಸೌಂದರ್ಯರಾಶಿಯಂತೆ ರಮಣೀಯವಾಗಿ ಕಾಣಿಸುತ್ತಿದೆ. ಬಿಚ್ಚಿ ಹೋದ ಅವಳ ಕೇಶರಾಶಿಯು ಕೆದರಿ ಅವಳ ಕಣ್ಣು, ಮುಖ, ಎದೆ, ಬೆನ್ನು ಮುಂತಾದ ಕಡೆಗಳಲ್ಲಿ ಕೆಲವು ಭಾಗಗಳನ್ನು ಮುಚ್ಚಿಕೊಂಡೂ, ಕೆಲವು ಭಾಗಗಳನ್ನು ಅಲ್ಪ ಸ್ವಲ್ಪವಾಗಿ ತೆರದೂ ಇದೆ. ಇದು ಕ್ಷೀಣ

ವಾದ ದೀಪದ ಬೆಳಕಿನಿಂದ ಕೂಡಿದ ಆ ಸಣ್ಣ ಕೊಠಡಿಯಲ್ಲಿ ಇನ್ನೊಂದು ಬಗೆಯ ಅಪರೂಪ ಕಾಂತಿಯನ್ನು ಹರಡಿತು. ತಾಳಲಾರದಂತಹ ಉತ್ಕಂಠಿತೆಯಿಂದ ಅವಳ ಹಣೆಯಲ್ಲಿ ಬೆವರು ಹನಿಗಳು ಕಾಣಿಸಿಕೊಂಡು ವಲ್ಲದೆ ಅವಳು ಏದುತ್ತಿದ್ದುದರಿಂದ ಅವಳ ಅನಾವೃತವಾದ ವಕ್ಷಸ್ಥಳವು ಬೇಗ ಬೇಗ ಉಬ್ಬಿ ಇಳಿಯುತ್ತಿದೆ. ತಿರಸ್ಕೃತಳಾದ ಆ ರಮಣಿಯು ತಿರಸ್ಕೃತಳಾಗದೆಯೂ ಅಪ್ರತಿಭಳಾಗದೆಯೂ ಇರುವಷ್ಟೇ ಹಾಗೆ ದೇವೇಂದ್ರವಿಜಯನ ಮುಖದ ಮೇಲೆ ಪ್ರಕಾಶವಾನವಾದ ಕೃಷ್ಣ ತಾರೆ ಗಳಿರುವ ವಿಸ್ತಾರವಾದ ಕಣ್ಣುಗಳ ಚಂಚಲ ದೃಷ್ಟಿಯನ್ನು ಸ್ಥಿರವಾಗಿ ನಿಲ್ಲಿಸಿ, ನಗೆಮೊಗದಿಂದ—ದೇವೇಂದ್ರವಿಜಯ, ನೀನು ನನ್ನನ್ನು ಎಷ್ಟಾದರೂ ದ್ವೇಷಿಸಲೊಲ್ಲೆಯೇಕೆ, ನಾನು ಮಾತ್ರ ನಿನ್ನನ್ನು ಮನಃ ಪೂರ್ವಕವಾಗಿ ವಿಶ್ವಾಸಿಸುತ್ತೇನೆ; ಆದರೆ ನನ್ನ ಈ ಸ್ವಾರ್ಥಶೂನ್ಯವಾದ ವಿಶ್ವಾಸವು ನಿನ್ನ ಈ ಬಗೆಯ ಕಠೋರಭಾವದ ಪುರಸ್ಕಾರಗೊಳ್ಳುವು ದೆಂದೂ, ಈ ರೀತಿಯಾಗಿ ಉಪೇಕ್ಷಿಸಲ್ಪಡುವುದೆಂದೂ ನಾನು ನಂಬಿರ ಲಿಲ್ಲ—ಎಂದು ಹೇಳಿದಳು.

ದೇವೇಂದ್ರವಿಜಯನು ಕೋಪದಿಂದ ಕಂಗೆಟ್ಟವನಾಗಿ—ಎಲೆ ದುಶ್ಚಾರಿಣೀ, ನಿನ್ನನ್ನು ನೋಂಕುವುದೂ ಸಹ ಪಾಪಕರವಾದದ್ದು— ಎಂದು ಹೇಳಿ ಅವನು ಅವಳನ್ನು ತನ್ನೆರಡು ಕೈಗಳಿಂದಲೂ ಬಲವಾಗಿ ತಳ್ಳಿದನು; ಅದು ಒಂದು ಬಗೆಯಾಗಿ ಪೆಟ್ಟುಹಾಕಿದ ಹಾಗೆಯೇ ಆಯಿತು; ಅದನ್ನು ಆ ರಮಣಿಯು ಸೈರಿಸಿಕೊಳ್ಳಲಾರದವಳಾದಳು; ಕೊಠಡಿಯಲ್ಲಿ ಒಂದು ಮೂಲೆಗೆ ಹೋಗಿ ಬಿದ್ದಳು. ಬೀಳುವಾಗ ಗೋಡೆಗೆ ತಲೆ ತಗಲಿ ತುಂಬ ಪೆಟ್ಟಾಯಿತು. ಆಗ ಅವಳು ಬಾಲವನ್ನು ತುಳಿದ ಸರ್ಪದಹಾಗೆ ಬುಸಗುಟ್ಟತೊಡಗಿದಳು. ಅವಳ ವಿಸ್ತಾರವಾದ ಕಣ್ಣುಗಳು ರೋಷದಿಂದ ಕೆಂಪಾಗಿ, ಕೆಂಡದಹಾಗೆ ಕ್ರೂರವಾಗಿ ಉರಿಯ ತೊಡಗಿದುವು; ಆಗ ಅವುಗಳಿಂದ ಜ್ವಾಲೆಯು ಹೊರಹೊಮ್ಮುತ್ತಿರು ವಂತೆ ಭಾಸವಾಯಿತು. ಆ ಭಯಂಕರ ಮೂರ್ತಿಯನ್ನು ಕಂಡು ದೇವೇಂದ್ರವಿಜಯನು ಸ್ತಂಭಿತನಾದನು. ಅವನ ಬಾಯಲ್ಲಿ ಮಾತು

ಗಳೇ ಹೊರಡದಂತಾಯಿತು. ರಮಣಿಯು ಕಠೋರ ಸ್ವರದಿಂದ—ಎಲೋ ಪಾಪಿ, ನಿನ್ನ ಮೃತ್ಯುವನ್ನು ನೀನಾಗಿ ಬರಮಾಡಿಕೊಂಡೆ. ಈ ಅಪಮಾನದ ಪ್ರತೀಕಾರವು ಹೀಗೆಯೇ ಆಗುವುದು—ಎಂದು ಹೇಳುತ್ತಾ, ಕೆಳಗೆ ಬಿದ್ದಿದ್ದ ಹರಿತವಾದ ಆ ದೊಡ್ಡ ಚೂರಿಯನ್ನು ಕೈಗೆ ತೆಗೆದುಕೊಂಡಳು. ಹಾಗೆಯೇ ಅದನ್ನು ದೇವೇಂದ್ರವಿಜಯನ ಎದೆಯಲ್ಲಿ ಪೂರ್ಣವಾಗಿ ನೆಡಬೇಕೆಂದು ಬಹು ವೇಗನೆ ಮೇಲಕ್ಕೆತ್ತಿದಳು. ಆ ಕೂಡಲೆ ದೇವೇಂದ್ರವಿಜಯನು ಅವಳ ಕೈಯನ್ನು ದೃಢಮುಷ್ಟಿಯಿಂದ ಬಲವಾಗಿ ಹಿಡಿದು, ಚೂರಿಯನ್ನು ಕಸರಿಕೊಂಡು, ರಮಣಿಯನ್ನು ಪುನಃ ದೂರವಾಗಿ ತಳ್ಳಿಬಿಟ್ಟನು.

ರಮಣಿಯು ಕೂಡಲೇ ಚೇತರಿಸಿಕೊಂಡು ಎದ್ದು ಕೊಠಡಿಯಿಂದ ಹೊರಗೆ ಬಂದಳು. ಬಂದವಳೇ—ಈಗಲೂ ನಿನಗೆ ಮೃತ್ಯುವು ತಪ್ಪಿದ್ದಲ್ಲ—ಎಂದು ಹೇಳಿ ಬಾಗಿಲನ್ನು ಎಳೆದು ಮುಚ್ಚಿ ಹೊರಗಡೆ ಚಿಲಕ ಹಾಕಿದಳು.

ದೇವೇಂದ್ರವಿಜಯನಿಗೆ ಬಾಗಿಲು ತೆರೆವುದಕ್ಕೆ ಯಾವ ಸಾಧನವೂ ಸಿಗಲಿಲ್ಲ. ಅವನು ಜನಶೂನ್ಯವಾದ ಆ ಕೊಠಡಿಯಲ್ಲಿ ಬಂದಿಯಾದನು.

---

## ಇಪ್ಪತ್ತನೆಯ ಪರಿಚ್ಛೇದ

### ಪ್ರಾಣಹಾನಿಯ ಪ್ರಯತ್ನ

ಈ ವಿಪತ್ತಿನಿಂದ ಪಾರಾಗುವುದು ಕಷ್ಟವೆಂಬುದು ಈಗೀಗ ದೇವೇಂದ್ರವಿಜಯನಿಗೆ ತೋರಿತು. ಆ ಸ್ಥಳದಲ್ಲಿ, ಇಂತಹ ಸಮಯದಲ್ಲಿ, ಸ್ವಲ್ಪವಾದರೂ ಸಹಾಯ ಮಾಡಬಲ್ಲವರೊಬ್ಬರಾದರೂ ಇಲ್ಲ.

ರಮಣಿಯು ಹೊರಟುಹೋದ ಸ್ವಲ್ಪ ಹೊತ್ತಿನ ಮೇಲೆ ಕೊಠಡಿಯಲ್ಲಿ ದೇವೇಂದ್ರವಿಜಯನು ಎಂದೂ ಅನುಭವಿಸದ ತೀವ್ರವಾದ

ಒಂದು ಬಗೆಯ ದುರ್ವಾಸನೆಯುಂಟಾಯಿತು. ನಾಲ್ಕೂ ಕಡೆ ಚೆನ್ನಾಗಿ ನೋಡಿದರೂ ಅದರ ಕಾರಣವು ವ್ಯಕ್ತಪಡಲಿಲ್ಲ. ಬರುಬರುತ್ತ ವಾಸನೆಯು ಹೆಚ್ಚುತ್ತಿದ್ದಿತಲ್ಲದೆ ಆ ಕೊಠಡಿಯಲ್ಲಿ ಅರಗಳಿಗೆ ಇರುವುದು ಕೂಡ ಮನುಷ್ಯಮಾತ್ರನಾದವನಿಗೆ ಅಸಾಧ್ಯವೆಂಬಂತೆ ತೋರಿತು. ಕಡೆಗೆ ಕಣ್ಣಿಗೆ ಮರೆಯಾಗಿರುವ ಕಡೆಯಿಂದ ಹೊಗೆಯು ಬಂದು ಬಾಗಿಲು ಮುಚ್ಚಿರುವ ಆ ಸಣ್ಣ ಕೊಠಡಿಯಲ್ಲಿ ದಟ್ಟವಾಗಿ ತುಂಬುತ್ತಿರುವುದನ್ನು ಕಂಡನು. ಕೊಠಡಿಯೊಳಗೆ ಹೊಗೆಯು ಬಂದು ತುಂಬಿದ ಹಾಗೆಲ್ಲ ಆ ಪ್ರಾಣಹಾನಿಕರವಾದ ದುರ್ಗಂಧವೂ ತೀವ್ರತಮವಾಗುತ್ತಲಿದ್ದಿತು. ಮೊದಲು ದೇವೇಂದ್ರವಿಜಯನು—ಪಕ್ಕದಲ್ಲಿರುವ ಕೊಠಡಿಗೆ ಬೆಂಕಿ ತಗಲಿರಬೇಕು; ಇಲ್ಲವಾದರೆ ತಿರಸ್ಕಾರಗೊಂಡು ಹೋದ ಆ ಭಯಂಕರಳಾದ ಹೆಂಗಸು ತನಗಾದ ಅಪಮಾನಕ್ಕೆ ಪ್ರತೀಕಾರಮಾಡಲೆಣಿಸಿ ಈ ಕೊಠಡಿಗೆ ಬೆಂಕಿ ಹೊತ್ತಿಸಿ, ಅಪಮಾನ ಮಾಡಿದವನು ಮರಣ ಸಂಕಟಪಡುವುದನ್ನು ಕಣ್ಣಾರ ನೋಡುತ್ತ ಕುಳಿತಿರಬಹುದು—ಎಂದು ಭಾವಿಸಿದನು; ಆದರೆ ಉತ್ತರಕ್ಷಣದಲ್ಲಿಯೇ ಆ ಭಾವನೆಯು ಅವನ ಮನಸ್ಸಿನಿಂದ ಮಾಯವಾಗಿ ಹೋಯಿತು; ಏತಕ್ಕೆಂದರೆ ಕೊಠಡಿಗೆ ಬೆಂಕಿ ಹೊತ್ತಿಸಿದ್ದರೆ ಅದರ ಹೊಗೆಯಲ್ಲಿ ಹೀಗೆ ಶಾಖವಿಲ್ಲದಿರುತ್ತಿರಲಿಲ್ಲ; ಅಲ್ಲದೆ ಈ ಬಗೆಯಾದ ದುರ್ಗಂಧವೂ ಅದರಲ್ಲಿರುತ್ತಿರಲಿಲ್ಲ. ಪ್ರಕೃತದಲ್ಲಿ ಕೊಠಡಿಯೊಳಗಿರುವ ಗಂಧವು ವಿಷಮಯವಾದುದೆಂಬ ವಿಷಯದಲ್ಲಿ ಸಂಶಯವಿಲ್ಲ; ಇಲ್ಲವಾದರೆ ಅದು ಅವನ ಮೆದುಳಿನೊಳಕ್ಕೂ ಹೃದಯದೊಳಕ್ಕೂ ಪ್ರವೇಶಮಾಡಿದ ಮಾತ್ರದಿಂದ ಹರಿತವಾದ ಚೂರಿಯು ಚುಚ್ಚಿಕೊಂಡ ಹಾಗೆ ಬಾಧೆಯಾಗುವುದಕ್ಕೇನು ಕಾರಣ? ಇನ್ನು ನಿಶ್ಚಿಂತನಾಗಿ ಸುಮ್ಮನೆ ಕುಳಿತಿರುವುದಕ್ಕೆ ಇದು ಸಮಯವಲ್ಲವೆಂದು ದೇವೇಂದ್ರವಿಜಯನು ತಿಳಿದನು. ಅವನು ಎದ್ದು ಬಾಗಿಲ ಬಳಿಗೆ ಹೋಗಿ, ಮೇಲಿಂದ ಮೇಲೆ ಬಾಗಿಲನ್ನು ಒದೆಯುತ್ತಾ ಅದನ್ನು ಒಡೆದುಹಾಕುವ ಪ್ರಯತ್ನ ಮಾಡಿದನು; ಪ್ರಯತ್ನವು ವ್ಯರ್ಥವಾಯಿತು. ಅವನು ಹೊರಗೆ ಬರುವುದು ಸಾಧ್ಯವಾಗಲೇ ಇಲ್ಲ; ಆಗ ಆ ಕೊಠಡಿಯಲ್ಲಿ ದಟ್ಟವಾಗಿದ್ದ ಧೂಮರಾಶಿಯು

ಅಲ್ಪ ಸ್ವಲ್ಪ ಭಾಗವನ್ನಾದರೂ ಹೊರಗೆ ಹೋಗುವಂತೆ ಮಾಡುವುದರಿಂದ ತನಗೆ ಕೊಂಚಮಟ್ಟಿಗೆ ಉಸಿರಾಡಲು ಅವಕಾಶ ದೊರೆಯುವಂತಾಗುವುದೆಂದೂ, ಅನಂತರ ಹಣೆಯಲ್ಲಿ ಬರೆದಂತೆ ಆಗಲಿ ಎಂದೂ ಅವನು ಭಾವಿಸಿ ಮುಚ್ಚಿದ್ದ ಕಿಟಿಕಿಗಳನ್ನು ತೆರೆಯಲು ಯತ್ನಿಸಿದನು; ಆ ಪ್ರಯತ್ನದಲ್ಲಿಯೂ ಅವನು ಭಗ್ನಮನೋರಥನಾದನು. ಎಲ್ಲ ಬಾಗಿಲುಗಳನ್ನೂ ಮುಚ್ಚಿ ಹೊರಭಾಗದಿಂದ ಭದ್ರಮಾಡಿದೆ; ಏನೇನು ಮಾಡಿದರೂ ಅವನ್ನು ತೆರೆಯುವುದಕ್ಕೆ ಆಗದೇಹೋಯಿತು. ಆಗ ಅವನು ಕೇವಲ ನಿರಾಶನಾಗಿ, ದಿಕ್ಕು ತೋರದಹಾಗಾಗಿ, ಓಡುತ್ತ ಹೋಗಿ ಶರೀರದ ಸಮಸ್ತ ಶಕ್ತಿಯನ್ನೂ ಒಟ್ಟುಗೂಡಿಸಿ, ಮುಚ್ಚಿದ್ದ ಬಾಗಿಲ ಮೇಲೆ ಪುನಃಪುನಃ ಪದಾಘಾತಗಳ ಮಳೆಯನ್ನೇ ಸುರಿಯಿಸಿದನು. ಆ ಪದಾಘಾತದಿಂದ ಆ ಕೊಠಡಿಯೇ ಬೀಳುವಂತಾದರೂ ಕಠಿಣವಾದ ಆ ಬಾಗಿಲೂ ಅದನ್ನು ಜೋಡಿಸಿದ್ದ ಚೌಕಟ್ಟೂ ಕದಲದೆ ನಿಂತುಕೊಂಡಿದ್ದುವಲ್ಲದೆ ಸಹಿಸಲಸಾಧ್ಯವಾದ ಆ ಪದಾಘಾತಗಳನ್ನು ಅನಾಯಾಸವಾಗಿ ಸೈರಿಸಿಕೊಂಡು ಸ್ಥಿರವಾಗಿಯೇ ಇದ್ದುವು.

ಇಂತಹ ಸಮಯದಲ್ಲಿ ಯಾರೋ ಹೊರಗಡೆ ನಿಂತು—ದೇವೇಂದ್ರ ಇದೆಲ್ಲವೂ ಬರೀ ಪ್ರಯಾಸ; ಹೆಂಗಸು ತಿರಸ್ಕೃತಳಾದದ್ದೇ ಆದರೆ ಪಿಶಾಚಿಗಿಂತಲೂ ಭಯಂಕರಳಾಗುವಳು. ನೀನು ಈ ಬಗೆಯಾಗಿ ಸಾಯಬೇಕೆಂಬುದು ನಿನ್ನ ಹಣೆಯಬರೆಹ. ಸಾಯುವುದಕ್ಕೆ ಇಷ್ಟು ಪಟ್ಟೂ ಇರುತ್ತಿ. ನೀನು ಸಾಯಿ—ಕಿಟಿಕಿಯ ಮತ್ತೂ ಬಾಗಿಲುಗಳ ಅಪರಾಧವೇನು?—ಎಂದರು.

ಅದಾದ ನಂತರ ಕಿಲಕಿಲನೆ ಅದೊಂದು ಬಗೆಯ ಭಯಂಕರ ನಗೆ!

ಆ ನಗೆಯ ಶಬ್ದವು ಹರಿತವಾದ ಚೂರಿಯ ಹಾಗೂ, ಸಿಡಲಿನ ಜ್ವಾಲೆಯ ಹಾಗೂ ಹೊಗೆ ತುಂಬಿದ ಕೊಠಡಿಯೊಳಗೆ ಪ್ರವೇಶ ಮಾಡಿದುದಲ್ಲದೆ, ಉತ್ತರಕ್ಷಣದಲ್ಲಿಯೇ ದೂರ ದೂರಾಂತರದ

ಯಾವುದೋ ನಿರ್ಜನ ಪ್ರದೇಶದಲ್ಲಿ ಕ್ಷೀಣ ಕ್ಷೀಣತರವಾಗುತ್ತ ನಡೆದು ಮುಕ್ತ ಪ್ರಕೃತಿಯೊಂದಿಗೆ ಐಕ್ಯವಾಗಿಹೋಯಿತು. ಅನಂತರ ಎಲ್ಲವೂ ನೀರವ—ನಿಶ್ಶಬ್ದ.

ಆ ನಗೆಯನ್ನು ಕೇಳಿದವನೇ ದೇವೇಂದ್ರನು ಆ ತೀವ್ರವಾದ ನಗೆಯೂ, ಆ ನಗೆಯಲ್ಲಿನ ತೀಕ್ಷ್ಣತರವಾದ ಹಾಸ್ಯ ಕಲ್ಲೋಲವೂ ಆ ದನ್ನು ರಮಣಿಯದು—ಅದೇ ಪಿಶಾಚಿಯದು—ಮತ್ತಾರದೂ ಅಲ್ಲ—ಎಂದು ತಿಳಿದುಕೊಂಡನು.

ದೇವೇಂದ್ರವಿಜಯನಿಗೆ ಆ ಸಣ್ಣ ಕೊಠಡಿಯಲ್ಲಿ ಉಸಿರುಕಟ್ಟಿದ ಹಾಗಾಗಿ ಇಲ್ಲಿಂದಲ್ಲಿಗೂ ಅಲ್ಲಿಂದಿಲ್ಲಿಗೂ ಓಡಲುಪಕ್ರಮಿಸಿದನು. ಮೊದಲೇ ಉಸಿರಾಡುವುದಕ್ಕಿಲ್ಲವಾಗಿತ್ತು, ಈಗ ಇದ್ದ ಅಲ್ಪ ಸ್ವಲ್ಪ ಪ್ರಜ್ಞೆಯೂ ತಪ್ಪುತ್ತ ಬಂದಿತು. ಕೊಠಡಿಯಲ್ಲಿ ವ್ಯಾಪಿಸಿದ್ದ ವಿಷಮಯವಾದ ವಾಸನೆಯು ಬರುಬರುತ್ತ ದೇವೇಂದ್ರವಿಜಯನ ಸರ್ವಾಂಗಗಳ ಸ್ವಾಧೀನತೆಯನ್ನೂ ತಪ್ಪಿಸಿತು. ದುರ್ಗಂಧಮಯವಾದ ಹೊಗೆಯು ಆ ಕೊಠಡಿಯಲ್ಲಿ ದಟ್ಟವಾಗಿ ತುಂಬಿಕೊಂಡಿತು; ಅದರ ನಡುವೆ ಅಲ್ಲಿ ಉರಿಯುತ್ತಿದ್ದ ದೀಪದ ಬೆಳಕು ನಿಸ್ತೇಜವಾಗಿಯೂ, ಬಹು ಮಟ್ಟಿಗೆ ಸಂಕುಚಿತವಾಗಿಯೂ ಆಗಿದ್ದಿತು. ಆ ದೀಪದ ಕ್ಷೀಣವಾದ ಬೆಳಕು ಆ ಹೊಗೆಯ ಮಧ್ಯದಲ್ಲಿಯೇ ತನ್ನದೊಂದು ಎಲ್ಲೆಯನ್ನು ಕಲ್ಪಿಸಿಕೊಂಡಂತೆ ತೋರಿತು; ಬೆಳಕು ನಾಲ್ಕೂ ಕಡೆಗೆ ಪಸರಿಸುವ ಸಂಭವವೇ ಇಲ್ಲವೆಂಬಂತಾಯಿತು. ಹೊಗೆಯು ಮುಸುಕಿದ ಆ ಕೊಠಡಿಯು ದೇವೇಂದ್ರವಿಜಯನ ದೃಷ್ಟಿಗೆ ಕಗ್ಗತ್ತಲಾಗಿರುವಂತೆ ಕಾಣಿಸಿತು. ಅವನು ಸಹಿಸಬಾರದ ಯಾತನೆಯಿಂದ ಸಂಕಟಪಡುತ್ತ ಹುಚ್ಚನ ಹಾಗೆ ಓಡಾಡಲು ಮೊದಲುಮಾಡಿದನು; ಹಾಗೆಯೇ ಯಾರಿದ್ದೀರಿ, ಬೇಗ ಬನ್ನಿ, ಕಾಪಾಡಿ—ರಕ್ಷಿಸಿ ರಕ್ಷಿಸಿ!—ಸಾವು! ಸಾವು! ಭಯಂಕರವಾದ ಸಾವು! ಎಂದು ಎದೆಯೊಡೆಯುವಂತೆ ಅರಚಿಕೊಂಡನು.

ಕ್ರಮ ಕ್ರಮವಾಗಿ ಅವನ ಕಾಲುಗಳಲ್ಲಿನ ಶಕ್ತಿ ಕುಗ್ಗುತ ಬಂದಿತು; ಅವನು ಮದ್ಯಪಾಯಿಯ ಹಾಗೆ, ತೂಗಾಡಿಕೊಂಡು ಬಿದ್ದನು.

ಎರಡು ಬಾರಿ ಬಿದ್ದನು, ಎರಡು ಸಲವೂ ಎದ್ದನು, ಅನಂತರ ಏಳುವುದು ಸಾಧ್ಯವಿಲ್ಲವಾಯಿತು. ವಿಷದ ಪರಮಾಣುಗಳು ಅವನ ಸರ್ವಾಂಗದಲ್ಲಿಯೂ ವ್ಯಾಪಿಸುತ್ತ ನಡೆಯಿತು; ಆದರಿಂದ ತಡೆಯಲಾರದ ಯಾತನೆಯುಂಟಾಗಿ ದೇವೇಂದ್ರವಿಜಯನು ನೆಲದ ಮೇಲೆ ಒದೆದಾಡುತ್ತಿದ್ದನು. ಹಾಗೆಯೇ ಅವನಿಗೆ ಪ್ರಜ್ಞೆಯು ಲೋಪವಾಗಲುಪಕ್ರಮವಾಯಿತು.

ಆ ಸಮಯದಲ್ಲಿ, ಯಾವನೋ ದೀರ್ಘಾಕಾರದ ಅಪರಿಚಿತ ಯುವಕನೊಬ್ಬನು ಆರ್ಭಟಿಸುತ್ತ ಆ ಕೊಠಡಿಗೆ ಓಡಿಬಂದು ದೇವೇಂದ್ರವಿಜಯನನ್ನು ಬಾಚಿ ಎತ್ತಿಕೊಂಡ ಹಾಗೆ ಅವನಿಗೆ ಸ್ವಪ್ನವಾಯಿತು.

ಆ ವೇಳೆಗೆ ದೇವೇಂದ್ರವಿಜಯನಿಗೆ ಸಂಪೂರ್ಣವಾಗಿ ಪ್ರಜ್ಞೆ ತಪ್ಪಿತ್ತು. ಅವನ ಕ್ಷೀಣತಮವಾದ ದೃಷ್ಟಿಗೂ ಆಗಿನ ಅಸ್ಪಷ್ಟವಾದ ದೃಶ್ಯಕ್ಕೂ ನಡುವೆ ಎಲ್ಲವನ್ನೂ ಆವರಿಸಿಕೊಂಡ ಮಸೀಮಯವಾದ ಘರದೆಯು ಬಿದ್ದಿತು.

---

ಶ್ರೀ

# ಮಾಯಾವಿ

## ೪ ನೆಯ ಭಾಗ



## ಒಂದನೆಯ ಪರಿಚ್ಛೇದ

### ಮೂರ್ತಿಮತಿಯಾದ ಪ್ರತಿಹಿಂಸೆ

ದೇವೇಂದ್ರವಿಜಯನಿಗೆ ಪ್ರಜ್ಞೆ ಬಂದಿತು; ನೋಡಿದನು, ಅವನ ಇದಿರಾಗಿ ಮುಕ್ತ ಪೃಥ್ವಿಯ ನಾಲ್ಕು ದಿಕ್ಕುಗಳೂ ಪ್ರಭಾತ ರವಿಯ ಹಿರಣ್ಯ ಪ್ರವಾಹದಿಂದ ಪುಲಕಿತವಾಗಿಯೂ, ಪ್ರದ್ಯೋತಿತವಾಗಿಯೂ ಕಾಣುತ್ತಿದೆ. ಅವನು ತರಂಗರಹಿತವಾದ ನದಿಯ ವಕ್ಷದಲ್ಲಿ ನೌಕೆಯ ಮೇಲೆ ಮಲಗಿದ್ದಾನೆ. ಅಂಬಿಗರು ಹತ್ತಿರದಲ್ಲಿಯೇ ಕುಳಿತು ಶಬ್ದ ಮಾಡುತ್ತ, ಬೇಗ ಬೇಗ ಜಲ್ಲೆಹಾಕುತ್ತಾ ದೋಣಿಯನ್ನು ಬಹು ವೇಗವಾಗಿ ಒಂದು ಕಡೆಯಿಂದ ಇನ್ನೊಂದು ಕಡೆಗೆ ನಡೆಸಿಕೊಂಡು ಹೋಗುತ್ತಿದ್ದಾರೆ. ನದಿಯ ಎರಡು ಪಾರ್ಶ್ವಗಳಲ್ಲಿಯೂ ನೀರವ; ದೂರದ ಹಳ್ಳಿಯೊಳಗೆ ಆಟಪಾಟಗಳಲ್ಲಿ ಆಸಕ್ತರಾದ ಹುಡುಗರ ಹಾಸ್ಯ ಕಲ್ಲೋಲ; ನಿದ್ದೆಯಿಂದೆದ್ದ ಯಾವುದೋ ಹಾಲು ಹಸುಳೆಯ ರೋದನ ಧ್ವನಿ; ಇಷ್ಟು ಮಾತ್ರ ಒಂದೊಂದು ಸಲ ಅಸ್ಫುಟವಾಗಿ ಕೇಳಿಸು ತ್ತಿದ್ದುವು. ಸಮೀಪದಲ್ಲಿಯೇ ಇದ್ದ ಒಂದಾನೊಂದು ದೇವದಾರು ವೃಕ್ಷದ ಮೇಲೆ ಕೋಗಿಲೆಯೊಂದು ಕುಳಿತು ಕಾಂತಿವಸನೆಯಾದ ಧರಣಿಯ ನಗ್ನವಕ್ಷವನ್ನು ಶಬ್ದ ತರಂಗದಿಂದ ತೋಯಿಸಿ, ಅಭಿಮಾನ ವಶದಿಂದ ಮೌನಧಾರಿಣಿಯಾಗಿರುವ ಪ್ರಿಯಳನ್ನು ಕುರಿತು ಬಹು ಶ್ರಮ ದಿಂದ ಪ್ರೇಮ ಸಂಭಾಷಣೆಮಾಡುತ್ತಿದೆ. ಅದರ ಆ ವೇದನಾಗೀತವು, ಆ ಸುಂದರವಾದ, ಸ್ತಬ್ಧವಾದ, ಮಂಗಳಕರವಾದ, ಕಿರಣಮಾಲೆಯಿಂದ ಪ್ರಕಾಶಮಾನವಾದ ಪ್ರಭಾತಕಾಲದ ಅಖಂಡ ಪ್ರಶಾಂತಿಯ ಮಧ್ಯೆ

ಬಹು ಮಧುರವಾಗಿ ಕೇಳಿಸುತ್ತಿದೆ. ಹಾಗೆಯೇ ನದಿಯ ದಡದಲ್ಲಿ ವಿರಳವಿರಳವಾಗಿ ನಿಂತಿರುವ ಉದ್ದುದ್ದನೆಯ ಮರಗಳ ನೆರಳು ಮತ್ತಷ್ಟು ಉದ್ದವಾಗಿ, ಬಹು ದೂರದವರೆಗೆ ನದಿಯ ವಕ್ಷದಲ್ಲಿ ಹರಡಿಕೊಂಡಿದೆ.

ದೇವೇಂದ್ರವಿಜಯನು, ವಿಸ್ಮಯದಿಂದ ಮುಗ್ಧಚಿತ್ತನಾಗಿ ಇವೆಲ್ಲವನ್ನು ನೋಡುತ್ತಲೂ ಕೇಳುತ್ತಲೂ ಇದ್ದನು. ಸ್ವಲ್ಪ ಹೊತ್ತಾದ ಮೇಲೆ, ಹೇಗೋ ಅವನಿಗೆ ಸ್ವಲ್ಪ ಚೈತನ್ಯವುಂಟಾಯಿತು; ಅದರ ಕಾರಣವು ಹೀಗೆಯೇ ಸರಿ—ಎಂದು ಅವನು ತಿಳಿದುಕೊಳ್ಳಲಾರದೆ ಇದ್ದನು. ಆಗಲೂ ತನಗೆ ಎಚ್ಚರಿಕೆಯಾಗಿರುವುದೆಂಬ ವಿಷಯದಲ್ಲಿ ಆತನಿಗೆ ಸಂಶಯವೇ ಹೆಚ್ಚಾಗಿದ್ದಿತು. ಇವೆಲ್ಲವೂ ಒಂದು ಸ್ವಪ್ನದ ರೂಪಾಂತರವಿರಬಹುದೇ ಹೊರತು ಮತ್ತೇನೂ ಅಲ್ಲವೆಂದು ಅವನು ಭಾವಿಸಿಕೊಂಡನು.

ತನಗೆ ಒದಗಿಬಂದಿದ್ದ ಆ ವಿಪತ್ತಿನ ವಿಚಾರವನ್ನು ಆನುಪೂರ್ವಿಕವಾಗಿ ಸ್ಮರಣೆಗೆ ತಂದುಕೊಳ್ಳಲು ಅವನಿಗೆ ಹೇಗೂ ಸಾಧ್ಯವಾಗಲಿಲ್ಲ. ಅವನು ಬಹು ಶ್ರಮದಿಂದ ಅದರಲ್ಲಿ ಕೊಂಚ ಕೊಂಚ ಭಾಗವನ್ನು ಜ್ಞಾಪಿಸಿಕೊಳ್ಳುತ್ತಿದ್ದನು; ಆದರೂ ಆ ದಸ್ಯುರಮಣಿಯ ಮತ್ತೂ ಆ ಆಶ್ಚರ್ಯರೋಗಿಯ ಮುಖಭಾವಗಳು ಅವನಿಗೆ ಸರಿಯಾಗಿ ಜ್ಞಾಪಕಕ್ಕೆ ಬರಲೇ ಇಲ್ಲ; ಅವಸನ್ನವಾಗಿ ನೆಲದಮೇಲೆ ಬಿದ್ದಿದ್ದ ತನ್ನ ಶರೀರವನ್ನೆತ್ತಿ ಅಪ್ಪಿಕೊಂಡು, ಆ ಕೊಠಡಿಯಿಂದ ಸಾಗಿಸಿಕೊಂಡು ಬಂದ ದೀರ್ಘಾಕಾರದ ಆ ಅಪರಿಚಿತ ವ್ಯಕ್ತಿಯ ಮುಖವು ಒಂದೊಂದು ಸಲ ಜ್ಞಾಪಕಕ್ಕೆ ಬರುತ್ತಿದ್ದಿತು; ಆದರೆ ಅವನು ಅದನ್ನು ಹೇಗೂ ನಂಬುತ್ತಿರಲಿಲ್ಲ. ಆ ಮೊದಲು ಈವರೆಗೂ ಸಮಸ್ಯಾಪೂರ್ಣವಾದೊಂದು ಅಪೂರ್ವದೃಶ್ಯವು ಅವನ ಕಣ್ಣೆದುರಿಗೆ ಅಭಿನಯಗೊಳ್ಳುತ್ತಿರುವುದೆಂದೇ ಅವನು ಮನಸಾ ದೃಢವಾಗಿ ಭಾವಿಸಿದನು. ಈಗಲೂ ಅದೇ ಹೊಗೆ, ಅದೇ ಘಾಟು. ಅವನಿಗೆ ಉಸಿರಾಡದಂತೆ ಮಾಡುತ್ತಿರುವಂತೆ ತೋರುವುದು. ಅವನು ಬಹು ಕಷ್ಟದಿಂದ ಉಸಿರಾಡಿಸುತ್ತಿದ್ದನು; ಅವನ ತಲೆಯೂ ಅವನ ಹೃದಯವೂ ಏನೋ ಭಾರವಾಗಿರುವಂತೆ ತೋರು

ತ್ತಿದ್ದಿತಾಗಿ ಅವನು ಪ್ರಯತ್ನಮಾಡಿದರೂ ನೆಟ್ಟಗೆ ಎದ್ದು ಕುಳ್ಳಿರಲಾಗು ತ್ತಿರಲಿಲ್ಲ. ದುಸ್ಸಹವಾದ ಮತ್ತೂ ಉನ್ಮಾದಕರವಾದ ಒಂದು ಬಗೆಯ ಅಮಲು ಮಸ್ತಿಷ್ಕದಮೇಲೆ ಸಂಪೂರ್ಣವಾಗಿ ಅಧಿಕಾರಮಾಡುತ್ತಿದ್ದಿತು. ಅವನು ಆ ಮತ್ತಿನ ಮಹತ್ವದಿಂದ—"ಇದೆಂತಹ ಭಯಂಕರವಾದ ಜಟಿಲ ರಹಸ್ಯ! ಗಂಡ ಹೆಂಡಿರು ಸೇರಿ ಈ ರೀತಿಯಾಗಿ ಮೋಸ ಮಸಲತ್ತು ಗಳಿಂದ ಕಾಲಹರಣ ಮಾಡುತ್ತಿದ್ದಾರೇನು? ಆ ಹೆಂಗಸು ನೋಡು ವುದಕ್ಕೆ ಎಷ್ಟೋ ಸುಂದರಳು! ಅವಳನ್ನು ನೋಡಿದವರು ಯಾರು ತಾನೇ ಅವಳ ಹೃದಯದಲ್ಲಿ ಇಂತಹ ಕಾಲಕೂಟವು ತುಂಬಿರುವುದೆಂದು ಹೇಳುವರು? ನಿಶ್ಚಯವಾಗಿಯೂ ಅವರಿಬ್ಬರೂ ಒಂದಾಗಿ, ನನ್ನನ್ನು ಕೊಂದು ನನ್ನ ಬಳಿ ಇರುವ ಅಲ್ಪ ಸ್ವಲ್ಪವನ್ನೆಲ್ಲಾ ಅಪಹರಿಸಬೇಕೆಂದು ಆಲೋಚಿಸಿದ್ದರಾದೀತು. ಆದರೆ ಏನಾಗಿಹೋಯಿತು! ಆ ಭಯಂಕರ ಮೃತ್ಯುವಿನಿಂದಲೂ, ಆ ಕ್ರೂರರಾದ ಆ ಕೊಲೆಪಾತಕರಿಂದಲೂ ನನ್ನನ್ನು ಉದ್ಧಾರಮಾಡಿದವರು ಯಾರಾಗಿದ್ದೀತು? ಈಗ ನಾನು ಇರುವುದೆಲ್ಲಿ? ಹೋಗುತ್ತಿರುವುದೆಲ್ಲಿಗೆ? ನನ್ನನ್ನು ಈ ದೋಣಿಯ ಮೇಲಕ್ಕೆ ಕರೆದು ತಂದವರು ಯಾರು?" ಎಂದು ಅಸ್ಫುಟ ಸ್ವರದಿಂದ ಹೇಳಿಕೊಳ್ಳುತ್ತಿದ್ದನು.

ನೌಕೆಯು ದ್ರುತತರ ವೇಗದಿಂದ ಹೋಗುತ್ತಿದ್ದ ಕಾರಣ, ನದಿಯ ವಕ್ಷದಲ್ಲ ತುಂತುರು ಹನಿಗಳಿಂದ ತೊಯಿದ ಇದಿರು ಗಾಳಿಯು ದೇವೇಂದ್ರವಿಜಯನ ಸರ್ವಾಂಗದಲ್ಲಿಯೂ ಪ್ರಬಲ ವೇಗದಿಂದ ಬೀಸಿ, ಅವನ ದುರ್ಬಲವಾದ ಮಸ್ತಿಷ್ಕದಲ್ಲಿ ಕ್ಷಣೇ ಕ್ಷಣೆ ಸ್ಪಷ್ಟ ರೂಪವಾಗಿ ಶಕ್ತಿ ಸಂಚಾರವನ್ನುಂಟುಮಾಡುತ್ತಿದ್ದಿತು. ದೇವೇಂದ್ರವಿಜಯನು ಒಬ್ಬ ಅಂಬಿಗನನ್ನು ಕೂಗಿ,—ನೀವು ನನ್ನನ್ನು ಎಲ್ಲಿಗೆ ಕರೆದುಕೊಂಡು ಹೋಗುವಿರಿ? ನನ್ನನ್ನು ಈ ದೋಣಿಗೆ ಎತ್ತಿಕೊಂಡುಬಂದವರಾದರೂ ಯಾರು?—ಎಂದು ಕೇಳಿದನು.

ಆ ಅಂಬಿಗರು ಅವನ ಮಾತಿಗೆ ಕಿವಿಗೊಡಲೇ ಇಲ್ಲ; 'ಝುಪ್ ಝುಪ್' ಎಂದು ಶಬ್ದವಾಗುವ ಹಾಗೆ ಜಲ್ಲೆಯನ್ನಾಡಿಸುತ್ತಾ ದ್ರುತತರ ವೇಗದಿಂದ ದೋಣಿಯನ್ನು ಮುಂದರಿಸುತ್ತಿದ್ದರು.

ದೇವೇಂದ್ರವಿಜಯನು ಮೊದಲಿಗಿಂತಲೂ ಗಟ್ಟಿಯಾಗಿ, ನೀವು ನನ್ನನ್ನು ಎಲ್ಲಿಗೆ ಕರೆದುಕೊಂಡುಹೋಗುತ್ತೀರಿ? ಎಂದು ಪುನಃ ಕೇಳಿದನು.

ದೋಣೀ ನಡೆಸುವವರಲ್ಲಿ ಒಬ್ಬನು—ನಾವು ನಿಮ್ಮನ್ನು ಸರಿಯಾದ ಸ್ಥಳಕ್ಕೇ ಕರೆದುಕೊಂಡುಹೋಗುತ್ತೇವೆ, ಅದಕ್ಕಾಗಿ ನೀವು ಆಲೋಚಿಸಬೇಡಿ; ತಾವು ಸ್ವಲ್ಪ ಸುಮ್ಮನೆ ಕುಳಿತುಕೊಳ್ಳಬೇಕು, ಎಂದು ಹೇಳಿದನು.

ಯುವಕನು ಬೇಸರದಿಂದ—ಯಾವಲ್ಲಿಗೆ ಹೋಗುವುದು? ಯಮಪುರಿಗೇನೂ ಅಲ್ಲವಷ್ಟೆ? ಆ ಭಯಂಕರ ನೃತ್ಯದರ್ಶನದ ನಂತರ ಇದೇನು ಯಮಪುರಿಯ ಪ್ರಯಾಣವಲ್ಲವಷ್ಟೆ?—ಎಂದಂದುಕೊಂಡು, ನನ್ನನ್ನು ಎಲ್ಲಿಗೆ ಕರೆದುಕೊಂಡುಹೋಗುವುದೆಂಬುದನ್ನು ಹೇಳದಿದ್ದರೆ, ನಾನು ನಿಮ್ಮ ಸಂಗಡ ಬರುವುದಿಲ್ಲ. ನನ್ನನ್ನು ಇಲ್ಲಿಯೇ ಇಳಿಸಿಬಿಡಿ ಎಂದು ಮುಷ್ಕರ ಹಿಡಿದನು.

ಈ ಬಗೆಯಾದ ಆತಂಕವನ್ನು ಕಂಡು ದೋಣೀ ನಡೆಸುವವರ ಮುಖ್ಯಸ್ಥನು ಮುಂದರಿದುಬಂದನು. ಬಂದವನೇ ದೇವೇಂದ್ರವಿಜಯನನ್ನು ಕುರಿತು ವಿನೀತಭಾವದಿಂದ—ನಿಮ್ಮ ಊರಿಗೇ ನಿಮ್ಮನ್ನು ಕರೆದುಕೊಂಡುಹೋಗುತ್ತಿದ್ದೇವೆ; ನಮಗೆ ನಿಮ್ಮ ಸ್ಥಳವು ಗೊತ್ತು; ತಾವು ಈಗ ಚಿಂತಿಸಬೇಡಿ; ಸ್ವಲ್ಪ ಮಟ್ಟಿಗೆ ನಿಶ್ಚಿಂತರಾಗಿ ಕುಳಿತುಕೊಳ್ಳಿರಿ; ತಮಗೆ ಇನ್ನೂ ಅಮಲು ಇಳಿದಿಲ್ಲ, ಎಂದು ಹೇಳಿದನು.

ಆ ಮುಖ್ಯಸ್ಥನು ತನ್ನ ಮಾತುಗಳನ್ನು ಸಾಧ್ಯವಾದ ಮಟ್ಟಿಗೂ ಸರಸವನ್ನಾಗಿಯೇ ಮಾಡಿ ಹೇಳಿದನು. ಆದರೆ ದುರದೃಷ್ಟವಶದಿಂದ ಅದು ದೇವೇಂದ್ರವಿಜಯನಿಗೆ ಕೇವಲ ನೀರಸವಾಗಿಯೂ ವ್ಯಂಗ್ಯಮಿಶ್ರವಾದಂತಹುದಾಗಿಯೂ ತೋರಿತು. ಅದರಿಂದ ಅವನು ಕೋಪಿಸಿಕೊಂಡು ಆ ಮುಖ್ಯಸ್ಥನನ್ನು ಕುರಿತು—ನಿನ್ನ ತಲೆ, ಮೂರ್ಖ, ನನ್ನನ್ನು ನಮ್ಮ ಊರಿಗೆ ಸೇರಿಸುವುದಕ್ಕೆ ನಾನು ಇರುವುದೆಲ್ಲಿ ಎಂಬುದನ್ನು ನೀನೇನು

ಬಲ್ಲೆ ?—ಎಂದು ಹೇಳಿ ಎದ್ದು ನಿಲ್ಲುವುದಕ್ಕೆ ಪ್ರಯತ್ನಿಸಿದನು. ಪ್ರಯತ್ನ ಮಾಡಿದುದೆಷ್ಟೋ ಅಷ್ಟೇ, ಏಳುವುದಕ್ಕಾಗಲಿಲ್ಲ ; ಅರ್ಧಶಾಯಿತಾವಸ್ಥೆಯಲ್ಲಿಯೇ ಕುಳಿತುಬಿಟ್ಟನು. ಈಗಲೂ ತನಗೆ ಅಮಲು ಇಳಿದಿಲ್ಲವೆಂದು ಆ ಅಂಬಿಗನು ಹೇಳಿ ತನಗೆ ಕ್ರೋಧೋದ್ರೇಕಮಾಡಿದನಲ್ಲಾ ಅದು ಮಿಥ್ಯಾಪವಾದವಲ್ಲ ; ಸಂಪೂರ್ಣವಾಗಿಯೂ ನಿಶ್ಚಯ ; ಎಂದು ಆಗ ಅವನಿಗೆ ತೋರಿತು. ಆಗಲೂ ಅವನ ತಲೆ ಸುತ್ತುತ್ತಿರುವಂತೆ ಇದ್ದಿತು ; ಅವನ ಕಾಲುಗಳೆರಡೂ ಅವನ ದೇಹದ ಭಾರವನ್ನು ಹೊರುವುದಕ್ಕೆ ತ್ರಾಣವಿಲ್ಲವೆಂಬುದನ್ನು ಪ್ರಕಾಶಪಡಿಸುತ್ತಿವೆಯೋ ಎನ್ನುವಂತೆ ತುಂಬಾ ಅವಶವಾಗಿದ್ದುವು. ಅವನು ಅಂಬಿಗನ ಮೂರ್ಖತೆಗಿಂತಲೂ ತನ್ನ ಮೂರ್ಖತೆಯೇ ಅಧಿಕವೆಂಬುದನ್ನು ತಿಳಿದು ಬಹುವಾಗಿ ದುಃಖಿತನಾದನು.

ದೇವೇಂದ್ರವಿಜಯನ ಆ ಬಗೆಯ ಭಾವವನ್ನು ಅಂಬಿಗನು ಕಂಡು, ಅದಕ್ಕಾಗಿ ಕೊಂಚವಾದರೂ ವಿಸ್ಮಯಗೊಳ್ಳದೆ, ತಮ್ಮ ಮನೆ ಅತ್ತಲಾಗಿ ಕಾಮದೇವಪುರದಲ್ಲಿ; ತಮ್ಮ ಹೆಸರು ಅರಿಂದಮಬಾಬು ಎಂದಲ್ಲವೆ ? ಎಂದು ಕೇಳಿದನು.

ದೇವೇಂದ್ರವಿಜಯನು ಉತ್ತೇಜಿತ ಭಾವದಿಂದ, ನನ್ನ ಹೆಸರು ಅರಿಂದಮಬಾಬೂ ಅಲ್ಲ ; ನಮ್ಮ ಮನೆಯೂ ಕಾಮದೇವಪುರದಲ್ಲಿಲ್ಲ —ಎಂದು ಉತ್ತರಕೊಟ್ಟನು.

ಅಂಬಿಗ—ಹಾಗಾದರೆ ಆ ದೊಡ್ಡಮನುಷ್ಯನು ನನಗೆ ಸುಳ್ಳು ಹೇಳಿದನೇನು ? ಎಂದು ಕೇಳಿ, ಬಾಬುವಿಗೆ ಇನ್ನೂ ಅಮಲು ಇಳಿದಿಲ್ಲ ಎಂದು ಮನಸ್ಸಿನಲ್ಲಿಯೇ ಭಾವಿಸಿದನು.

ದೇವೇಂದ್ರವಿಜಯ—ಯಾವನೊ ಆ ದೊಡ್ಡಮನುಷ್ಯ ? ನನ್ನನ್ನು ದೋಣಿಗೆ ಹತ್ತಿಸಿದವನು ಯಾರು ? ನನಗೆ ಯಾವುದೂ ತಿಳಿಯುವ ಹಾಗಿಲ್ಲ. ನೀನು ಈಗಲೇ ನನಗೆ ಎಲ್ಲ ವಿಚಾರಗಳನ್ನೂ ವಿವರವಾಗಿ ಹೇಳು.

ಅಂಬಿಗನು ಹೇಳಲುಪಕ್ರಮಿಸಿದನು—ಬಾಬೂ, ತಾವು ನಿನ್ನೆಯ ರಾತ್ರಿ ಬಹುವಾಗಿ ಮತ್ತೇರಿದವರಾಗಿದ್ದಿರಿ. ತಮಗೆ ಕೊಂಚವಾದರೂ ಜ್ಞಾನವಿರದ ಮಟ್ಟಿಗೆ ಮದ್ಯಪಾನ ಮಾಡಿದ್ದಿರಿ. ಒಂದು ಆಲದ ಮರದ ಕೆಳಗೆ ತುಳಿಯಲ್ಪಟ್ಟವರಂತೆ ಬಿದ್ದುಕೊಂಡಿದ್ದಿರಿ. ಅದು ಹೇಗಾದರೂ ಇರಲಿ, ಅದರಿಂದ ಈಗ ಆಗಬೇಕಾದ್ದೇನು; ಈ ಕಾಲದಲ್ಲಿ ಬಹು ಮಂದಿ ದೊಡ್ಡಮನುಷ್ಯರು ಹೀಗಾಗಿಬಿಟ್ಟಿದ್ದಾರೆ. ಆ ಸ್ಥಳದ ದೊಡ್ಡ ಮನುಷ್ಯರೊಬ್ಬರು ಅಂತಹ ಅವಸ್ಥೆಯಲ್ಲಿದ್ದ ತಮ್ಮನ್ನು ಕಂಡು ನನ್ನನ್ನು ಕೂಗಿದರು. ನನ್ನನ್ನು ಕೂಗಿ—"ಮಾಧುರ, ಒಂದು ಕೆಲಸ ಮಾಡಬೇಕಲ್ಲ, ಈ ದೊಡ್ಡಮನುಷ್ಯನನ್ನು ಊರಿಗೆ ಸೇರಿಸಿ ಬರಬೇಕು. ಯಾರಾದರೂ ಪೋಲೀಸರು ನೋಡಿದ್ದೇ ಆದರೆ ಠಾಣೆಗೆ ಎಳೆದುಕೊಂಡು ಹೋದಾರು. ಈ ಮನುಷ್ಯನ ವಾಸಸ್ಥಳವನ್ನು ನಾನು ಬಲ್ಲೆ. ಅಂಗಿಯ ಕಿಸೆಯಲ್ಲಿ ಸಿಕ್ಕಿದ ಕಾಗದಗಳಲ್ಲಿ ಇವನ ವಾಸಸ್ಥಳದ ಹೆಸರು ಬರೆದಿದೆ" ಎಂದು ಹೇಳಿದರು.

ದೇವೇಂದ್ರ—ಆ ದೊಡ್ಡಮನುಷ್ಯನು ಯಾರೆಂಬುವುದು ನಿನಗೆ ಗೊತ್ತೇ?

ಅಂಬಿಗ—ಇಲ್ಲ ಸ್ವಾಮಿ, ನಾನು ಕಾಣೆ.

ದೇವೇಂದ್ರ—ಹಾಗಾದರೆ ಆತನು ನಿನ್ನ ಹೆಸರು ಹಿಡಿದು ಕೂಗಿದ್ದು ಹೇಗೆ?

ಅಂಬಿಗನು ಸ್ವಲ್ಪ ಹಿಂದು ಮುಂದು ಆಲೋಚಿಸಿ—ಅದೆಲ್ಲವೂ ನನಗೆ ಹೇಗೆ ತಿಳಿಯಬೇಕು ಸ್ವಾಮಿ; ಇದಕ್ಕೆ ಮೊದಲು ಆ ದೊಡ್ಡಮನುಷ್ಯನನ್ನು ಎಲ್ಲಿಯಾದರೂ ನೋಡಿರುವೆನೇ ಎಂಬುವುದು ಸರಿಯಾಗಿ ಸ್ಮರಣೆಗೆ ಬಾರದು. ಆದರೆ ಆತನೇನೋ ನನ್ನನ್ನು ಚೆನ್ನಾಗಿ ಬಲ್ಲವನೆಂದು ಹೇಳಬೇಕು. ಹಾಗಿಲ್ಲವಾದರೆ, ನನ್ನ ಹೆಸರು ಅವನಿಗೆ ತಿಳಿಯುವ ಬಗೆ ಹೇಗೆ? ಹೇಗಾದರೂ ಆಗಲಿ, ಮನುಷ್ಯನು ತುಂಬ ಗೌರವಸ್ಥ, ಕರುಣೆಯೋ ಆತನೆಂದು ಹೇಳಿದರೂ ಸಲ್ಲುತ್ತದೆ; ಇಲ್ಲವಾಗಿದ್ದರೆ ಈ ಕಾಲದ ನಡವಳಿಯಲ್ಲಿ ಒಬ್ಬರಿಗೊಬ್ಬರು ಮೇಲುಕೋರುವುದೆಂದರೇನು ಹೇಳಿ. ಈಗಿನ

ಕಾಲದಲ್ಲಿ ಹೆತ್ತ ತಂದೆತಾಯಿಗಳನ್ನೂ ಒಡಹುಟ್ಟಿದ ಅಣ್ಣತಮ್ಮಂದಿರನ್ನೂ ಯಾರೂ ವಿಚಾರಿಸುವುದಿಲ್ಲ. ಇಂತಹ ಕಾಲದಲ್ಲಿ ನಿಮಗೆ ಆತನು ಅನೇಕವಾಗಿ ಉಪಕಾರ ಮಾಡಿದ್ದಾನೆ. ನಿಮ್ಮನ್ನು ಕರೆದುಕೊಂಡು ಬರುವ ಬಾಡಿಗೆಯನ್ನೂ ಸಹ ತನ್ನ ಕೈಯಿಂದ ಈ ಮೊದಲೇ ಕೊಟ್ಟುಬಿಟ್ಟಿದ್ದಾನೆ, ಎಂದು ಹೇಳಿದನು.

ದೇವೇಂದ್ರವಿಜಯ—ಆ ದೊಡ್ಡಮನುಷ್ಯನ ವಯಸ್ಸು ಎಷ್ಟು; ಹೇಗೆ ಕಾಣಿಸುತ್ತಿದ್ದನು. ಮನುಷ್ಯನು ದೀರ್ಘಾಕೃತಿಯವನೆ ಅಥವಾ ಗಿಡ್ಡೇ. ಸ್ಥೂಲಕಾಯನೋ ಅಥವಾ ಕ್ಷೀಣಕಾಯನೋ? ಗಡ್ಡ ಮೀಸೆಗಳೇನಾದರೂ ಇದ್ದಿತೆ ಅಥವಾ ಇಲ್ಲವೇ ಎಂದು ಮುಂತಾಗಿ ಅನೇಕ ಪ್ರಶ್ನೆಗಳನ್ನು ಕೇಳಿದನು. ಇವನ ಪ್ರಶ್ನೆಗಳಿಗೆಲ್ಲಾ ಅಂಬಿಗನು ಹೇಳಿದ ಉತ್ತರಗಳನ್ನು ಕೇಳಿದಮೇಲೆ ಹಿಂದಿನ ರಾತ್ರಿ ತಾನು ನೋಡಿದ್ದ, ಎಂದೂ ನೋಡದಂತಹ ಆ ಅದ್ಭುತರೋಗಿಯೇ ಈ ದೊಡ್ಡಮನುಷ್ಯನಾಗಿರಬೇಕೆಂದು ಊಹಿಸಿದನು. ಹಾಗೆಯೇ ದೋಣಿಯವನನ್ನು ಕುರಿತು—ನೀನು ಏನೋ ಕಾಗದದ ವಿಚಾರವಾಗಿ ಹೇಳಿದೆಯಲ್ಲವೆ? ಆ ಕಾಗದ ಎಲ್ಲಿದೆ? ನಾನು ಅದನ್ನು ಒಂದು ಸಲ ನೋಡಬೇಕಾಗಿದೆ. ನನಗೆ ಅದನ್ನು ಕೊಡು, ಎಂದನು.

ದೋಣಿಯವನು—ಆ ಕಾಗದವು ನಿಮ್ಮ ಅಂಗಿಯ ಕಿಸೆಯಲ್ಲಿಯೇ ಇದೆ. ಆತನು ವಿಳಾಸವನ್ನು ಒಂದು ಸಲ ಓದಿ ಹೇಳಿ ಅನಂತರ ಅದನ್ನು ಪುನಃ ನಿಮ್ಮ ಕಿಸೆಯಲ್ಲಿಯೇ ಹಾಕಿದನು.

ಕಿಸೆಗೆ ಕೈಹಾಕಿ ನೋಡಿದಾಗ ದೇವೇಂದ್ರವಿಜಯನ ಮುಖವು ವಿವರ್ಣವಾಗಿಹೋಯಿತು. ಅವನು ಉತ್ತೇಜಿತ ಕಂಠದಿಂದ, ಅಯ್ಯೋ, ಸರ್ವನಾಶವಾಯಿತು! ಅವರು ಕಳ್ಳರು; ಅವರೇ ಡಕಾಯಿತರು; ಅವರು ಬಹು ಭಯಂಕರ ಸ್ವಭಾವದವರು; ಮಹಾವಿಶ್ವಾಸಘಾತಕರು. ನೀವು ಗಳೂ ಆ ಕೊಲೆಪಾತಕರ ಕಡೆಯವರೆಂದೇ ತೋರುತ್ತಿದೆ; ನನ್ನ ಕೈಯಿಂದ ಯಾರೂ ಬಿಡುಗಡೆ ಹೊಂದಲಾರಿರಿ; ನಿಶ್ಚಯವಾಗಿಯೂ ನೀವು ಇದರ ಫಲಭೋಗ ಮಾಡಿಯೇ ಮಾಡುವಿರಿ, ಎಂದು ಹೇಳಿದನು.

ದೋಣಿಯುವನು ಆ ಮಾತಿನ ಅರ್ಥವೇನೆಂದು ತಿಳಿಯದೆ ವಿಸ್ಮಿತನಾಗಿ, ಮತ್ತಷ್ಟು ಕುತೂಹಲದಿಂದ,–ಬಾಬೂ ಏನಾಗಿ ಹೋಯಿತು? ನಮಗೇನೂ ತಿಳಿಯದು, ಎಂದನು.

'ನಿಮಗೆಲ್ಲವೂ ಗೊತ್ತಿದೆ' ಎಂದು ಹೇಳಿ ದೇವೇಂದ್ರವಿಜಯನು ದೋಣಿಯುವನ ಮಾತನ್ನು ಮುಗಿಯಿಸಿ, ಹಾಗೆಯೇ ಕ್ರೋಧಭರದಿಂದ– ನನ್ನ ಗಡಿಯಾರ, ಸರಪಳಿ, ವಜ್ರದ ಉಂಗುರ, ಜೇಬಿನಲ್ಲಿ ಸುಮಾರು ಮೂರು ನೂರಕ್ಕೆ ಹೆಚ್ಚಾಗಿಯೇ ಇದ್ದ ರೂಪಾಯಿಗಳು–ಎಲ್ಲವನ್ನೂ ಕಳುವುಮಾಡಿ ತೆಗೆದುಕೊಂಡಿದ್ದಾರೆ. ಅವರು ಸಾಧಾರಣ ಮನುಷ್ಯರಲ್ಲ. ಇಲ್ಲಿ ಎಲ್ಲಿಯಾದರೂ ಒಂದು ಥಾಣೆ ಇರುವುದಾದರೆ ಅಲ್ಲಿಗೆ ನನ್ನನ್ನು ಕರೆದುಕೊಂಡುಹೋಗು. ಈಗಲೇ ಇದರ ಪ್ರತೀಕಾರ ಮಾಡಿಬಿಡುತ್ತೇನೆ, ಎಂದು ಗರ್ಜಿಸಿದನು.

ದೇವೇಂದ್ರವಿಜಯನು ಈ ಜೇಬು, ಆ ಜೇಬು ಎಂದು ಹುಡುಕಿದಾಗ ಮೂರು ಕಾಗದಗಳು ಸಿಕ್ಕಿದುವು. ಅವುಗಳಲ್ಲಿ ಎರಡು ತನ್ನ ಹೆಸರಿಗೆ ಬರೆದ ಕಾಗದಗಳು. ಹಸ್ತಾಕ್ಷರಗಳು ಬೇರೆ ಬೇರೆ. ಮತ್ತೊಂದರಮೇಲೆ ಕಾಮದೇವಪುರದಲ್ಲಿರುವ ಅರಿಂದಮನ ವಿಳಾಸ ಬರೆದಿತ್ತು. ದೇವೇಂದ್ರವಿಜಯನು ಕೇವಲ ಕುತೂಹಲಿಯಾಗಿ ಆ ಮೂರು ಕಾಗದಗಳನ್ನೂ ಓದಿದನು. ಓದಿದಮೇಲೆ ದೋಣಿಯುವನನ್ನು ಕುರಿತು—ಸರಿ, ನನ್ನ ಹೆಸರೇ ಅರಿಂದಮ; ನಮ್ಮ ಮನೆ ಕಾಮದೇವಪುರದಲ್ಲಿದೆ; ಆದಷ್ಟು ಬೇಗ ದೋಣಿಯನ್ನು ಅಲ್ಲಿಗೆ ನಡೆಯಿಸು; ಎಂದು ಹೇಳಿದನು.

ಈ ಮಾತನ್ನು ಕೇಳಿ ದೋಣಿಯುವನು ಕೊಂಚವೂ ವಿಸ್ಮಯಪಡಲಿಲ್ಲ. ಕಾರಣವೇನೆಂದರೆ, ಈ ಮನುಷ್ಯನಿಗೆ ಇನ್ನೂ ಅಮಲು ಸರಿಯಾಗಿ ಇಳಿದಿಲ್ಲವೆಂದು ಅವನು ಚೆನ್ನಾಗಿ ನಂಬಿದ್ದನು.

ದೋಣಿಯು, ಮೊದಲಿನ ಹಾಗೆಯೇ, ವೇಗವಾಗಿ ಹೋಗುತ್ತಿದ್ದಿತು.

---

## ಎರಡನೆಯ ಪರಿಚ್ಛೇದ

### ಕಾಗದ ಪತ್ರಗಳು

ಯಥಾ ಸಮಯದಲ್ಲಿ ದೋಣಿಯು ಹುಗಲಿಯ 'ಶೋಲಾ' ಘಾಟಿಗೆ ಬಂದು ಮುಟ್ಟಿತು. ದೇವೇಂದ್ರವಿಜಯನು ಅದರಿಂದ ಇಳಿದನು; ದೋಣಿಯು ಬಾಡಿಗೆ ಬಂದಿರುವುದೆಂದು ದೋಣಿಯವನು ಮೊದಲೇ ಹೇಳಿದ್ದನಾದ್ದರಿಂದ ಪ್ರಕೃತದಲ್ಲಿ ಅದಕ್ಕಾಗಿ ಕಾತರನಾಗಲಿಲ್ಲ. ದೋಣಿಯವರು ನಿರ್ದೋಷಿಗಳೆಂಬುದರ ಪ್ರಮಾಣವು ಆ ಮೂರು ಕಾಗದಗಳ ಪೈಕಿ ಒಂದರಲ್ಲಿ ಬರೆದಿದ್ದಿತು. ದೇವೇಂದ್ರವಿಜಯನು ಅವರನ್ನು ಬಿಟ್ಟುಬಿಟ್ಟನು.

ಅರಿಂದಮನ ಮನೆಯನ್ನು ಹುಡುಕಿ ಗೊತ್ತುಮಾಡುವುದಕ್ಕೆ ದೇವೇಂದ್ರವಿಜಯನಿಗೆ ಸ್ವಲ್ಪವಾದರೂ ಆಯಾಸವಾಗಲಿಲ್ಲ. ಅಲ್ಲಿನವರೆಲ್ಲರೂ ಅರಿಂದಮನನ್ನು ಬಲ್ಲರು. ದೇವೇಂದ್ರವಿಜಯನು ಅರಿಂದಮನ ಮನೆಗೆ ತಲ್ಪಿದಾಗ, ಅರಿಂದಮನು ಹೊರಗಡೆಯ ಕೊಠಡಿಯಲ್ಲಿ ಕುಳಿತು ಕುತೂಹಲಾವಿಷ್ಟನಾಗಿ ವರ್ತಮಾನಪತ್ರವೊಂದನ್ನು ಓದುತ್ತಿದ್ದನು. ಸುಲಭವಾಗಿಯೇ ಆತನ ಭೇಟಿಯಾಯಿತು. ಅರಿಂದಮನು ದೇವೇಂದ್ರವಿಜಯನನ್ನು ಕುಳಿತುಕೊಳ್ಳಬೇಕೆಂದು ಹೇಳಿ, ವರ್ತಮಾನ ಪತ್ರವನ್ನು ಮೇಜಿನಮೇಲೆ ಹಾಕಿಬಿಟ್ಟು, ತಾನು ಸರಿಯಾಗಿ ಕುಳಿತುಕೊಂಡನು.

ದೇವೇಂದ್ರವಿಜಯನು—ಮಹಾಶಯ! ತಾವೇನೆ ಅರಿಂದಮ ಬಾಬು ಎಂಬವರು? ಎಂದು ಕೇಳಿದನು.

ಅರಿಂದಮನು ತಲೆಯಾಡಿಸಿ ಒಪ್ಪಿಕೊಂಡನು.

ದೇವೇಂದ್ರವಿಜಯ—ತಮ್ಮ ವಿಳಾಸಕ್ಕೆ ಒಂದು ಕಾಗದವಿದೆ. ಹೀಗೆಂದು ಹೇಳಿ ಅವನು ಆ ಮೂರು ಕಾಗದಗಳಲ್ಲಿ ಅರಿಂದಮನ ಕಾಗದವನ್ನು ಹುಡುಕಿ ತೆಗೆದನು.

ಅರಿಂದಮನು ಕಾಗದವನ್ನು ಓದಿಕೊಂಡನು. ಕಾಗದದಲ್ಲಿ ಹೀಗೆ ಬರೆದಿತ್ತು:—

"ಪ್ರಿಯ ಮಿತ್ರನಿಗೆ,

ಬಹು ದಿನಗಳಿಂದ ನಿನ್ನ ಸಮಾಚಾರಗಳೊಂದೂ ತಿಳಿಯದೆ ಬಹುವಾಗಿ ವಿಷಾದಿಸುತ್ತೇನೆ; ನನ್ನ ಸಂಪೂರ್ಣ ಕುಶಲವನ್ನು ತಿಳಿದು ನಿಶ್ಚಿಂತನಾಗು. ನೀನಾಗಿ ಮಾಡಿದ ಮಹೋಪಕಾರವನ್ನು ನೀನು ಸಾಯುವವರೆಗೂ, ಎಂದೆಂದಿಗೂ ನಾನು ಮರೆಯಲಾರೆ.

ನಾನು ಅದನ್ನು ಮರೆಯುವತನಕ ನನಗೆ ಏತರಿಂದಲೂ ಸ್ವಾಸ್ಥ್ಯವಿಲ್ಲ; ಅದಕ್ಕೋಸ್ಕರವಾಗಿಯೇ ನಿನ್ನ ಮರಣವು ಸಾಧ್ಯವಾದ ಮಟ್ಟಿಗೂ ಬೇಗ ಸನ್ನಿಹಿತವಾಗುವಂತೆ ಮಾಡಲು ಎಲ್ಲ ಪ್ರಯತ್ನ ಗಳನ್ನೂ ನಡೆಯಿಸುತ್ತೇನೆ.

ನೀನು ಹೇಗೂ ನಾನಿರುವ ಸ್ಥಳವನ್ನು ಗೊತ್ತುಮಾಡಲಾರದವ ನಾಗಿರುವೆಯೆಂದು ತಿಳಿದಿದ್ದೇನೆ; ಅದಕ್ಕಾಗಿ ಇನ್ನೂ ಎಷ್ಟೋ ಪ್ರಯತ್ನ ಗಳನ್ನು ಮಾಡುತ್ತಿರುವೆ ಎಂಬುದನ್ನೂ ಬಲ್ಲೆ; ಆದರೆ ಏತರಿಂದಲೂ ಕೃತಕಾರ್ಯನಾಗದಿರುವುದನ್ನು ಕಂಡು ತುಂಬಾ ವಿಷಾದಿಸುತ್ತೇನೆ. ಈ ಕಾಗದವನ್ನು ತರುವ ಶ್ರೀಯುತ ದೇವೇಂದ್ರವಿಜಯಮಿತ್ರನಿಂದ ನನ್ನ ನಿವಾಸಸ್ಥಳವು ಗೊತ್ತಾಗುವುದು. ಆ ದೊಡ್ಡಮನುಷ್ಯನು ನನಗೆ ಚಿಕಿತ್ಸೆಮಾಡಲು ಬಂದಿದ್ದನು. ಇಂತು,

**ಫೂಲಸಾಹೇಬ."**

ಅರಿಂದಮನು ಈ ಕಾಗದವನ್ನು ಓದಿ, ತನಗಾಗಿ ಫೂಲಸಾಹೇಬ ನಿಂದ ರಹಸ್ಯಮಯವಾದ ಮತ್ತೊಂದು ಕೌಶಲವು ಸಿದ್ಧವಾಗುತ್ತಿರು ವುದೆಂದು ಭಾವಿಸಿದನು. ಹಾಗೆಯೇ ದೇವೇಂದ್ರವಿಜಯನನ್ನು ಕುರಿತು, ತಮಗೆ ಈ ಕಾಗದವು ಎಲ್ಲಿ ಸಿಕ್ಕಿತು? ಎಂದು ಪ್ರಶ್ನೆಮಾಡಿದನು.

ದೇವೇಂದ್ರವಿಜಯ—ಈ ಕಾಗದ ನನಗೆ ಯಾವಲ್ಲಿ ಸಿಕ್ಕಿತು, ಯಾವಾಗ ಸಿಕ್ಕಿತು, ಯಾರು ಕೊಟ್ಟವರು ಇವುಗಳೊಂದನ್ನೂ ನಾನು ಕಾಣೆ. ನನ್ನ ಮಾತು ಕೇಳಿ ನೀವು ವಿಸ್ಮಯಪಡಬೇಡಿ. ನಿಮಗೆ ಎಲ್ಲ ವಿಚಾರಗಳನ್ನೂ ವಿವರವಾಗಿ ಹೇಳದಿದ್ದರೆ, ಈ ವಿಚಾರದಲ್ಲಿ ತಾವು ಏನೂ ತಿಳಿಯಲಾಗುವುದಿಲ್ಲ; ಇದರಲ್ಲಿ ಅನೇಕ ರಹಸ್ಯಗಳು ಅಡಗಿವೆ.

ಅರಿಂದಮ—ಯಾವ ಆಕ್ಷೇಪಣೆಯೂ ಇಲ್ಲದಿರುವ ಪಕ್ಷದಲ್ಲಿ ಆ ಎಲ್ಲ ಸಮಾಚಾರಗಳನ್ನೂ ತಾವು ನನಗೆ ಹೇಳಬಹುದು.

ದೇವೇಂದ್ರವಿಜಯನು ಹಿಂದಿನ ರಾತ್ರಿಯ ಸಮಾಚಾರವನ್ನೆಲ್ಲಾ ಹೇಳಲು ಉಪಕ್ರಮಿಸಿದನು; ಬಿಂದು ವಿಸರ್ಗಗಳನ್ನೂ ಮರೆಮಾಚದೆ ನಿಷ್ಕಪಟವಾಗಿ ಎಲ್ಲವನ್ನೂ ಹೇಳಿದನು. ಅವನ್ನೆಲ್ಲಾ ಇಲ್ಲಿ ಎತ್ತಿ ಬರೆಯುವುದು ನಿಷ್ಪ್ರಯೋಜನ. ಅವೆಲ್ಲವನ್ನೂ ಕೇಳಿ ಅರಿಂದಮನು ಕೊಂಚವಾದರೂ ವಿಸ್ಮಿತನಾಗಲಿಲ್ಲ; ಫೂಲಸಾಹೇಬನ ವಿಚಾರದಲ್ಲಿ ಸಕಲವೂ ಸಂಭವವೆಂದು ಅವನು ತಿಳಿದಿದ್ದನು. ದೇವೇಂದ್ರವಿಜಯನು ಅವನಿಂದ ತಪ್ಪಿಸಿಕೊಂಡು ಪ್ರಾಣ ಸಹಿತ ಹಿಂದಿರುಗಿದುದೊಂದು ಮಾತ್ರ ಆ ದೊಡ್ಡ ಚರಿತ್ರೆಯಲ್ಲೆಲ್ಲಾ ಸ್ವಲ್ಪ ವಿಸ್ಮಯಕರವಾದ ವಿಷಯ!

ಅರಿಂದಮ—ನೀವು ಇನ್ನೂ ಎರಡು ಕಾಗದಗಳ ವಿಚಾರ ಹೇಳಿದಿರಲ್ಲಾ ಅವನ್ನು ನೀವು ಕಳೆದಿರಲಾರಿರೆಂದು ಊಹಿಸುತ್ತೇನೆ?

ದೇವೇಂದ್ರವಿಜಯ—ಅವು ನನ್ನ ಹತ್ತಿರವೇ ಇವೆ, ತಾವು ನೋಡಬಹುದು ಎಂದು ಹೇಳಿ ದೇವೇಂದ್ರವಿಜಯನು ತನ್ನ ಹೆಸರಿನ ಎರಡು ಕಾಗದಗಳನ್ನೂ ಅರಿಂದಮನ ಕೈಗೆ ಕೊಟ್ಟನು. ಅರಿಂದಮನು ವ್ಯಗ್ರಚಿತ್ತನಾಗಿ ಓದುತ್ತಿದ್ದನು:—

"ದೇವೇಂದ್ರವಿಜಯ,

ನೀನು ನನ್ನನ್ನು ಕಂಡಿಲ್ಲ, ಆದರೆ ನಾನು ನಿನ್ನನ್ನು ಚೆನ್ನಾಗಿ ಬಲ್ಲೆ. ನೀನು ಭವಾನೀಪುರದವನೆಂಬುದನ್ನೂ, ನೀನು ವೇಣೀಮಾಧವಪುರಕ್ಕೆ ಏತಕ್ಕಾಗಿ ಹೋಗಿದ್ದೆ ಎಂಬುದನ್ನೂ, ಅಲ್ಲಿ ಗೋಪಾಲಚಂದ್ರನೊಡನೆ ಆಲೋಚನೆಮಾಡಿ ರೇವತಿಯ ಸಂರಕ್ಷಣೆಗೋಸ್ಕರ ಯಾವನಾದರೊಬ್ಬ ದಕ್ಷನಾದ ಪತ್ತೇದಾರನನ್ನು ನೇಮಕ ಮಾಡಬೇಕೆಂದು ಕಲಿಕತ್ತೆಗೆ ಹಿಂದಿರುಗುತ್ತಿದ್ದುದನ್ನೂ ನಾನು ಬಲ್ಲೆ. ಬಾಬೂ, ನೀನು ನನ್ನ ಆಲೋಚನೆಯನ್ನು ಕೇಳುವುದಾದರೆ, ಶಕ್ತನಾದೊಬ್ಬ ಪತ್ತೇದಾರನ ವಶಕ್ಕೆ ನಿನ್ನ ಕಾರ್ಯಭಾರವನ್ನು ಒಪ್ಪಿಸಬೇಕೆಂದಿರುವುದಾದರೆ, ಹುಗಲೀ ಜಿಲ್ಲೆಯ ಅರಿಂದಮವಸುವನ್ನು ಆ ಕಾರ್ಯದಲ್ಲಿ ಮೊದಲು ನಿಯೋಜಿಸುವ

ಪ್ರಯತ್ನಮಾಡು. ನೀನು ರೇವತಿಯನ್ನು ತುಂಬ ಪ್ರೀತಿಸುವೆಯೆಂದೂ, ಅವಳನ್ನು ನಿನಗೇ ಕೊಟ್ಟು ಮದುವೆಮಾಡುವ ಪ್ರಸ್ತಾಪವಿದ್ದಿತೆಂದೂ, ನಾನು ಬಲ್ಲೆ. ನಿಮ್ಮ ಮಾವನು ಅದಕ್ಕಾಗಿ ಬೇಕಾದಷ್ಟು ಪ್ರಯತ್ನ ಪಟ್ಟಿದ್ದನು ; ಆದರೆ ವಿಧಾತನ ಅಭಿಪ್ರಾಯವು ಮತ್ತೊಂದು ರೀತಿ. ಹಣಕ್ಕೆ ತುಂಬ ತೊಂದರೆಯಾಗಿದ್ದಕಾರಣ ನಿನಗೆ ಸ್ವಲ್ಪ ಶ್ರಮಕೊಡಬೇಕಾಯಿತು ? ವೇಣೀಮಾಧವಪುರದಲ್ಲಿ 'ಕೇಶವಬಾಬು' ಎಂಬ ಹೆಸರನ್ನು ನೀನು ಕೇಳಿರಬಹುದು ; ನಾನೇ ಆ ಕೇಶವಬಾಬು.''

ಇನ್ನೊಂದು ಹೆಂಗುಸಿನ ಕೈಬರೆಹದ್ದು ; ಹೀಗಿದ್ದಿತು :—

''ದೇವೇಂದ್ರವಿಜಯ,

ನಿನ್ನನ್ನು ಬಿಟ್ಟುಕೊಟ್ಟೆನೆಂದು ತಿಳಿಯಬೇಡ. ನೀನು ನನ್ನ ಕೈಯಿಂದ ಸದ್ಯಕ್ಕೆ ಬಿಡುಗಡೆ ಹೊಂದಿದೆ. ನಾನು ನಿನ್ನನ್ನು ಕ್ಷಮಿಸುವೆನೆಂದು ಭಾವಿಸಬೇಡ. ಗಾಳಕ್ಕೆ ಸಿಕ್ಕಿದ ಮೀನನ್ನು ಹಾಗೂ ಹೀಗೂ ಆಡಿಸಿ, ಕಡೆಗೆ ಮೇಲಕ್ಕೆ ಎತ್ತಿಹಾಕುವುದರಿಂದ ಬಹು ಸಂತೋಷವಾಗುತ್ತದೆ. ನಿನ್ನನ್ನು ಕೊಲ್ಲುವುದರಿಂದ ಅಂತಹ ಆನಂದವನ್ನು ಅನುಭವಿಸಬೇಕೆಂದು ಸಂಕಲ್ಪಮಾಡಿರುವುದರಿಂದಲೇ ನಿನ್ನನ್ನು ಈಗ ಬಿಟ್ಟುಕೊಟ್ಟಿದ್ದೇನೆ. ನೀನು ಯಾರ ಕ್ರೋಧಾಗ್ನಿಗೆ ಸಿಕ್ಕಿರುವೆ ಎಂಬುದನ್ನು ನೀನು ಇದುವರೆಗೂ ತಿಳಿದಿಲ್ಲ : ಯಾವ ದಿವಸ ಜುಮಲೆಯು ನಿನ್ನ ಹೃದಯ ರಕ್ತದಿಂದ ತನ್ನ ಕೈತೊಳೆಯುವಂತಾಗುವುದೋ ಅಂದಿನ ದಿನ, ನೀನು ನನಗೆ ಮಾಡಿದ ಅಪಮಾನ, ನಿನ್ನ ಆ ತಿರಸ್ಕಾರ, ಆ ದ್ವೇಷಗಳಿಗೆಲ್ಲಾ ಸರಿಯಾದ ಪ್ರತೀಕಾರವಾಗುವುದು. ಉಪೇಕ್ಷಿತಳಾದ ರಮಣಿಯು ಕ್ರೂರವಾದ ಸರ್ಪಕ್ಕಿಂತಲೂ ಭಯಂಕರಳು, ಎಂಬುದನ್ನು ಅಂದೇ ತಿಳಿಯುವೆ.

**ಸರ್ಪಿಣೀ ಜುಮಲೆ.''**

ಕೇಶವಬಾಬು ಮತ್ತೂ ಫೂಲಸಾಹೇಬರಿಗೆ ಸಂಬಂಧಿಸಿದ ಕಾರ್ಯಕಲಾಪಗಳೆಲ್ಲವೂ ಒಬ್ಬನದೇ ಎಂಬುದನ್ನು ಅರಿಂದಮನು ಮೊದಲೇ ತಿಳಿದುಕೊಂಡಿದ್ದನು. ಇದರಲ್ಲಿ ಆಶ್ಚರ್ಯಕರವಾದ ಸಂಗತಿಯಾಗಲೀ ಹೊಸಪರಿಯಾಗಲೀ ಯಾವುದೂ ಕಾಣಿಸಲಿಲ್ಲ. ಕಾಗದವನ್ನು ಓದಿ ಮುಗಿಯಿಸಿ ಅರಿಂದಮನು,—ದೇವೇಂದ್ರಬಾಬೂ, ನಿಮ್ಮ ಹಿಂದಣ ಜನ್ಮದ

ಕರ್ಮಫಲವು ಬಹು ಒಳ್ಳೆಯದು ; ಆದರಿಂದಲೇ ನೀವು ಇಂತಹ ಕೊಲೆ ಪಾತಕಿಗಳ ಕೈಯಿಂದ ಪ್ರಾಣದೊಂದಿಗೆ ನಿಮ್ಮ ಶರೀರವನ್ನು ರಕ್ಷಿಸಿ ಕೊಂಡು ಬಂದಿರಿ, ಎಂದು ಮಂದಹಾಸದಿಂದ ಹೇಳಿದನು.

ದೇವೇಂದ್ರವಿಜಯ—ತಾವು ಅವರನ್ನು ಬಲ್ಲಿರಾ ?

ಅರಿಂದಮ—ಇಂತಹ ಮಹಾತ್ಮರೊಬ್ಬಿಬ್ಬರನ್ನು ಅರಿಯಲಾರ ದವನಾದರೆ ನನ್ನ ಹೊಟ್ಟೆ ಹೊರೆಯುವ ಕೆಲಸವು ಹೇಗಾಗಬೇಕು. ರೇವತಿಯ ಚಿಕ್ಕಪ್ಪನಾದ ಗೋಪಾಲಬಾಬುವಿನ ಸ್ವಭಾವ ಚರಿತ್ರೆಯ ವಿಚಾರವಾಗಿ ನಿಮಗೇನಾದರೂ ತಿಳಿದಿದೆಯೇ ?

ದೇವೇಂದ್ರ—ಅವನು ಒಳ್ಳೆಯ ಮನುಷ್ಯ; ಅಲ್ಲಿನವರೆಲ್ಲರೂ ಆತನನ್ನು ತುಂಬಾ ಗೌರವಿಸುತ್ತಿರುವರು.

ಅರಿಂದಮ—ತಾವು ನನ್ನ ಸಂಗಡ ನಾಲ್ಕಾರು ದಿನ ಇದ್ದು, ನನಗೆ ಸ್ವಲ್ಪ ಸಹಾಯಮಾಡುವ ಪಕ್ಷದಲ್ಲಿ, ನಾನು ರೇವತಿಯ ರಕ್ಷಣೆಗೆ ಸನ್ನಾಹ ಕಲ್ಪಿಸಿಕೊಡಬಲ್ಲೆನು. ಸಮ್ಮತವುಂಟೆ?

ದೇವೇಂದ್ರ—ನನ್ನ ಆಕ್ಷೇಪವೇನೂ ಇಲ್ಲ ; ಆದರೆ ನನ್ನಿಂದ ನಿಮಗೆ ಅಷ್ಟು ದೊಡ್ಡ ಸಹಾಯವಾಗುವುದೆಂಬ ಭರವಸೆಯಿಲ್ಲ.

ಅರಿಂದಮ—(ನಗುತ್ತಾ) ಯಾವ ಮನೆಯೊಳಗೆ ನಿನ್ನೆಯ ದಿನ ಶುಭಕರವಾದ ರಾತ್ರಿಯನ್ನು ನೀವು ಕಳೆದಿರೋ ಅಲ್ಲಿಗೆ ನನ್ನನ್ನು ಒಂದು ಸಲ ಕರೆದುಕೊಂಡು ಹೋಗುತ್ತೀರಾ? ದಾರಿ ಗೊತ್ತಿದೆಯೆ ?

ದೇವೇಂದ್ರ—ಇಲ್ಲ, ರಾತ್ರಿ ವನಮಧ್ಯದಲ್ಲಿ ಹೋದದ್ದು ; ಈಗ ಅದೇ ದಾರಿಯನ್ನು ಗುರ್ತಿಸುವುದು ಕಷ್ಟ. ಆದರೂ ಪ್ರಯತ್ನಪಡುವ ದಾದರೆ ಅಲ್ಲಿಗೆ ನಿಮ್ಮನ್ನು ಕರೆದುಕೊಂಡು ಹೋದೇನು.

ಅರಿಂದಮ—ಸರಿ, ನಡೆಯಿರಿ, ಇಂದು ಊಟವಾದ ಮೇಲೆ ಹೊರಟುಬಿಡೋಣ. ಹೇಗಾದರೂ ಆಗಲಿ, ಇಂದು ಅಲ್ಲಿಗೆ ಸೇರಲೇ ಬೇಕು.

ಅನಂತರ ಅವರವರಿಗೆ ಫೂಲಸಾಹೇಬ ಮತ್ತೂ ರೇವತಿಯ ವಿಚಾರವಾಗಿ ಅನೇಕ ಮಾತುಕತೆಗಳಾದುವು. ಅವೆಲ್ಲವನ್ನೂ ಎತ್ತಿ ಬರೆವುದರಿಂದ ಇದು ಬಹು ವಿಸ್ತರಗೊಳ್ಳುವುದೆಂದು ತೋರುತ್ತದೆ. ಅರಿಂದಮನು ಹೇಳಿದ ಫೂಲಸಾಹೇಬನ ಅತ್ಯಾಶ್ಚರ್ಯಕರವಾದ ಮತ್ತೂ ಅಲೌಕಿಕವಾದ ಗುಣವರ್ಣನೆಯನ್ನು ಕೇಳಿ ದೇವೇಂದ್ರವಿಜಯನು ಅಸಂಭವವೆಂದು ಭಾವಿಸಿದನಲ್ಲದೆ ವಿಸ್ಮಿತನೂ ಚಮುಕಿತನೂ ಆದನು. ಹಾಗೆಯೇ ಫೂಲಸಾಹೇಬನ ಮತ್ತೂ ಜುಮಲೆಯರ ಮಾನಸಮೂರ್ತಿಯು ಅವನ ಧಾರಣಾಚಿತ್ರದಲ್ಲಿ ಭಯಂಕರವಾದ ಅಸುರಸ್ವಭಾವವುಳ್ಳವುಗಳಾಗಿ ಉಜ್ವಲತರವಾಗಿ ಚಿತ್ರಿತವಾಯಿತು. ಅರಿಂದಮನು ಆಗ ದೇವೇಂದ್ರವಿಜಯನಿಗೆ ರೇವತಿಯ ವಿಚಾರಗಳೊಂದನ್ನೂ ಬಹಿರಂಗಪಡಿಸಲಿಲ್ಲ. ಅದಕ್ಕೆ ಬದಲಾಗಿ ದೇವೇಂದ್ರವಿಜಯನಿಂದ ರೇವತಿಯ ಅಪಹರಣಸಂಬಂಧವಾದ ಅನೇಕ ವಿಷಯಗಳನ್ನು ಕೇಳಿ ತಿಳಿದುಕೊಂಡನು.

---

## ಮೂರನೆಯ ಪರಿಚ್ಛೇದ

### ಆಶ್ಚರ್ಯಕರವಾದ ಅಂತರ್ಧಾನ

ದೇವೇಂದ್ರವಿಜಯನು ಅಂದು ಅರಿಂದಮನಿಂದ ಪ್ರಾರ್ಥಿತನಾಗಿ ಅವರ ಮನೆಯಲ್ಲಿಯೇ ಆಹಾರಾದಿಗಳನ್ನು ಮಾಡಿಕೊಂಡನು. ಊಟವಾದಮೇಲೆ ಸ್ವಲ್ಪ ವಿಶ್ರಮಿಸಿಕೊಂಡನಂತರ ಇಬ್ಬರೂ ಫೂಲಸಾಹೇಬನ ಸಂದರ್ಶನಕ್ಕೋಸ್ಕರ ಹೊರಟರು. ಅವರು ಎಷ್ಟು ಬೇಗನೆ ಫೂಲಸಾಹೇಬನನ್ನು ನೋಡಬಹುದೆಂದು ಭಾವಿಸಿದ್ದರೋ ಅಷ್ಟರಮಟ್ಟಿಗೆ ಕಾರ್ಯತಃ ಆಗಲಿಲ್ಲ. ದೇವೇಂದ್ರವಿಜಯನಿಗೆ ಅನೇಕಾವರ್ತಿ ಪಾರಿತಪ್ಪಿತು. ಸುಮಾರು ಹೊತ್ತು ಮುಳುಗುವ ಹೊತ್ತಿಗೆ ಅವರು ಫೂಲಸಾಹೇಬನ ಆ ತೋಟದ ಮನೆಯ ಬಳಿಗೆ ಬಂದರು. ಅತ್ತಕಡೆಯಿಂದ ಒಬ್ಬ ರೈತನು ಬರುತ್ತಿದ್ದನು. ಅರಿಂದಮನು ಅವನನ್ನು ಕೂಗಿ, ಈ ತೋಟವು ಯಾರದು? ಎಂದು ಕೇಳಿದನು.

ರೈತ—ಜಾನಕೀನಾಥವಸುಗಳದಲ್ಲವೆ!

ಅರಿಂದಮನು ಸ್ವಲ್ಪ ಆಲೋಚಿಸತೊಡಗಿ, ಹಾಗೆಯೋ, ಯಾವ ಜಾನಕೀವಸು? ಅವರಿರುವುದು ಎಲ್ಲಿ? ಎಂದು ಪ್ರಶ್ನೆಮಾಡಿದನು.

ರೈತ—ಆತನು ಸತ್ತುಹೋಗಿದ್ದಾನೆ; ಅವರ ವಾಸಸ್ಥಳವು ವೇಣೀಮಾಧವಪುರ. ಅವರೇ ನಮ್ಮ ಜಮೀನ್‌ದಾರರು, ಎಂದು ಹೇಳಿ ರೈತನು ಹೊರಟುಹೋದನು.

ಅರಿಂದಮನು ದೇವೇಂದ್ರವಿಜಯನನ್ನು ಕುರಿತು—ರೇವತಿಯ ತಂದೆಯ ಹೆಸರು ಜಾನಕೀನಾಥವಸು ಎಂದಲ್ಲವೆ ದೇವೇಂದ್ರಬಾಬು? ರೇವತಿಯ ಅಪಹರಣದ ಸಂಬಂಧವಾಗಿ ಅನೇಕ ರಹಸ್ಯಗಳು ಅಡಗಿವೆ ಎಂದು ತೋರುತ್ತದೆ. ಈಗ ಅದನ್ನು ತಾವೂ ಕೂಡ ಕೊಂಚ ಕೊಂಚ ತಿಳಿದಿರಬಹುದು. ರೇವತಿಯ ಚಿಕ್ಕಪ್ಪನಾದ ಗೋಪಾಲವಸುವು ಎಷ್ಟು ದೂರ ಒಳ್ಳೆಯವನೆಂದು ತಾವು ತಿಳಿದಿರುವಿರೋ ಅಷ್ಟು ದೂರ ಆತನು ಒಳ್ಳೆಯವನಾಗಿರಕೂಡದೆಂಬುದೇ ಈಶ್ವರನ ಇಚ್ಛೆಯಾಗಿರಬೇಕೆಂದು ತೋರುತ್ತದೆ. ಎಂದಾದರೊಂದು ದಿನ ಅವನು ಅರಿಂದಮನೆಂಬ ಒರೆಗಲ್ಲಿಗೆ ಸಿಕ್ಕಿದಾಗ ಹಿತ್ತಾಳೆಯೋ ಚಿನ್ನವೋ ಗೊತ್ತಾಗುವುದು, ಎಂದನು.

ಆಗಲೇ ಇಬ್ಬರೂ ತೋಟದೊಳಕ್ಕೆ ಪ್ರವೇಶಿಸಿದರು. ಸರಿಯಾಗಿ ನೋಡಿಕೊಳ್ಳುವರಿಲ್ಲದೆ ಉದ್ಯಾನವು ಅರಣ್ಯದ ಹಾಗೆ ಭಯಂಕರವಾಗಿದೆ; ಕಾಡುಗಿಡ ಮರಗಳಿಂದಲೂ, ಎಲೆ ಬಳ್ಳಿಗಳಿಂದಲೂ, ಮುಳ್ಳು ಪೊದೆಗಳಿಂದಲೂ ಆ ಉದ್ಯಾನವು ಮನುಷ್ಯನು ಸಾಧಾರಣವಾಗಿ ಹೊಗುವುದಕ್ಕಾಗದಹಾಗಾಗಿದೆ. ಸ್ವಲ್ಪದೂರ ಮುಂದರಿದು ಹೋದ ಮೇಲೆ ಮರಗಳ ಮೇಲ್ಭಾಗದಲ್ಲಿ ಆ ತೋಟದ ಮನೆಯ ಮೇಲ್ಭಾವಣಿಯ ಕೊಂಚ ಭಾಗವು ಕಾಣಿಸಿತು. ಇಬ್ಬರೂ ಬೇಗ ಬೇಗನೆ ಹೊರಟರು. ಪಶ್ಚಿಮಕಡೆ, ಮನೆಯ ಎರಡನೆಯ ಅಂತಸ್ತಿನ ಒಂದು ಕಿಟಕಿ ತೆರದಿದ್ದುದನ್ನು ಅವರು ಸ್ವಲ್ಪ ದೂರದಿಂದಲೇ ಕಂಡರು. ಅಲ್ಲಿ ರೂಪಲಾವಣ್ಯಮಯಿಯೂ ಮುಕ್ತಕೇಶಿಯೂ ಆದ ನಾರೀಮೂರ್ತಿಯು ನಿಂತಿರು

ವುದನ್ನೂ ನೋಡಿದರು. ಅರಿಂದಮನು ಅವಳನ್ನು ನೋಡಿ ದೂರದಿಂದಲೇ ಗುರ್ತಿಸಿದನು. ಇವಳೇ ಆ ಮತಿಬೀಬಿ—ಸ್ವಾಮಿಹಂತ್ರಿ, ಮಾನವ ರೂಪದ ದಾನವಿ, ವಿಧಾತನ ಅತ್ಯದ್ಭುತವಾದೊಂದು ಸೃಷ್ಟಿ. ದೇವೇಂದ್ರ ವಿಜಯನೂ ಅವಳನ್ನು ಗುರ್ತಿಸಿದನು. ಗುರ್ತಿಸಿದವನೇ ನಡುಗಿದನು. ಅವನು ಅರಿಂದಮನನ್ನು ಕುರಿತು 'ಮಹಾಶಯ, ಇವಳೇ ಆ ಡಾಕಿನೀ, ನಾನು ಇವಳ ಮಾತಿನಿಂದಲೇ ಮೋಸಹೋದದ್ದು?' ಎಂದು ಹೇಳಿದನು.

ಅರಿಂದಮ—'ಸರಿ, ನಾನು ಇವಳನ್ನು ಚೆನ್ನಾಗಿ ಬಲ್ಲೆ; ಈಗ ಒಂದು ಕೆಲಸಮಾಡೋಣಾಗಲಿ, ಈಗ ನಾವು ಈ ಕಡೆಯಿಂದ ಹೋಗದೆ ಆ ಉತ್ತರದಿಕ್ಕಿನ ಹಾದಿ ಹಿಡಿದು ಹೋಗೋಣ; ಹಾಗೆ ಮಾಡಿದರೆ ಜುಮಲೆಯು ನಮ್ಮನ್ನು ಕಾಣಲಾರಳು; ಅಲ್ಲದೆ ನಾವೂ ಕೂಡ ಯಾರ ದೃಷ್ಟಿಗೂ ಬೀಳದೆ ಮನೆಯೊಳಕ್ಕೆ ಹೋಗಬಹುದು, ಎಂದು ಮೆಲ್ಲಗೆ ಹೇಳಿದನು.

ಅರಿಂದಮನು ಹೇಳಿದಂತೆ ಕೆಲಸವಾಯಿತು. ಹೇಗೆ ಮಾಡಿದರೆ ಜುಮಲೆಯು ಅವರನ್ನು ಕಾಣುವುದಿಲ್ಲವೋ ಆ ರೀತಿಯಲ್ಲಿ ಅವರು ಮತ್ತೊಂದು ಕಡೆಯಿಂದ ಮನೆಯೊಳಕ್ಕೆ ಪ್ರವೇಶ ಮಾಡಿದರು. ಹಾಗೆಯೇ ನೇರವಾಗಿ ಮೇಲಕ್ಕೆ ಹತ್ತಿ ಯಾವ ಕೊಠಡಿಯಲ್ಲಿ ಜುಮಲೆಯು ನಿಂತಿದ್ದಳೋ ಆ ಕೊಠಡಿಯೊಳಕ್ಕೆ ನುಗ್ಗಿದರು. ಅರಿಂದಮನು ಜುಮಲೆಯನ್ನು ಹಿಡಿಯುವುದಕ್ಕೆ ಹೋದಹಾಗೆಲ್ಲ ಜುಮಲೆಯು ಪಕ್ಕದ ಕೊಠಡಿಗೆ ಓಡಿಹೋದಳು. ಹಾಗೆಯೇ ಅಲ್ಲಿಂದ ಹೊರಕ್ಕೆ ಬಂದು ಹೊರಗಡೆ ಕೈಸಾಲೆಗೆ ನುಗ್ಗಿ ಕೊಠಡಿಯಿಂದ ಕೊಠಡಿಗೆ ಓಡ ತೊಡಗಿದಳು. ಅರಿಂದಮನೂ ಕೂಡ ಅವಳ ಹಿಂದೆಯೇ ಓಡತೊಡ ಗಿದನು. ಕಟ್ಟಕಡೆಗೆ ಜುಮಲೆಯು ಒಂದು ಕೊಠಡಿಯೊಳಕ್ಕೆ ಓಡಿ ಹೋಗಿ, ಬಾಗಿಲು ಮುಚ್ಚಿ ಒಳಗಿನಿಂದ ಅಗಳಿಹಾಕಿದಳು. ಅದೇ ಮುಹೂರ್ತದಲ್ಲಿಯೇ ಅರಿಂದಮನು ಆ ಬಾಗಿಲನ್ನು ಒದ್ದ ಜೋರಿಗೆ ಆ ಬಾಗಿಲು ಆ ಒಂದೇ ಏಟಿಗೆ ತಾಳಲಾರದೆ ಹೋಗಿ ವಿಕಟತರವಾಗಿ

ಶಬ್ದಮಾಡುತ್ತ ಒಡೆದು ಬಿದ್ದಿತು. ಅರಿಂದಮನು ಕೊಠಡಿಯೊಳಕ್ಕೆ ಒಂದೇ ಹಾರು ಹಾರಿ ಕುಪ್ಪಳಿಸಿದನು. ಎಂತಹ ಆಶ್ಚರ್ಯ! ಅಲ್ಲಿ ಯಾರೂ ಇಲ್ಲವಲ್ಲ! ಜುಮಲೆಯೂ ಇಲ್ಲ. ಅಥವಾ ಅವಳಿದ್ದ ಕುರುಹುಗಳೂ ಇಲ್ಲ. ಆ ಕೊಠಡಿಯಿಂದ ಹೊರಕ್ಕೆ ಹೋಗುವುದಕ್ಕೆ ಮತ್ತೆ ಯಾವ ಬಾಗಿಲೂ ಇರಲಿಲ್ಲ; ಇದ್ದ ಒಂದೆರಡು ಕಿಟಕಿಗಳಿಗೂ ಕಬ್ಬಿಣದ ಸಲಾಕಿಗಳನ್ನು ಹಾಕಿದೆ; ಆ ಸಲಾಕಿಗಳಾದರೂ ಬಹು ಭದ್ರತರವಾಗಿ ಬಿಗಿಸಲ್ಪಟ್ಟಿವೆ. ಅರಿಂದಮನು ಅವೆಲ್ಲವನ್ನೂ ಚೆನ್ನಾಗಿ ಅಲ್ಲಾಡಿಸಿ ನೋಡಿ ಪರೀಕ್ಷಿಸಿ ದಿಕ್ಕುತೋರದವನಾದನು; ಅರಿಂದಮನಿಗೆ ಜುಮಲೆಯ ಪೈಶಾಚತ್ವದ ವಿಚಾರದಲ್ಲಿ ಯಾವುದೊಂದು ಸಂದೇಹವೂ ಉಳಿಯಲಿಲ್ಲ. ಒಂದೊಂದಾಗಿ ಆತನು ಕೊಠಡಿಯ ನಾಲ್ಕು ಕಡೆಗಳನ್ನೂ ಪರೀಕ್ಷಿಸತೊಡಗಿದನು. ಜುಮಲೆಯಿರುವ ಸ್ಥಳ ತಿಳಿಯಲಿಲ್ಲ. ಕೊಠಡಿಯಲ್ಲಿ ಅಂತಹ ಯಾವ ಪದಾರ್ಥಗಳೂ ಇರಲಿಲ್ಲ. ಒಂದುಕಡೆ ಒಂದು ಅಲಮಾರು, ಒಂದು ಸಣ್ಣ ಮಂಚದ ಮೇಲೆ ಸಣ್ಣದೊಂದು ಹಾಸುಗೆ—ಇಷ್ಟುಮಾತ್ರ ಅಲ್ಲಿದ್ದುವು. ಅಲಮಾರು ಸ್ವಲ್ಪ ತೆರೆದಿತ್ತು; ಅದನ್ನು ಆತನು ಚೆನ್ನಾಗಿ ತೆರೆದುನೋಡಿದನು. ಅದರಲ್ಲಿಯೂ ಜುಮಲೆಯು ಕಂಡುಬರಲಿಲ್ಲ; ಅರಿಂದಮನಿಗೆ ಏನೂ ತೋರದ ಹಾಗಾಗಿ ಅಲ್ಲಿಯೇ ನಿಂತು ಭೂಮ್ಯಾಕಾಶಗಳನ್ನು ನೋಡತೊಡಗಿದನು. ಆಗ ಜುಮಲೆಯ ಮನುಷ್ಯತ್ವದ ವಿಷಯದಲ್ಲಿ ಆತನಿಗೆ ತುಂಬ ಸಂಶಯವು ಅಂಕುರಿಸಿತು.

ಎಂದೂ ಕಾಣದ ರಹಸ್ಯಪೂರ್ಣವಾದ ಅದ್ಭುತ ನಾಟಕದ ಅಲೌಕಿಕ ದೃಶ್ಯವೊಂದು ಇಲ್ಲಿ ಅಭಿನಯಿಸಲ್ಪಟ್ಟ ಹಾಗೆಯೇ, ಅದೇ ಸಮಯದಲ್ಲಿ, ಇದೇ ತರದ ಮತ್ತೊಂದು ಅಭಿನಯವು ಇನ್ನೊಂದು ಕಡೆ ನಡೆಯುತ್ತಿದ್ದಿತು.

———

# ನಾಲ್ಕನೆಯ ಪರಿಚ್ಛೇದ

## ಪಾತಾಳ ಪ್ರವೇಶ

ಜುಮುಲೆಯನ್ನು ದಸ್ತಗಿರಿಮಾಡುವುದಕ್ಕಾಗಿ ಅರಿಂದಮನು ಹೊರಟ ಸಮಯದಲ್ಲಿ ದೇವೇಂದ್ರವಿಜಯನು ಒಬ್ಬ ಹೆಂಗಸನ್ನು ಸೆರೆ ಹಿಡಿಯುವುದಕ್ಕೆ ತಮ್ಮಂತಹ ಇಬ್ಬರು ವೀರಪುರುಷರು ಪ್ರಯತ್ನಪರರಾಗುವುದು ನಾಚುಗೆಗೇಡೆಂದೂ, ತನ್ನ ಸಹಾಯವು ಅನಾವಶ್ಯಕವೆಂದೂ ಭಾವಿಸಿ ಅಲ್ಲಿಯೇ ನಿಂತುಕೊಂಡಿದ್ದನು. ಹತಭಾಗ್ಯನಾದ ದೇವೇಂದ್ರವಿಜಯನು ಆ "ಒಬ್ಬ ಹೆಂಗಸಿನಿಂದ" ಅಷ್ಟೊಂದು ಅನುಭವವನ್ನು ಹೊಂದಿದ್ದೂ ಕೂಡ, ಅವಳು ಸಾಮಾನ್ಯಳಾದೊಬ್ಬ ಹೆಂಗಸಿನಂತೆ ಅಲ್ಲ; ಅವಳು ಮನುಷ್ಯರೂಪದ ರಾಕ್ಷಸಿ; ರಾಕ್ಷಸಿಗಿಂತಲೂ ಭಯಂಕರಳು ಎಂಬುದನ್ನು ತಿಳಿಯಲಾರದೆ ಇದ್ದನು. ಅರಿಂದಮನು ಜುಮುಲೆಯನ್ನು ನಿಜವಾಗಿಯೂ ದಸ್ತಗಿರಿಮಾಡುತ್ತಾನೆ; ಅಷ್ಟರೊಳಗಾಗಿ ತಾನು ಆ ಫೂಲಸಾಹೇಬನನ್ನು ಹಿಡಿದುಬಿಟ್ಟರೆ ಒಂದು ಕೆಲಸವು ಸಂಪೂರ್ಣವಾಗಿ ಮುಗಿದಂತಾಗಿ ಇದರಿಂದ ಅರಿಂದಮನಿಗೂ ಸ್ವಲ್ಪ ಮಟ್ಟಿಗೆ ಸಹಾಯವಾದೀತು. ತನ್ನ ಸಹಾಯವನ್ನು ಕೋರಿಯೇ ಅಲ್ಲವೇ ಅರಿಂದಮನು ತನ್ನನ್ನು ಇಲ್ಲಿಗೆ ಕರೆದುಕೊಂಡು ಬಂದದ್ದು. ಇಂತಹ ಸಂದರ್ಭದಲ್ಲಿ ತಾನು ಆತನಿಗೆ ಸಹಾಯಮಾಡಿದಂತೆಯೂ ಆಗುತ್ತದೆ—ಎಂದು ಮುಂತಾಗಿ ದೇವೇಂದ್ರವಿಜಯನು ಆಲೋಚಿಸಿ, ತಾನು ಫೂಲಸಾಹೇಬನನ್ನು ಹುಡುಕುವುದಕ್ಕೆ ಹೊರಟನು.

ಆ ಸಮಯದಲ್ಲಿ, ಕೆಳಗಡೆ, ಯಾರದೋ ಹೆಜ್ಜೆಯ ಸದ್ದಾಯಿತು. ಕೂಡಲೆ ಅನುಸಂಧಾನಮಾಡುತ್ತಿದ್ದ ದೇವೇಂದ್ರವಿಜಯನು ತಾನು ಅರಸುತ್ತಿದ್ದ ಫೂಲಸಾಹೇಬನಿಗೆ ಸರಿಯಾದ ಪ್ರತೀಕಾರಮಾಡಬೇಕೆಂಬ ಆತುರದಿಂದ ಕೆಳಕ್ಕೆ ಇಳಿದು ಬಂದನು; ಅಲ್ಲಿ ನೋಡಿದನು. ಕಳೆದ ರಾತ್ರಿಯಲ್ಲಿ ಮಹಾರೋಗಿಯಂತಿದ್ದ ದೊಡ್ಡಮನುಷ್ಯನು ಇವನ ಕಡೆ ನೋಡದೆ ಒಂದು ಕೊಠಡಿಯೊಳಕ್ಕೆ ಹೋದನು. ಇದನ್ನು

ನೋಡಿದ ದೇವೇಂದ್ರವಿಜಯನು ಉತ್ತರಕ್ಷಣದಲ್ಲಿಯೇ ಓಡಿಹೋಗಿ, ಆ ಕೊಠಡಿಯ ಬಾಗಿಲ ಬಳಿ ನಿಂತುಕೊಂಡನು.

ದೇವೇಂದ್ರವಿಜಯನು ಹಠಾತ್ತಾಗಿ ಇದಿರಿಗೆ ಬಂದದ್ದನ್ನು ಕಂಡು ಫೂಲಸಾಹೇಬನು ಕೊಂಚವಾದರೂ ವಿಸ್ಮಯಪಡಲಿಲ್ಲ. ದೇವೇಂದ್ರ ವಿಜಯನ ಮುಖವನ್ನು ನೋಡಿ ಮಂದಹಾಸದೊಂದಿಗೆ, ಏನಯ್ಯಾ, ದೇವೇಂದ್ರಬಾಬು, ಪುನಃ ಬಂದುದು ಯಾವ ಉದ್ದೇಶದಿಂದ? ಎಂದು ಕೇಳಿದನು.

ದೇವೇಂದ್ರವಿಜಯನು—ಪುನಃ ಬಂದುದರ ಉದ್ದೇಶವೆ? ಅದು ಈಗಲೇ ತಿಳಿಯಬರುವುದು; ಪಾತಕಿ, ನನ್ನಿಂದ ಸರಿಯಾದ ಬುದ್ಧಿಗಲಿಯುವೆ, ಎಂದು ಸಿಡಿಲಿನಂತೆ ಗರ್ಜಿಸಿದನು.

ಫೂಲಸಾಹೇಬನು ಮೊದಲಿನಂತೆಯೇ ಮಂದಹಾಸದೊಡನೆ,—ಸರಿ, ನೀನು ನನಗೆ ಬುದ್ಧಿಗಲಿಸುವುದಕ್ಕಾಗಿಯೇ ಬಂದೆಯೇನು? ಭಲಾ, ಭಲಾ? ಕೇಳಿ ಬಹು ಸಂತೋಷವಾಯಿತು; ಒಳ್ಳೆಯದು, ಬುದ್ಧಿಗಲಿ ಸಲು ನೀನು ಒಬ್ಬನೇ ಬಂದಿರುವೆಯೋ ಅಥವಾ ನಿನ್ನ ಸಂಗಡ ಇನ್ನು ಯಾರಾದರೂ ಬಂದಿರುವರೋ? ಅರಿಂದಮನು ಬರಲಿಲ್ಲವೆ? ಎಂದು ಕೇಳಿದನು.

ದೇವೇಂದ್ರವಿಜಯನು ಆ ಮಾತಿಗೆ ಕಿವಿಗೊಡದೆ ಜೇಬಿನಿಂದ ಪಿಸ್ತೂಲನ್ನು ಹೊರಕ್ಕೆ ತೆಗೆದನು. ಆ ಪಿಸ್ತೂಲನ್ನು ಅವನು ಅರಿಂದಮ ನಿಂದ ಕೇಳಿ ತೆಗೆದುಕೊಂಡಿದ್ದನು. ಆ ಪಿಸ್ತೂಲನ್ನು ಫೂಲಸಾಹೇಬನ ತಲೆಗೆ ಗುರಿಯಿಟ್ಟು, ಓಡಿಹೋಗುವ ಪ್ರಯತ್ನ ಮಾಡುವೆಯಾದರೆ, ಇದರಿಂದ ನಿನ್ನ ತಲೆಯನ್ನು ಒಡೆದು ಹಾಕುತ್ತೇನೆ, ಎಂದು ಹೇಳಿದನು.

ಫೂಲಸಾಹೇಬನು ಸ್ವಲ್ಪವಾದರೂ ಭಯಪಡದೆ ಮೊದಲಿನಂತೆ ನಗೆಮೊಗದಿಂದ, ಇಲ್ಲ, ಏತಕ್ಕೆ ಓಡಲಿ? ನಿನ್ನ ಭಯದಿಂದಲೆ? ಅಥವಾ ನಿನ್ನ ಪಿಸ್ತೂಲಿನ ಭಯದಿಂದಲೋ? ನನ್ನನ್ನು ಸೆರೆಹಿಡಿಯ ಬೇಕೆಂದಿದ್ದೀಯಾ? ಎಂದು ಹೇಳಿದನು.

ದೇವೇಂದ್ರ—ಹೂಂ.

ಫೂಲ.—ಯಾವಾಗ ?

ದೇವೇಂದ್ರ—ಈಗಲೇ.

ಫೂಲಸಾಹೇಬನು ನಗುವುದಕ್ಕೆ ಉಪಕ್ರಮಿಸಿದನು—ಅದೇ ರೀತಿಯಾದ ಪರಿಹಾಸಕರವಾದ ಮಂದಹಾಸ! ಹೇಳಿದನು,—ನೀನು ಏನೆಂದು ತಿಳಿದಿರುವೆ, ನೀನು ನನ್ನ ಕೈಗೆ ಕೋಳವನ್ನು ತೊಡಿಸತಕ್ಕವನು, ನಾನು ಹೀಗೆಯೇ ಸಾಧು ಪ್ರಾಣಿಯ ಹಾಗೆ ಸುಮ್ಮನೆ ನಿಂತು ಕೋಳಕ್ಕೆ ಕೈನೀಡತಕ್ಕವನು, ಎಂದುಕೊಂಡಿದ್ದೀಯಾ?

ದೇವೇಂದ್ರವಿಜಯ—ನೀನು ಹಾಗೆಯೇ ಮಾಡಬೇಕಾಗುವುದು.

ಫೂಲಸಾಹೇಬ—ಒಂದು ವೇಳೆ ಹಾಗೆ ಮಾಡದಿದ್ದರೆ?

ದೇವೇಂದ್ರ—ನಿನ್ನನ್ನು ಹೊಡೆದುಹಾಕುತ್ತೇನೆ.

ಫೂಲಸಾಹೇಬ—ಬೇಡ, ಅಷ್ಟೊಂದು ಪ್ರಯಾಸಪಡಬೇಕಾದ್ದಿಲ್ಲ. ಇದೋ ನಾನು ಈ ಸ್ಥಳದಿಂದ ಕದಲುವುದಿಲ್ಲ; ನಿನ್ನ ಕೋರಿಕೆಯನ್ನು ಕೈಗೂಡಿಸಿಕೋ. ಆದರೆ, ದೇವೇಂದ್ರ, ನಾನೇನೋ ಅಲುಗುವುದಿಲ್ಲ; ನೀನು ನನ್ನನ್ನು ಈ ಸ್ಥಳದಿಂದ ಒಂದು ಕೂದಲ ಎಳೆಯಷ್ಟಾದರೂ ಕದಲಿಸಬಲ್ಲೆಯೆಂದು ನನಗೆ ತೋರುವುದಿಲ್ಲ.

ದೇವೇಂದ್ರವಿಜಯನು, ಅದರ ಸನ್ನಾಹಗಳು ನನಗಿರಲಿ, ಎಂದು ಹೇಳಿ ಫೂಲಸಾಹೇಬನನ್ನು ಹಿಡಿವುದಕ್ಕೆಂದು ಆತುರದಿಂದ ಮುಂದರಿದನು. ಹಠಾತ್ತಾಗಿ ವಿಕಟವಾದ ಒಂದು ಶಬ್ದವಾಯಿತು. ಅದರ ಸಂಗಡಲೇ ಎವೆಯಿಕ್ಕುವುದರೊಳಗಾಗಿ ದೇವೇಂದ್ರವಿಜಯನ ಶರೀರವೆಲ್ಲವೂ, ಆ ಸ್ಥಳದಿಂದ, ಭೂಮಿಯೊಳಕ್ಕೆ ಅದೃಶ್ಯವಾಗಿ ಹೋಯಿತು.

ಫೂಲಸಾಹೇಬನು ನಗುತ ನಗುತ ಕೊಠಡಿಯಿಂದ ಹೊರಗೆ ಬಂದನು.

---

*

# ಐದನೆಯ ಪರಿಚ್ಛೇದ

## ಸಿಂಹ ಮತ್ತು ಶಾರ್ದೂಲ

ದೇವೇಂದ್ರವಿಜಯನು ಹಠಾತ್ತಾಗಿ ಪಾತಾಳ ಪ್ರವೇಶಮಾಡಿದುದನ್ನೂ ತಾನು ಗೆದ್ದ ಸಂಗತಿಯನ್ನೂ ಜುಮುಲೆಗೆ ಹೇಳುವುದಕ್ಕೋಸ್ಕರ ಫೂಲಸಾಹೇಬನು ಅವಸರವಸರವಾಗಿ ಉಪ್ಪರಿಗೆಗೆ ಹತ್ತಿ ಹೋಗಿ, ಯಾವ ಕೊಠಡಿಯಲ್ಲಿ ಜುಮುಲೆಯು ಅರಿಂದಮನನ್ನು ಒಂದೇ ತಡೆವೆಗೆ ಮಂಕನನ್ನಾಗಿ ಮಾಡಿ ಮಾಯವಾಗಿದ್ದಳೋ ಅದೇ ಕೊಠಡಿಯ ಕಡೆಗೆ ಹೋದನು. ಅದೇ ಜುಮುಲೆಯು ಮಲಗುವ ಮನೆ. ಅರಿಂದಮನೂ ದೇವೇಂದ್ರವಿಜಯನೂ ಮನೆಯೊಳಕ್ಕೆ ಪ್ರವೇಶ ಮಾಡಿದಾಗ ಫೂಲಸಾಹೇಬನು ಮನೆಯಲ್ಲಿರಲಿಲ್ಲ; ಆದ್ದರಿಂದಲೇ ತನ್ನ ಪರಮಶತ್ರುವಾದ ಅರಿಂದಮನ ಆಗಮನ ವಿಚಾರವೂ ಜುಮುಲೆಯ ಅಂತರ್ಧಾನವಿಚಾರವೂ ಫೂಲಸಾಹೇಬನಿಗೆ ಸ್ವಲ್ಪವಾದರೂ ತಿಳಿಯವು. ಫೂಲಸಾಹೇಬನು ಜುಮುಲೆಯ ಶಯನಮಂದಿರದ ಬಳಿಗೆ ಬಂದು ನೋಡಿದನು. ಅಲ್ಲಿ ಜುಮುಲೆ ಇರಲಿಲ್ಲ. ಅದರ ರಕ್ಕೆಯ ಬಾಗಿಲುಗಳು ಮುರಿದುಬಿದ್ದಿವೆ. ಫೂಲಸಾಹೇಬನು ವಿಸ್ಮಯಗೊಂಡವನೇ ಕೊಠಡಿಯೊಳಕ್ಕೆ ಹೋದನು. ಕೊಠಡಿಯೊಳಗೆ ಇದಿರುಭಾಗದ ಮೂಲೆಯಲ್ಲಿಯೇ ಅರಿಂದಮನು ನಿಂತಿದ್ದನು; ಫೂಲಸಾಹೇಬನಿಗೆ ಹೊರಗಡೆಯಿಂದ ಅರಿಂದಮನು ಕಾಣಿಸಲಿಲ್ಲ; ಆದರೆ, ಒಳಕ್ಕೆ ಹೋದಮೇಲೆ, ಹಠಾತ್ತಾಗಿ ಅರಿಂದಮನನ್ನು ಕಂಡು ಸ್ತಂಭಿತನಾದನು. ಆಗ ಆ ಭಾವವನ್ನು ಅಡಗಿಸಿಕೊಂಡು ಫೂಲಸಾಹೇಬನು ಸಹಜವಾದ ಸ್ವರದಿಂದ,—ಇದೇನು ಅರಿಂದಮಬಾಬುಗಳು! ಹಠಾತ್ತಾಗಿ ದಯಮಾಡಿಸಿದ್ದು ಯಾವ ಉದ್ದೇಶದಿಂದಲೊ? ಎಂದು ಕೇಳಿದನು.

"ಬಹು ದಿನಗಳಿಂದಲೂ ಮಹಾಶಯರ ವರ್ತಮಾನಗಳೊಂದೂ ತಿಳಿಯಲಿಲ್ಲ. ಒಂದು ಸಲ ದರ್ಶನ ಮಾಡಿಕೊಂಡು ಹೋಗೋಣವೆಂದು ಬಂದೆ." ಎಂದು ಅರಿಂದಮನು ನಗುತ್ತಾ ಉತ್ತರ ಹೇಳಿದನು.

ಫೂಲಸಾಹೇಬನು, ಒಂದು ಸಲ ಹೋ, ಹೋ! ಎಂದು ನಕ್ಕನು. ಅದಾದಮೇಲೆ ಅವನು ನಮ್ಮಿಬ್ಬರಲ್ಲಿ ಒಬ್ಬರನ್ನೊಬ್ಬರು ನೋಡದಿರುವು ದಾದರೆ ಪರಸ್ಪರ ಬಹು ಸಂಕಟ ಸಂಭವಿಸುವ ಮಟ್ಟಿಗೆ ನಮ್ಮಿಬ್ಬರ ಮಧ್ಯೆ ಮೈತ್ರಿ ಎಂಬುದು ಘನೀಭೂತವಾಗಿರುತ್ತದೆ. ನಾನೂ ಕೂಡ ನಿನ್ನನ್ನು ಕಾಣದೆ ತುಂಬ ಕಾತರಿಸುತ್ತಿದ್ದೆ. ದೇವೇಂದ್ರವಿಜಯನು ನನ್ನ ಸ್ನೇಹಪತ್ರವನ್ನು ತಂದುಕೊಡಲಿಲ್ಲವೇ ? ಎಂದು ಕೇಳಿದನು.

ಅರಿಂದಮ—ಹೂಂ, ತಂದುಕೊಟ್ಟಿದ್ದರೆ ತಾನೇ ಏನು ?

ಫೂಲಸಾಹೇಬ—ಆ ಕಾಗದ ಸೇರಿದನಂತರವೇ ನೀನು ಬಂದದ್ದು? ಬಹು ಬೇಗನೆ ಬಂದೆ; ನೀನು ಇಷ್ಟು ಬೇಗ ಬರುವೆಯೆಂದು ನಾನು ನಂಬಿರಲಿಲ್ಲ. ನೀನು ಯಾವ ಕೆಲಸದಲ್ಲಿ ನಿಯುಕ್ತನಾಗಿರುವೆಯೋ ಅದರಲ್ಲಿ ಹೀಗೆ ತತ್ಪರನಾಗಿರಬೇಕಾದದ್ದು ನಿನಗೆ ಅತ್ಯಾವಶ್ಯಕವಾದದ್ದು. ಏನಾದರೂ ಆಗಲಿ, ನೀನು ದೇವೇಂದ್ರವಿಜಯನನ್ನು ಸಂಗಡ ಕರೆದು ತಂದದ್ದು ಸರಿಯಾಗಲಿಲ್ಲ; ನೀನು ಹಾಗೆ ಮಾಡದೆ ಇದ್ದಿದ್ದರೆ ಆ ಬಡ ಪ್ರಾಣಿಯು ಇಂತಹ ಅಕಾಲದಲ್ಲಿ ಪ್ರಾಣಕಳೆದುಕೊಳ್ಳಬೇಕಾಗಿ ಬರುತ್ತಿರಲಿಲ್ಲ. ಅವನು ಈ ಬಾರಿ ಬಹುಮಟ್ಟಿಗೆ ಕಾವೇರಿ ಬಂದಿದ್ದನು. ಅದಕ್ಕಾಗಿ ಅವನನ್ನು ಒಂದೇ ಏಟಿಗೆ ತಣ್ಣಗೆ ಮಾಡಬೇಕಾಯಿತು.

ಫೂಲಸಾಹೇಬನ ಮಾತುಕೇಳಿ ಅರಿಂದಮನು ಭಯಪಟ್ಟನು; ನೀನೇನು ಅವನನ್ನು ಕೊಂದುಬಿಟ್ಟೆಯಾ ? ಎಂದು ಕೇಳಿದನು.

ಫೂಲ.—ನಾನೇಕೆ ಅವನನ್ನು ಕೊಲ್ಲುವುದಕ್ಕೆ ಹೋಗಲಿ? ಅವನು ತನ್ನಿಷ್ಟಕ್ಕೆ ತಾನೇ ಹತ್ಯೆ ಮಾಡಿಕೊಂಡನು; ಅವನು ಅಷ್ಟು ಬುದ್ಧಿವಂತ! ನಾನು ಅವನನ್ನು ಮುಟ್ಟಿದ್ದು ಸಹಾ ಇಲ್ಲ. ಅವನ ಗತಿ ಏನಾದರೂ ಆಗಲಿ, ಅರಿಂದಮಬಾಬೂ, ನಿನ್ನ ಬಳಿ ಏನಾದರೂ ಅಸ್ತ್ರ ಶಸ್ತ್ರ ಗಳುಂಟೊ ?

ಅರಿಂದಮ—ಉಂಟು; ಏತಕ್ಕೆ ?

ಫೂಲ.—ಅವು ಇರತಕ್ಕುದೇ ನ್ಯಾಯ. ನಾನು ಈಗ ಇಲ್ಲಿಂದ ಹೊರಟುಹೋಗುವುದಾದರೆ ಪ್ರಾಯಃ ಅವುಗಳಲ್ಲಿ ಒಂದಲ್ಲದಿದ್ದರ

ಒಂದರ ರುಚಿಯನ್ನು ನೋಡಬೇಕಾಗಿ ಬರುವುದಲ್ಲವೆ? ಅಷ್ಟೇನು, ನೀನು ನನ್ನನ್ನು ಕೊಂದೇಹಾಕಬಹುದು.

ಅರಿಂದಮ—ನನಗೆ ಆ ಕೋರಿಕೆ ಇಲ್ಲ.

ಫೂಲಸಾಹೇಬ— (ಗಟ್ಟಿಯಾಗಿ ನಕ್ಕು) ಅರಿಂದಮ, ಹಠಾತ್ತಾಗಿ ಇಷ್ಟು ದಯಾಳುತ್ವವೆಲ್ಲಿಂದ ಬಂದಿತು ?

ಅರಿಂದಮ—ಹಾಗಾದರೆ ನಿನ್ನಲ್ಲಿ ಯಾವ ಅಸ್ತ್ರವೂ ಇಲ್ಲವೆ?

ಫೂಲ.—ನನ್ನ ದುರದೃಷ್ಟ, ನಾನು ಈಗ ನಿರಸ್ತ್ರನಾಗಿದ್ದೇನೆ; ಇಲ್ಲದಿದ್ದಪಕ್ಷದಲ್ಲಿ ನಿನಗೆ ಈ ರೀತಿ ಪ್ರಶ್ನೆ ಮಾಡುವ ಕಷ್ಟ ಕೊಡುತ್ತಿರಲಿಲ್ಲ.

ಅರಿಂದಮ—(ನಗುತ್ತಾ) ಅದು ಹೇಗೆ ?

ಫೂಲ.—ಇದ್ದಿದ್ದಪಕ್ಷದಲ್ಲಿ ನೀನು ನನ್ನ ದೃಷ್ಟಿಗೋಚರನಾದ ಕೂಡಲೇ ನಾನು ನಿನ್ನನ್ನು ಈ ಪ್ರಪಂಚದಿಂದ ಪಾರುಮಾಡುತ್ತಿದ್ದೆ.

ಅರಿಂದಮ—ಅದು ನಿಜ.

ಫೂಲ.—ಇನ್ನೂ ಕೊಂಚ ತಿಳಿದಿರಬೇಕೆಂದು ತೋರುತ್ತದೆ. ನಿನ್ನ ಪ್ರಾಣ ತೆಗೆಯುವುದಾಗಿ ನಾನು ಶಪಥಮಾಡಿದ್ದೇನೆ. ಸತ್ತರೆ ನಾನು ಸಾಯಬೇಕು, ಇಲ್ಲವೆ ನೀನು ಸಾಯುವೆ. ಇಷ್ಟರ ಮೇಲೆ, ಎಂದಾದರೂ ಸರಿ, ಪ್ರಾಣಸಹಿತನಾದ ಫೂಲಸಾಹೇಬನನ್ನು ನೀನು ಹಿಡಿಯಬಲ್ಲೆನೆಂಬ ಭಾವನೆಯೇ ಬೇಡ.

ಅರಿಂದಮ—ಈಗ ನಾನು ನಿನ್ನನ್ನು ದಸ್ತಗಿರಿಮಾಡಿದ ಪಕ್ಷದಲ್ಲಿ ಏನು ಮಾಡಬೇಕೆಂದಿರುವೆ ?

ಫೂಲ.—ಅರಿಂದಮಬಾಬೂ, ಎಲ್ಲ ಸಮಯದಲ್ಲಿಯೂ ನಾನು ನನ್ನನ್ನು ಕಾಪಾಡಿಕೊಳ್ಳಬಲ್ಲೆ.

ಅರಿಂದಮ—ನಾನು ಈಗಲೇ ನಿನ್ನನ್ನು ದಸ್ತಗಿರಿ ಮಾಡುತ್ತೇನೆ.

ಫೂಲ.—ಬಾಯಿಮಾತಲ್ಲ, ಮನಸ್ಸಿನಲ್ಲಿ ಅಂದುಕೊಂಡಮಾತ್ರಕ್ಕೇ ಫೂಲಸಾಹೇಬನನ್ನು ಹಿಡಿದಹಾಗಾಗಲಿಲ್ಲ. ಅನೇಕರು ಈ ಪ್ರಯತ್ನ ಮಾಡಿದರು.

ಅರಿಂದಮ—ಆ ಅನೇಕರಲ್ಲಿ ನಾನೊಬ್ಬನೇ ಕಾರ್ಯಸಾಧನೆ ಮಾಡಿಕೊಳ್ಳತಕ್ಕವನು. ನಿನಗೆ ಈ ಮೊದಲೇ ಅಲ್ಪಸ್ವಲ್ಪ ನನ್ನ ಪರಿಚಯ ವಾಗಿದೆ.

ಫೂಲಸಾಹೇಬ—ನಾನು ನಿನ್ನನ್ನು ಚೆನ್ನಾಗಿ ಬಲ್ಲೆ; ನಿನ್ನ ಬುದ್ಧಿ, ಕುಶಲತೆ, ಖ್ಯಾತಿ, ನಿಪುಣತೆ, ಶಕ್ತಿ, ಸಾಹಸ, ದಕ್ಷತೆ—ಇವುಗಳಾವುವೂ ನನಗೆ ತಿಳಿಯದುದಲ್ಲ. ನಾನು ನಿನ್ನನ್ನು ಅಷ್ಟುದೂರ ಪರಿಚಯ ಮಾಡಿ ಕೊಂಡಿರುವುದರಿಂದಲೇ ನೀನು ನನಗೊಬ್ಬ ಯೋಗ್ಯನಾದ ಪ್ರತಿದ್ವಂದಿ ಯೆಂದೂ, ಆ ವಿಷಯದಲ್ಲಿ ಸಂಶಯನೇ ಇಲ್ಲವೆಂದೂ ಗ್ರಹಿಸಿದ್ದೇನೆ.

ಹೀಗೆಂದು ಹೇಳಿ ಫೂಲಸಾಹೇಬನು ಯಾವುದೊಂದು ಕಾರಣವೂ ಇಲ್ಲದೆ, ಇದ್ದಕ್ಕಿದ್ದಹಾಗೆಯೇ, ಹಾರಿ ಅರಿಂದಮನ ಕುತ್ತಿಗೆಯ ಮೇಲೆ ಬಿದ್ದನು. ಫೂಲಸಾಹೇಬನು ಹೀಗೆ ಹಠಾತ್ತಾಗಿ ತನ್ನನ್ನು ಆಕ್ರಮಣ ಮಾಡುವನೆಂದು ಅರಿಂದಮನು ಆಲೋಚಿಸಿರಲಿಲ್ಲ. ಅರಿಂದಮನು ಒಂದು ಕೈಯಲ್ಲಿ ಫೂಲಸಾಹೇಬನ ಕುತ್ತಿಗೆಯನ್ನು ಅದಿಮಿ ಹಿಡಿದು, ಮತ್ತೊಂದು ಕೈಯಿಂದ ಅವನ ಹಣೆಯ ಮೇಲೆ ಒಂದು ಸಲ ಮುಷ್ಟಿ ಯಿಂದ ಬಲವಾಗಿ ಹೊಡೆದನು. ನೆತ್ತಿಯೊಡೆದು ರಕ್ತ ಬಂದಿತು.

ಆಮೇಲೆ ಅವರಿಬ್ಬರಲ್ಲಿ, ಪರಸ್ಪರವಾಗಿ, ಮುಷ್ಟಿಪ್ರಹಾರಗಳ ವರ್ಷಣವಾಯಿತು. ದುಂ, ದಾಂ-ಠಕ್, ಠಕಾಸ್ ಶಬ್ದಗಳಿಂದ ಆ ಕೊಠಡಿ ಯಲ್ಲಿ ಕ್ಷಣೇಕ್ಷಣೇ ಪ್ರತಿಧ್ವನಿಯಾಗುತ್ತಿದ್ದಿತು; ಮತ್ತು ಅವರು ಹೆಜ್ಜೆ ಹಾಕುವಾಗ 'ದುಪ್-ದಾಪ್, ಧಪ್-ಧಪಾಸ್' ಶಬ್ದಗಳಿಂದ ಕಟ್ಟಡವೇ ಕಂಪಿಸತೊಡಗಿತು. ಇಷ್ಟೊಂದು ಪ್ರಯತ್ನಗಳಾದಾಗ್ಯೂ ಯಾರು ಯಾರನ್ನೂ ಸುಲಭವಾಗಿ ಕೈವಶಮಾಡಿಕೊಳ್ಳಲಾರದೇ ಹೋದ ದ್ದೊಂದು ತುಂಬಾ ವಿಷಾದಕರವಾದ ವಿಷಯ. ಇದೇ ರೀತಿಯಾಗಿ

ಸುಮಾರು ಅರ್ಧಘಂಟೆ ಕಳೆಯಿತು. ಆದರೂ ಮಲ್ಲಯುದ್ಧವು ಒಂದೇ ರೀತಿಯಾಗಿ ನಡೆಯುತ್ತಲಿದೆ!

ಇಂತಹ ಸಮಯದಲ್ಲಿ ಫೂಲಸಾಹೇಬನು ಹಠಾತ್ತಾಗಿ ಜೇಬಿಗೆಯೊಳಗಿನಿಂದ ಮೊನೆಯಾದ ಒಂದು ಕಬ್ಬಿಣದ ಸಲಾಕೆಯನ್ನು ತೆಗೆದನು. ನೋಡುವುದಕ್ಕೆ ಅದು ಬಹು ಮಟ್ಟಿಗೆ ದಬ್ಬಳದ ಹಾಗೆಯೇ ಇದ್ದಿತು; ಮೇಲ್ಭಾಗದಲ್ಲಿ ಮಾತ್ರ ಕೊಂಚ ಬಾಗಿದ್ದಿತು. ಆ ಲೋಹದ ಕಂಬಿಯನ್ನು ನೋಡಿದ ಕೂಡಲೇ ಅದು ವಿಷಸಂಬಂಧವಾದದ್ದೆಂದೂ, ಅದರಿಂದ ಸ್ವಲ್ಪ ಗಾಯವಾದರೂ ಸುಲಭವಾಗಿ ಪ್ರಾಣ ತೆಗೆಯುವ ಶಕ್ತಿಯುಳ್ಳದೆಂದೂ ಅರಿಂದಮನು ಊಹಿಸಿದನು.

ಫೂಲಸಾಹೇಬನು ವಿಷಸಂಬಂಧವಾದ ಆ ಸಲಾಕಿಯನ್ನು ಅರಿಂದಮನ ಶರೀರಕ್ಕೆ ಚುಚ್ಚುವ ಪ್ರಯತ್ನ ಮಾಡಿದಾಗ, ಆ ಕ್ಷಣವೇ ಅರಿಂದಮನು ಎರಡು ಕೈಗಳಿಂದಲೂ ಫೂಲಸಾಹೇಬನ ಕೈಹಿಡಿದುಕೊಂಡನು. ಫೂಲಸಾಹೇಬನು ಮತ್ತೊಂದು ಕೈಯಿಂದ ಅರಿಂದಮನ ಮುಖದಮೇಲೆ, ಮೂಗಿನಮೇಲೆ, ಅಲ್ಲಿ ಇಲ್ಲಿ ಎಡೆಬಿಡದೆ ಅಪ್ಪಳಿಸುತ್ತಿದ್ದನು. ಆ ಎಲ್ಲ ಪೆಟ್ಟುಗಳ ಮಧ್ಯೆ ಒಂದು ಪೆಟ್ಟು ಗುರಿತಪ್ಪಿ ತನ್ನ ಆ ಕಬ್ಬಿಣದ ಸಲಾಕಿಯಮೇಲೆ ಬಿದ್ದು ಫೂಲಸಾಹೇಬನ ಇಷ್ಟು ಪ್ರಯತ್ನ ಪರಿಶ್ರಮಗಳೆಲ್ಲವನ್ನೂ ನಿಷ್ಫಲಮಾಡಿಬಿಟ್ಟಿತು. ಆ ವಿಷದ ಸಲಾಕಿಯು ಫೂಲಸಾಹೇಬನ ಮಣಿಬಂಧಕ್ಕೆ ನಾಟಿತು.

ಅದು ನಾಟಿದುದೇ ತಡ, ಅಲ್ಲಿಂದಾಚೆಗೆ ಅರಿಂದಮನು ಮತ್ತೇನೂ ಶ್ರಮಪಡಬೇಕಾಗಿಬರಲಿಲ್ಲ. ಒಡನೆಯೇ ಫೂಲಸಾಹೇಬನು ನೆಲಕ್ಕೆ ಉರುಳಿದನು. ಬಲಪೂರ್ಣವಾದ ಅವನ ಶರೀರವು ಒಂದೇ ಬಾರಿಗೆ ದುರ್ಬಲವಾಗಿಯೂ ಅಚೇತನವಾಗಿಯೂ ಆಗುತ್ತ ಬಂದಿತು.

ಅರಿಂದಮನು ವಿಸ್ಮಿತನಾದನು, ಸ್ತಂಭಿತನಾದನು, ನಡುಗಿದನು. ಹಾಗೆಯೇ ದೂರ ಸರಿದು ನಿಂತನು. ಹೃಷ್ಟಪುಷ್ಟವಾದ ತನ್ನ ಶರೀರದ ಪೂರ್ಣ ಬಲಕ್ಕಿಂತಲೂ, ಹರಿತವಾಗಿರುವ ದೊಡ್ಡದೊಂದು ಚೂರಿಗಿಂತಲೂ, ಅಗ್ನಿಯನ್ನೇ ಹೊಟ್ಟೆಯಲ್ಲಿಟ್ಟುಕೊಂಡಿರುವ ಸಾಕ್ಷಾತ್

ಮೃತ್ಯು ಸ್ವರೂಪಿಯಾದ ರಿವಾಲ್ವರಿಗಿಂತಲೂ * ಬಹು ಕ್ಷುದ್ರವಾದ ಪರಿಗಣಿಸುವುದಕ್ಕೂ ಯೋಗ್ಯವಲ್ಲದ ಅದೊಂದು ಚೂರು ಕಬ್ಬಿಣದ ಸಲಾಕಿಗೆ ಎಷ್ಟು ಹೆಚ್ಚಿನ ಶಕ್ತಿ! ಎಂದು ಮನಸ್ಸಿನಲ್ಲಿಯೇ ಭಾವಿಸಿ ಆಶ್ಚರ್ಯಪಟ್ಟುಕೊಳ್ಳುತ್ತಿದ್ದನು. ಫೂಲಸಾಹೇಬನ ಮೈ ಮುಟ್ಟಿ ನೋಡಿದನು. ಅಲುಗದೇ ಇದ್ದ ಅವನ ಶರೀರವು ಆಗ ಬಲು ತಣ್ಣಗೂ, ಅತ್ಯಂತ ಕಠಿಣವಾಗಿಯೂ ತೋರಿತು. ಇಷ್ಟರೊಳಗಾಗಿ ಶ್ವಾಸೋಚ್ಛ್ವಾಸಗಳ ಗತಿವಿಧಿಯೂ ನಿಂತುಹೋಗಿದೆ! ಆದರೂ ಅರಿಂದಮನು ಫೂಲಸಾಹೇಬನನ್ನು ನಂಬಲಾರದೆ ಹೋದನು. ಕೈಕೋಳಗಳನ್ನೂ ಬೇಡಿಯನ್ನೂ ತೆಗೆದು ಫೂಲಸಾಹೇಬನ ಕೈಗಳಿಗೂ ಕಾಲುಗಳಿಗೂ ಭದ್ರವಾಗಿ ತೊಡಿಸಿದನು; ಹಾಗೆಯೇ ಮಂಚವನ್ನು ಎಳೆದು ತಂದು ಅದರ ಒಂದು ಕಾಲನ್ನು ಫೂಲಸಾಹೇಬನ ಬೆನ್ನಿನ ಮೇಲಿರಿಸಿದನು.

---

## ಆರನೆಯ ಪರಿಚ್ಛೇದ

### ಯಥಾ ಸಮಯದಲ್ಲಿ ಅರಿಂದಮ

ಫೂಲಸಾಹೇಬನನ್ನು ಅಂತಹ ಅವಸ್ಥೆಗೆ ಗುರಿಮಾಡಿ ಅರಿಂದಮನು ಅಲ್ಲಿಂದ ಹೊರಟನು. ಹೊರಟವನೇ ದೇವೇಂದ್ರವಿಜಯನನ್ನು ಹುಡುಕಿಕೊಂಡು, ಉತ್ಕಂಠಿತಚಿತ್ತನಾಗಿ ಆ ಮನೆಯ ನಾಲ್ಕೂ ಕಡೆಗಳಲ್ಲಿಯೂ ಸುತ್ತತೊಡಗಿದನು. ದೇವೇಂದ್ರವಿಜಯನ ವಿಚಾರವಾಗಿ ಫೂಲಸಾಹೇಬನು ಹೇಳಿದ್ದುದನ್ನು ಕೇಳಿದ ಮೊದಲು ತುಂಬಾ ಭಯಗೊಂಡಿರುವನು. ಏತಕ್ಕೆಂದರೆ, ಭಯಂಕರ ಸ್ವಭಾವದವನೂ ಕೊಲೆಪಾತಕಿಯೂ ಆದ ಫೂಲಸಾಹೇಬನಿಗೆ ಅಸಾಧ್ಯವಾದ ಕೆಲಸ ಯಾವುದೂ ಇಲ್ಲವೆಂಬುದೇ ಅವನ ನಂಬುಗೆ.

ಉಪ್ಪರಿಗೆಯಮೇಲೆ ಪ್ರತಿಯೊಂದು ಕಡೆಯಲ್ಲಿಯೂ ಚೆನ್ನಾಗಿ ಹುಡುಕಿ ದೇವೇಂದ್ರವಿಜಯನನ್ನಾಗಲೀ ಅಥವಾ ಅವನ ಶವವನ್ನಾಗಲೀ

---

* ರಿವಾಲ್ವರ್ (Revolver) ಪಿಸ್ತೂಲು ವಿಶೇಷ.

ಕಾಣದೇ ಹೋದುದರಿಂದ ಅರಿಂದಮನು ಕೆಳಗಿನ ಅಂತಸ್ತಿಗೆ ಬಂದು ಅಲ್ಲಿಯೂ ಎಲ್ಲ ಕೊಠಡಿಗಳನ್ನೂ ಹುಡುಕಲಾರಂಭಿಸಿದನು. ಯಾವ ಕೊಠಡಿಯಲ್ಲಿ ದೇವೇಂದ್ರವಿಜಯನು ಪಾತಾಳ ಪ್ರವೇಶ ಮಾಡಿದ್ದನೋ ಆ ಕೊಠಡಿಗೂ ಅರಿಂದಮನು ಕಟ್ಟಕಡೆಗೆ ಬಂದೇ ಬಂದನು.

ಆ ಸಮಯದಲ್ಲಿ ಅಸ್ಫುಟವಾಗಿ ನರಳುವ ಶಬ್ದವು ಅವನಿಗೆ ಕೇಳಿಸಿತು; ಆದರೆ ಬಹಳ ಹೊತ್ತಿನವರೆಗೆ ಆಲಿಸಿ ಕೇಳಿದನಾದರೂ ಆ ಶಬ್ದವು ಎಲ್ಲಿಂದ ಬರುತ್ತಿರುವುದೆಂಬುದನ್ನು ಅವನು ನಿಶ್ಚೈಸಲಾಗಲಿಲ್ಲ. ಒಂದೊಂದು ಸಲ 'ಧಪ್, ಧಪಾತ್' ಎಂದು ನೀರಿನ ಸಪ್ಪಳವು ಕೇಳಿಸುತ್ತಿದ್ದಿತು. ಆ ಶಬ್ದವೆಲ್ಲವೂ ಬಹು ದೂರದಿಂದ ಕೇಳಿ ಬರುವಂತೆ ಬೋಧೆಯಾಯಿತು; . ಆದರೆ ಕೊಠಡಿಯಿಂದ ಹೊರಗೆ ಬಂದರೆ ಏನೂ ಕೇಳಿಸುತ್ತಿರಲಿಲ್ಲ. ಭೀತಿವಿಹ್ವಲನಾದ ಅರಿಂದಮನು ಕೊಠಡಿಯೊಳಗೆ ನಾಲ್ಕೂ ಕಡೆ ಸುತ್ತುವುದಕ್ಕೆ ಮೊದಲಿಟ್ಟನು. ಒಂದು ಕಡೆ ನೆಲದಲ್ಲಿ ಕಬ್ಬಿಣದಿಂದ ಮಾಡಿದ ಗುಪ್ತದ್ವಾರವಿರುವುದು ಕಾಣಿಸಿತು; ಅದು ಆಕೃತಿಯಲ್ಲಿ ಸುಮಾರು ಒಂದು ಚದರಗಜದ ಮಟ್ಟಿಗೆ ಚಚ್ಚೌಕವಾಗಿದ್ದಿತು. ಆ ಗುಪ್ತದ್ವಾರವನ್ನು ತೆರೆಯುವುದಕ್ಕೋಸ್ಕರ ಅರಿಂದಮನು ತನ್ನ ದೇಹಬಲವೆಲ್ಲವನ್ನೂ ಪ್ರಯೋಗಿಸಿ, ಸಾಧ್ಯವಿರುವ ಮಟ್ಟಿಗೂ ಪ್ರಯತ್ನಿಸಿದನು; ಏತರಿಂದಲೂ ಅದನ್ನು ಹಿಡಿದು ಎತ್ತುವುದಕ್ಕಾಗಲಿಲ್ಲ; ಆದರೆ ಅದರ ಮೇಲೆ ಸ್ವಲ್ಪ ಮಟ್ಟಿಗೆ ಕಾಲೂರಿದಾಗ ಅದು ಕೆಳಗಡೆಗೆ ಸ್ವಲ್ಪ ಕದಲಿ ಕಿಂಡಿ ಬಿಟ್ಟಿತು. ಮತ್ತಷ್ಟು ಬಲ ಪ್ರಯೋಗಮಾಡಲಾಗಿ ಬಾಗಿಲು ತೆರೆಯಿತು. ಆ ಕೂಡಲೇ ಸಹಿಸಲಸಾಧ್ಯವಾದ ದುರ್ಗಂಧವು ಅರಿಂದಮನ ನಾಸಿಕಾರಂಧ್ರವನ್ನು ಪ್ರವೇಶಮಾಡಿ, ಅವನಿಗೆ ಅನ್ನಪ್ರಾಶನವಾದ ಸಮಯದಲ್ಲಿ ತಿಂದ ಆಹಾರವನ್ನೂ ಕೂಡ ವಾಂತಿ ಮಾಡಿಸುವ ಪ್ರಯತ್ನ ಮಾಡಿತು. ಅರಿಂದಮನು ಬಹು ಕಷ್ಟದಿಂದ ಆ ದುರ್ಗಂಧವನ್ನು ಸೈರಿಸಿ ತಲೆಯನ್ನು ತಗ್ಗಿಸಿಕೊಂಡು, ತೀವ್ರದೃಷ್ಟಿಯಿಂದ ಅದರ ಒಳಭಾಗವನ್ನು ನೋಡಿದನು; ಏನೂ ಕಾಣಿಸಲಿಲ್ಲ; ಆ ನರಳುವ ಶಬ್ದ

ಮಾತ್ರ ಆಗ ಸ್ಪಷ್ಟವಾಗಿ ಕೇಳಿಸುವಂತಾಯಿತು. ಅರಿಂದಮನು ಜೇಬಿನಿಂದ ಲಾಂದ್ರವನ್ನು ತೆಗೆದು ಹೊತ್ತಿಸಿ, ಅದರ ಬೆಳಕನ್ನು ಆ ಅಂಧ ಕೂಪದೊಳಕ್ಕೆ ಪ್ರವೇಶಮಾಡಿಸಿ ನೋಡಿದನು. ಅದಿಯಲ್ಲಿ—ಬಹಳ ಆಳದಲ್ಲಿ—ಅಸ್ಪಷ್ಟವಾದ ಮನುಷ್ಯಮೂರ್ತಿಯೊಂದು ಕೊಳಕುನೀರಿನಲ್ಲಿ ಎದೆಯವರೆಗೂ ಮುಳುಗಿ ನಿಂತಿರುವುದು ಕಂಡಿತು. ಅದರೊಳಗಿನಿಂದ ಮೇಲಕ್ಕೆ ಹತ್ತಿಬರುವುದಕ್ಕೆ ಯಾವ ಉಪಾಯವೂ ಇಲ್ಲವೆಂಬುದೂ ಕಂಡಿತು. ಅರಿಂದಮನು, "ದೇವೇಂದ್ರಬಾಬು-ದೇವೇಂದ್ರಬಾಬು" ಎಂದು ಗಟ್ಟಿಯಾಗಿ ಕೂಗಿದನು.

"ತಾವು ಬಂದಿರಲ್ಲ. ನಾನು ಸಾಯುವುದರಲ್ಲಿದ್ದೇನೆ—ನನ್ನನ್ನು ಬದುಕಿಸಿ—ಹೊ! ಪ್ರಾಣಹೋಯಿತು—ಉಸ್! ಎಷ್ಟು ಭಯಂಕರ" ಎಂದು ಒಳಗಡೆಯಿಂದ ಮೆಲ್ಲಗೆ ಉತ್ತರ ಬಂದಿತು.

ಅರಿಂದಮ—ದೇವೇಂದ್ರಬಾಬೂ, ಭಯಪಡಬೇಡಿ, ನೀವು ಇನ್ನೂ ಬದುಕಿರುವಿರಲ್ಲ; ಇದೇ ನನ್ನ ಅದೃಷ್ಟ! ನಾನು ನನ್ನ ಪ್ರಾಣವನ್ನಾದರೂ ಕೊಟ್ಟು ನಿಮ್ಮ ಪ್ರಾಣವನ್ನು ಉಳಿಸುತ್ತೇನೆ.

ಹೀಗೆಂದು ಹೇಳಿ ಅರಿಂದಮನು ಗುಪ್ತದ್ವಾರವನ್ನು ಬಿಟ್ಟು ಎದ್ದು ನಿಂತನು. ಒಳಗಡೆ ಸ್ಪ್ರಿಂಗ್ ಇತ್ತೆಂದು ಕಾಣುತ್ತದೆ. ತಕ್ಷಣದಲ್ಲಿಯೇ ಗುಪ್ತದ್ವಾರದ ಬಾಗಿಲು ತನ್ನಷ್ಟಕ್ಕೆ ತಾನೇ ಝಣಕ್ಕನೆ ಮುಚ್ಚಿಕೊಂಡಿತು.

ಅರಿಂದಮನು ಹೊರಕ್ಕೆ ಓಡಿಬಂದನು. ಮೆಟ್ಟಿಲಿನ ಒಂದು ಪಕ್ಕದಲ್ಲಿ ಬಹಳ ಉದ್ದವಾದೊಂದು ಹಗ್ಗವಿದ್ದಿತು; ಆ ಹಗ್ಗವನ್ನು ಎರಡು ಕೈಗಳಿಂದಲೂ ಎತ್ತಿಕೊಂಡು ಬಂದು ಅದನ್ನು ಆ ಅಂಧಕೂಪದ ಒಳಕ್ಕೆ ಇಳಿಬಿಟ್ಟನು. ಆ ಸಮಯದಲ್ಲಿ ಅದರಿಂದ ಅವನಿಗೆ ಅಷ್ಟರ ಅನುಕೂಲವಾಗುವುದೆಂದು ಅರಿಂದಮನು ಮೊದಲು ಯೋಚಿಸಿರಲಿಲ್ಲ.

ಅರಿಂದಮನು ಉರಿಯುತ್ತಿರುವ ಲಾಂದ್ರವನ್ನೂ ತೆಗೆದುಕೊಂಡು ಆ ಹಗ್ಗದ ಆಧಾರದಿಂದ ಕೆಳಕ್ಕೆ ಇಳಿದನು. ನಡುವೆ ಹಗ್ಗವಿದ್ದುದರಿಂದ

ಗುಪ್ತದ್ವಾರವು ಸಂಪೂರ್ಣವಾಗಿ ಮುಚ್ಚಿಕೊಳ್ಳದೆ ಅರ್ಧಮಟ್ಟಿಗೆ ತೆರೆದೇ ಇದ್ದಿತು.

ಅರಿಂದಮನು ಒಳಗೆ ಇಳಿದು ನೋಡಿದನು. ದೇವೇಂದ್ರವಿಜಯನು ಆ ಭಾವಿಯ ಆಳವಾದ ಕೆಸರಿನಲ್ಲಿ ಕೊಂಚ ಕೊಂಚವಾಗಿ ಮುಳುಗಿ ಹೋಗುತ್ತಿದ್ದಾನೆ. ಅವನ ತಲೆಯಲ್ಲಿ ಒಂದು ಕಡೆ ಗಾಯವಾಗಿ ರಕ್ತವು ಹರಿಯುತ್ತಿದೆ; ಆ ಪೆಟ್ಟು ಅಷ್ಟೊಂದು ಅಪಾಯಕರವಾಗಿಲ್ಲವಾದರೂ ಇರತಕ್ಕ ಸ್ಥಿತಿಯು ಅತ್ಯಂತ ಭಯಂಕರವಾದದ್ದು. ಭಯಂಕರವಾದ ಮೃತ್ಯುವಿನ ದೆಸೆಯಿಂದ ದೇವೇಂದ್ರನನ್ನು ಕಾಪಾಡುವುದಕ್ಕೋಸ್ಕರ ಅರಿಂದಮನು ಎರಡು ಕೈಗಳಿಂದಲೂ ಅವನನ್ನು ಹಿಡಿದು ಬಹು ಪ್ರಯಾಸದಿಂದ ಎಳೆಯತೊಡಗಿದನು. ಕುತ್ತಿಗೆಯವರೆಗಿನ ಆ ಕೆಸರಿನಿಂದ ಒಬ್ಬ ಮನುಷ್ಯನನ್ನು ಹಿಡಿದು ಎತ್ತುವುದೇನು ಸಾಧಾರಣವೆ ?

---

## ಏಳನೆಯ ಪರಿಚ್ಛೇದ

### ಸಮಯಕ್ಕೆ ಸರಿಯಾಗಿ ಜುಮಲೆ

ಬಾವಿಯೊಳಗಡೆ ದೇವೇಂದ್ರವಿಜಯನಿಗೋಸ್ಕರ ಯಮನಿಗೂ ಮಾನವನಿಗೂ ಹೋರಾಟವಾಗುವ ವೇಳೆಗೆ ಸರಿಯಾಗಿ, ಒಬ್ಬ ಹೆಂಗಸು ಸದ್ದಾಗದ ಹಾಗೆ ಹೆಜ್ಜೆ ಹಾಕುತ್ತಾ ಆ ಕೊಠಡಿಯೊಳಕ್ಕೆ ಬಂದಳು; ಬಂದವಳೇ ಅಂಧಕೂಪದ ಗುಪ್ತದ್ವಾರದ ಹತ್ತಿರ ನಿಂತು ಒಂದಾವರ್ತಿ ಬಗ್ಗಿನೋಡಿ, ಹಾಗೆಯೇ ನಿಶ್ಶಬ್ದವಾದ ನಗೆಯೊಂದಿಗೆ ಅಪೂರ್ವವಾದ ಆ ಭಯಂಕರ ವ್ಯಾಪಾರವನ್ನು ಕಂಡು, ಸದ್ದಾಗದ ಹಾಗೆ ಮೆಲ್ಲಮೆಲ್ಲಗೆ ಹೊರಕ್ಕೆ ಹೊರಟುಹೋದಳು. ಅವಳು ಜುಮಲೆ.

ಜುಮಲೆಯು ಹೊರಗೆಬಂದು ತನ್ನಷ್ಟಕ್ಕೆ ತಾನೇ "ಸರಿ" ಎಂದು ಬಹು ಮೆತ್ತಗೆ ಹೇಳಿಕೊಂಡಳು. 'ಸರಿ' ಎಂಬ ಆ ಶಬ್ದವು ಉಚ್ಚಾರಣೆಯೇ ಆಗದೆ ಗಭೀರವಾದೊಂದು ದೀರ್ಘ ನಿಶ್ವಾಸದಂತೆ ಕೇಳಿಸಿತು.

ಅರಿಂದಮನು ಬಹು ಸಾಹಸಮಾಡಿ ದೇವೇಂದ್ರವಿಜಯನನ್ನು ಎಳೆದು ಎತ್ತಿದನು. ಆ ವೇಳೆಗೆ ದೇವೇಂದ್ರವಿಜಯನಿಗೆ ಪ್ರಜ್ಞೆತಪ್ಪಿತ್ತು. ಅರಿಂದಮನು ಮೃತಕಲ್ಪನಾದ ದೇವೇಂದ್ರವಿಜಯನ ದೇಹವನ್ನು ಒಂದು ಕೈಯಲ್ಲಿ ಎದೆಗೆ ಅಪ್ಪಿಕೊಂಡು, ಮೇಲಕ್ಕೇರುವ ಪ್ರಯತ್ನ ಮಾಡುವುದರೊಳಗಾಗಿ ಹರಿತವಾದ ಬಾಕಿನ ಹಾಗಿರುವ ತೀಕ್ಷ್ಣಕಂಠ ದಿಂದ "ಇಂದು ನನ್ನಿಂದ ಇಬ್ಬರೂ ಸಾಯಬೇಕು. ಅರಿಂದಮ, ತಲೆ ಯೆತ್ತಿ ನೋಡು, ನನ್ನನ್ನು ಗುರ್ತಿಸಲಾರೆಯಾ?" ಎಂದು ಯಾರೋ ಕೂಗಿ ಹೇಳಿದರು.

ಅರಿಂದಮನು ಭಯಪಟ್ಟವನಾಗಿ ತಲೆಯೆತ್ತಿ ಮೇಲೆ ನೋಡಿ, "ಯಾರು ನೀನು?" ಎಂದನು.

"ಅಬ್ಬಾ! ನೀನು ನನ್ನನ್ನು ಕಾಣೆಯಾ?"

"ಇಲ್ಲ. ನೀನು ಯಾರು?"

"ನಾನು ಜುಮಲಿ, ನಿನಗೆ ಪರಿಚಿತಳಾದ ಆ ಮತಿಬೀಜ."

ಹಠಾತ್ತಾಗಿ ಹತ್ತಿರದಲ್ಲಿ ಹಾವನ್ನು ಕಂಡರೂ ಜನರು ಅಷ್ಟರ ಮಟ್ಟಿಗೆ ಚಮಕಿತರಾಗರು; ಅಥವಾ ಆ ಕೊಠಡಿಯಲ್ಲಿ ಹಠಾತ್ತಾಗಿ ಸಿಡಿಲುಬಿದ್ದರೂ ಅರಿಂದಮನು ಅಷ್ಟರಮಟ್ಟಿಗೆ ಚಮಕಿತನಾಗುತ್ತಿರಲಿಲ್ಲ ವೆಂದು ತೋರುತ್ತದೆ. ಆದರೆ ಜುಮಲಿಯನ್ನು ಕಂಡು ಅಷ್ಟರ ಮಟ್ಟಿಗೆ ಭಯಪಟ್ಟು ನಡುಗಿದನು. ನೋಡಿದನು, ನೂರಾರು ಭಯೋತ್ಪಾತ ಗಳು ಏಕತ್ರಿಕವಾಗಿ ಮೂರ್ತಿಭವಿಸಿತೋ ಎನ್ನುವಂತೆ ಅವನತಮಸ್ತಕ ಳಾಗಿ, ಮೇಲ್ಗಡೆ, ಜುಮಲಿಯು ನಿಂತಿದ್ದಾಳೆ. ಅವಳ ಆ ವಿಸ್ಫಾರ ವಾದ ಕೃಷ್ಣನಯನಗಳಲ್ಲಿ ಪ್ರಕಾಶಮಾನವಾಗಿ ಜ್ವಲಿಸುತ್ತಿರುವ ನರಕಾಗ್ನಿಯು ಅದೆಷ್ಟು ಭಯಂಕರ! ಸಾಲದುದಕ್ಕೆ ಕೃಷ್ಣವರ್ಣದ ಕೇಶದಾಮವು ಕೆದರಿದೆ, ಗುಂಗುರು ಗುಂಗರಾಗಿದೆ, ವಿಶೇಷವಾಗಿದೆ, ನೀಳವಾಗಿದೆ—ಇಂತಹ ಕೇಶದಾಮವು ಅವಳ ಮುಖದ ಸುತ್ತಲೂ ಭಯಂಕರಾಕಾರವಾಗಿ ಆವೃತವಾಗಿದೆ. ಜುಮಲಿಯ ಒಂದು ಕೈಯಲ್ಲಿ ಲಾಂದ್ರ, ಇನ್ನೊಂದು ಕೈಯಲ್ಲಿ ಒಂದು ಸಣ್ಣಸೀಸೆ; ಅದರಲ್ಲಿ

ಕೆಂಬಣ್ಣದ ಯಾವುದೋ ದ್ರವಪದಾರ್ಥವು ಥಳಥಳಿಸುತ್ತಿದೆ. ಈ ಪಿಶಾಚಿಯ ಸಂಕಲ್ಪವೇನೋ ಯಾರು ಬಲ್ಲರು?

ತನ್ನ ಅವಸ್ಥೆಯನ್ನು ಸ್ಮರಿಸಿಕೊಂಡು ಅರಿಂದಮನು ನಿಶ್ಚಯವಾಗಿಯೂ ಭೀತನಾದನು. ಆ ಸಮಯದಲ್ಲಿ ದೇವೇಂದ್ರವಿಜಯನು ಮೂರ್ಛಿತನಾಗಿರದಿದ್ದರೆ, ಪ್ರಳಯ ಸ್ವರೂಪಿಣಿಯಾದ ಆ ಪಿಶಾಚಿಯ ಕೈಯಿಂದ ಪಾರಾಗುವುದಕ್ಕೆ ಸ್ವಲ್ಪವಾದರೂ ಅವಕಾಶವಿರುತ್ತಿದ್ದಿತು. ಈಗ ಅವನೇನು ಮಾಡಿಯಾನು? ಈ ಅವಸ್ಥೆಯಲ್ಲಿರುವ ದೇವೇಂದ್ರ ವಿಜಯನನ್ನು ಬಿಟ್ಟುಹೋಗುವುದು ಮಾಡಲಾಗದ ಕಾರ್ಯ. ಏನೇನೋ ಆಲೋಚಿಸಿ ಆಲೋಚಿಸಿ ದಿಕ್ಕುತೋರದವನಾದನು; ಕಟ್ಟ ಕಡೆಗೆ, ದೇವೇಂದ್ರವಿಜಯನು ಒಂದುವೇಳೆ ಸತ್ತುಹೋದನಾದರೆ, ಅವನ ಸಂಗಡ ತಾನೂ ಮೃತಿಹೊಂದುವುದಾಗಿ ತನ್ನೊಳಗೆ ತಾನೇ ಪ್ರತಿಜ್ಞೆ ಮಾಡಿಕೊಂಡನು.

ಬಿರುಗಾಳಿಯಿಂದ ಒಡಗೂಡಿದ ಮಳೆಯ ಸಪ್ಪಳಂತೆ ತರಂಗಾಯಿತವಾದ ನಗೆಯೊಂದಿಗೆ ಜುಮಲೆಯು, ಅರಿಂದಮ, ಈಗ ನನ್ನ ಅನುಗ್ರಹವೊಂದರಮೇಲೆ, ನನ್ನ ಕರುಣೆಯೊಂದರಮೇಲೆ, ನನ್ನ ಇಚ್ಛೆಯೊಂದರಮೇಲೆ ನಿಮ್ಮಂತಹ ಇಬ್ಬರು ವೀರಪುರುಷರ ಪ್ರಾಣವು ಭರವಸಗೊಂಡಿರುವುದೆಂದು ನಿನ್ನಂತಹ ಬುದ್ಧಿಶಾಲಿಗೆ ನಾನು ಸ್ಪಷ್ಟವಾಗಿ ಹೇಳಬೇಕಾಗಿಲ್ಲವೆಂದು ತೋರುತ್ತದೆ, ಎಂದು ಹೇಳಿದಳು.

ಜುಮಲೆಯ ಬಾಯಿಂದ ಈ ಮಾತುಗಳು ಯಾವ ಧ್ವನಿಯಲ್ಲಿ ಹೊರಟುವೊ ಅದನ್ನು ನೋಡಿದರೆ ಜುಮಲೆಯು ಬಹು ಸಂತೋಷದೊಂದಿಗೆ ಮಾತನಾಡುತ್ತಿರುವಳೆಂದು ಸ್ಪಷ್ಟವಾಗಿ ವ್ಯಕ್ತಪಡುತ್ತಿದ್ದಿತು.

ಅರಿಂದಮನು, 'ಹೌದು, ಅದೇನೋ ನಿಜ' ಎಂದನು.

ಜುಮಲೆಯು ತಲೆಯನ್ನಾಡಿಸುತ್ತಾ, ಹಾಗಾದರೆ ಅರಿಂದಮ, ನನ್ನ ದಯೆಯನ್ನು ಪ್ರಾರ್ಥಿಸುವವನಾಗು, ನಿನ್ನ ಪ್ರಾಣಭಿಕ್ಷೆಯನ್ನು ಕೋರುವವನಾಗು—ಕ್ಷಮೆಯನ್ನು ಬೇಡು; ಕರುಣೆಯುಂಟಾದ ಪಕ್ಷದಲ್ಲಿ—ಕ್ಷಮಿಸಿದರೂ ಕ್ಷಮಿಸಬಲ್ಲೆನು, ಎಂದು ಹೇಳಿದಳು.

ಅರಿಂದಮ—ಪಿಶಾಚಿಯಲ್ಲಿ ದಯಾಭಿಕ್ಷವೆ! ಜುಮಾಲೆ, ಅಂತಹ ಪಕ್ಷನು ಯಾವನು?

ಜುಮಾಲೆ—(ತೀವ್ರಸ್ವರದಿಂದ) ಹಾಗಾದರೆ ಈ ಸಂತೋಷವನ್ನು ಪಡು.

ಅರಿಂದಮ—ನೀನು ಏನು ಮಾಡುವೆ? ನಿನ್ನ ಉದ್ದಿಶ್ಯವಾದರೂ ಏನು?

ಜುಮಾಲೆ—ನನ್ನ ಉದ್ದಿಶ್ಯವಾದರೊ ನಿನ್ನನ್ನು ಕೊಲ್ಲುವುದು—ಈಗಲೇ—ಈ ಕ್ಷಣದಲ್ಲಿಯೇ.

ಅರಿಂದಮ—ಹೇಗೆ?

ಜುಮಾಲೆ—ಹೀಗೆ.

ಜುಮಾಲೆ ಆ ಶೀಸೆಯನ್ನು ಮೇಲಕ್ಕೆ ಎತ್ತಿಹಿಡಿದಳು. ಅನಂತರ ಕಿಲಕಿಲನೆ ನಗುತ್ತಾ, ಇದರಲ್ಲಿ ಏನಿದೆಯೋ ಗೊತ್ತಿದೆಯೆ—ಇಲ್ಲವೆ? ಇದರಲ್ಲಿರುವುದನ್ನು ನಿನ್ನ ಮೈಮೇಲೆ ಚೆಲ್ಲುತ್ತೇನೆ, ಇದು ಅಗ್ನಿಶಿಖೆಯಂತೆ ನಿನ್ನನ್ನು ಸುಡುವುದು; ಇದು ಕರಗಿದ ಸೀಸಕ್ಕಿಂತಲೂ ಭಯಂಕರವಾದದ್ದು. ಅದನ್ನೂ ಇದನ್ನೂ ಹೋಲಿಸಿ ನೋಡಿದರೆ ಇದರ ಇದಿರಿನಲ್ಲಿ ಕರಗಿದ ಸೀಸವು ಹಿಮದಗಡ್ಡೆಯೇ ಸರಿ, ಎಂದಳು.

ಅರಿಂದಮ—ನಿನ್ನ ಮನೋಭಾವದಿಂದ–ನಿನ್ನ ಕಲ್ಪನೆಗಳಿಂದ ನಿನ್ನ ಕುಟಿಲತೆ ಮತ್ತೂ ಕಠೋರತೆಗಳಿಂದ ನೀನು ರಾಕ್ಷಸಿಗಿಂತಲೂ ಭಯಂಕರಿಯಾದವಳು; ನಿನಗೆ ತೋರಿದಹಾಗೆ ಮಾಡು. ನಾನು ಸಾಯುವುದಕ್ಕೆ ಸಿದ್ಧನಾಗಿದ್ದೇನೆ.

ಜುಮಾಲೆ—ಕೇಳು ಅರಿಂದಮ; ಮರಣವೆಂಬುದು ಬಾಯಲ್ಲಿ ಹೇಳುವುದಕ್ಕೆ ಎಷ್ಟು ಸುಲಭವೋ, ಕಾರ್ಯತಃ ಅಷ್ಟು ಸುಲಭವಾದುದಲ್ಲ. ಇದು ಅಂತಿಂತಹ ಮರಣವಲ್ಲ—ಉರಿದು ಬೊಬ್ಬೆಯಾಗಿ ಸುಟ್ಟುಹೋಗುವ ಮರಣ. ಹಾಗಾದರೆ ಸಾಯಿ, ಅರಿಂದಮ. ನೀನು ಯಾತನೆಯಿಂದ ಅಸ್ಥಿರನಾಗಿ, ಗಟ್ಟಿಗೆ ಚೀತ್ಕಾರಮಾಡುವೆ, ಆಗ

ನಾನು ಅಷ್ಟೇ ಗಟ್ಟಿಯಾಗಿ ಹೊ! ಹೊ!! ಹೊ!!! ಎಂದು ನಗುತ್ತಿರು ತ್ತೇನೆ. ಎಂತಹ ಆನಂದ! ನಿನ್ನ ಎರಡು ಕಣ್ಣುಗಳಿಗೂ ಎರಡು ತೊಟ್ಟು ಹಾಕುತ್ತೇನೆ, ಕುರುಡನಾಗುತ್ತಿ—ಕಣ್ಣುಗಳನ್ನು ಕಿತ್ತು ಎಸೆದರೂ ಆ ಯಾತನೆ ಹೋಗುವುದಿಲ್ಲ; ಅನಂತರ ಸಾಯುವೆ! ಕೊಂಚ ಕೊಂಚವಾಗಿ ಭಯಂಕರ ಬಾಧೆಯಿಂದ ಭಯಾನಕ ಮರಣ!

ಜುಮುಲೆಯು ಪುನಃ ನಗುವುದಕ್ಕೆ ಮೊದಲು ಮಾಡಿದಳು. ಆ ತೀವ್ರವಾದ ನಗೆಯು ಬಹು ಭಯಂಕರವಾಗಿಯೂ ಅಮಂಗಳ ಕರವಾಗಿಯೂ ತೋರಿತು. ಆ ನಗೆಯನ್ನು ಕೇಳಿ ಎಂತಹ ಪ್ರಬಲ ಸಾಹಸಿಯ ಹೃದಯವಾದರೂ ಭಯದಿಂದ ಕಂಪಿಸುವುದು.

ಅರಿಂದಮನು ಭಯಪಟ್ಟನು. ಜುಮುಲೆಯು ಬರಿಯ ಮಾತಿನಿಂದ ಭಯಪಡಿಸುವಳಲ್ಲ, ಕಾರ್ಯತಃ ಹಾಗೆಯೇ ಮಾಡತಕ್ಕವಳು, ಎಂದು ತಿಳಿದುಕೊಂಡನು. ಈ ವಿಪತ್ತಿನ ದೆಸೆಯಿಂದ ಬದುಕಿಕೊಳ್ಳುವುದು ಹೇಗೆ?

"ಅರಿಂದಮ, ಇಲ್ಲಿ ನೋಡು" ಎಂದು ಹೇಳಿ ಜುಮುಲೆಯು ಸ್ವಲ್ಪ ಸ್ವಲ್ಪವಾಗಿ ಸೀಸೆಯನ್ನು ಓರೆಮಾಡುತ್ತಾ ಬಂದಳು. ಜುಮುಲೆಗೆ ಗೊತ್ತಾಗದೆಯೇ ಒಂದು ತೊಟ್ಟು ಅರಿಂದಮನ ಕೈಮೇಲೆ ಬಿದ್ದಿತು. ಕರಗಿದ ಸೀಸದಹಾಗೆ, ಆ ಒಂದು ತೊಟ್ಟು ಆ ಸ್ಥಳವನ್ನು ಸುಡಲುಪ ಕ್ರಮಿಸಿತು. ಅರಿಂದಮನು ಬಿಡುಗಚ್ಚಿಕೊಂಡು, ಮಾತನಾಡದೆ, ಉಸಿರಾಡುವುದನ್ನೂ ತಡೆದು ಬಹು ಕಷ್ಟದಿಂದ ಆ ಬಾಧೆಯನ್ನು ಸಹಿಸಿಕೊಂಡಿದ್ದನು. ಯಾತನಾಸೂಚಕವಾದ ಯಾವುದೊಂದು ಶಬ್ದವೂ ಆಗ ಅವನ ಮುಖದಿಂದ ಹೊರಡಲಿಲ್ಲ.

"ನೋಡು ಅರಿಂದಮ, ಇನ್ನು ವಿಳಂಬವಿಲ್ಲ, ಇಲ್ಲಿ ನೋಡು, ಮುಚ್ಚಳ ತೆಗೆದಿದ್ದೇನೆ; ಈಗಲೇ ನಿನ್ನ ಮೈಮೇಲೆ ಇದನ್ನು ಚೆಲ್ಲಿ ಬಿಡುತ್ತೇನೆ; ಇನ್ನೂ ಅವಕಾಶವಿದೆ; ಪ್ರಾಣಭಿಕ್ಷೆ ಬೇಡಿಕೊ" ಎಂದು ಜುಮುಲೆ ಹೇಳಿದಳು.

ಅರಿಂದಮ—(ದೃಢಸ್ವರದಿಂದ) ಈ ಪ್ರಾಣವಿರುವವರೆಗೂ ಅದು ಸಾಗದು.

ಜುಮುಲೆ—ನಾನು ನಿನ್ನನ್ನು ಬಿಟ್ಟರೂ ಬಿಡಬಲ್ಲೆ; ಪ್ರಾಣಭಿಕ್ಷೆಯನ್ನು ಬೇಡು.

ಅರಿಂದಮ—ನೀನು ಪಿಶಾಚಿ.

ಜುಮುಲೆ—(ಮಂದಹಾಸದಿಂದ) ಛೀ ಅರಿಂದಮ! ನಿನಗೆ ಕಣ್ಣಿದ್ದೂ ಫಲವಿಲ್ಲ; ನಾನು ಇಷ್ಟು ಸುಂದರಿ, ನನಗೆ ಇಷ್ಟೊಂದು ಸೌಂದರ್ಯವಿದೆ, ಹೀಗಿದ್ದೂ ನನ್ನನ್ನು ಪಿಶಾಚಿಯೆಂದೆಯಲ್ಲ!

ಅರಿಂದಮನು ಯಾವ ಮಾತನ್ನೂ ಆಡಲಿಲ್ಲ.

ಜುಮುಲೆ—ಈಗಲಾದರೂ ಪ್ರಾಣಭಿಕ್ಷೆಯನ್ನು ಬೇಡು.

ಆಗಲೂ ಅರಿಂದಮನು ಮೌನದಿಂದಿದ್ದನು.

ಜುಮುಲೆ—ಇನ್ನು ಹೇಳುವುದಿಲ್ಲ, ಇದೇ ಕಡೆಯ ಮಾತು; ಈಗಲಾದರೂ ಪ್ರಾಣಭಿಕ್ಷೆಯನ್ನು ಬೇಡು. ನಿನ್ನಂತಹ ಸುಪ್ರಸಿದ್ಧನಾದ ಶ್ರೇಷ್ಠ ಪತ್ತೇದಾರನು ನನ್ನಲ್ಲಿ ಪ್ರಾಣಭಿಕ್ಷೆಯನ್ನು ಬೇಡುವುದಾದರೆ ನಾನು ಮರುಮಾತಾಡದೆ ಸಮ್ಮತಿಸುತ್ತೇನೆ, ಅದರಿಂದ ನನಗೆ ತುಂಬ ಗೌರವವುಂಟು; ಆದ್ದರಿಂದಲೇ ನಾನು ಹೀಗೆ ಹೇಳುತ್ತಿದ್ದೇನೆ.

ಅರಿಂದಮನು ಆಗಲೂ ನೀರವ.

# ಎಂಟನೆಯ ಪರಿಚ್ಛೇದ

## ಆಪತ್ಕಾಲದಲ್ಲಿ

ಏನು ಮಾಡಿದರೂ ಅರಿಂದಮನು ತನ್ನಲ್ಲಿ ಪ್ರಾಣಭಿಕ್ಷೆ ಬೇಡುವುದಿಲ್ಲ ವೆಂಬುದು ಜುಮಲೆಯ ಅನುಭವಕ್ಕೆ ಬಂದಿತು. ಇದರಿಂದ ಅವಳು ಕೋಪಗೊಂಡವಳಾಗಿ ಸೀಸೆಯೊಳಗೆ ದ್ರವರೂಪವಾಗಿದ್ದ ವಿಟ್ರಿಯಲ್ (Vitriol—ಗಂಧಕ ದ್ರಾವಕ)ವನ್ನು ಸುರಿಯುವುದಕ್ಕೆ ಯತ್ನಿಸಿದಳು; ಆ ಸಮಯದಲ್ಲಿ ಅವಳ ಹಿಂಭಾಗದಿಂದ ಒಂದು ವ್ಯಕ್ತಿಯು ಬಲಾತ್ಕಾರ ವಾಗಿ ಅವಳಿಂದ ಆ ಸೀಸೆಯನ್ನು ಕಿತ್ತುಕೊಂಡಿತು. ಹಾಗೆ ಸೀಸೆ ಗೋಸ್ಕರವಾಗಿ ಕಸರಾಡುವಾಗ ಆ ದ್ರವರೂಪದ ಅಗ್ನಿಯ ಕೊಂಚ ಭಾಗವು ಜುಮಲೆಯ ಕೈಮೇಲೆ ಬಿದ್ದಿತು. ಯಾತನೆಯಿಂದ ಚೀತ್ಕಾರ ಮಾಡುತ್ತಾ ಜುಮಲೆಯು ಅಲ್ಲಿಂದ ಓಡಿಹೋದಳು.

ಆ ಅನಿರೀಕ್ಷಣೀಯವಾದ ಘಟನೆಯನ್ನು ಅರಿಂದಮನು ಬಾವಿ ಯೊಳಗಿಂದಲೇ ಕಂಡು ಪರಮೇಶ್ವರನಿಗೆ ಒಂದು ಲಕ್ಷ ಪ್ರಣಾಮ ಗಳನ್ನು ತನ್ನೊಳಗೆ ತಾನೇ ಸಮರ್ಪಿಸಿದನು. ಇಷ್ಟು ದೊಡ್ಡ ವಿಪತ್ತು ಇಷ್ಟು ಬೇಗನೆ, ಇಷ್ಟು ಸುಲಭವಾಗಿ ತೊಲಗಿಹೋಗುವು ದೆಂದು ಅವನು ಊಹಿಸಿರಲಿಲ್ಲ. ಅವನು ದೇವೇಂದ್ರವಿಜಯನ ಮೂರ್ಛಿತ ಶರೀರವನ್ನು ಎದೆಗೆ ಅಪ್ಪಿಕೊಂಡು ಬೇಗಬೇಗನೆ ಮೇಲಕ್ಕೆ ಹತ್ತಿಬಂದನು. ಹಾಗೆಯೇ ಆ ವಿಪತ್ತನ್ನು ತೊಲಗಿಸಿದ ಅಪರಿಚಿತ ವ್ಯಕ್ತಿಗೆ ಯಥೇಷ್ಟವಾಗಿ ಕೃತಜ್ಞತಾ ಪ್ರಕಾಶಮಾಡಿದನು.

ಆ ಅಪರಿಚಿತ ವ್ಯಕ್ತಿಯ ವಯಸ್ಸು ಇಪ್ಪತ್ತೇಳು ವರ್ಷಗಳಾಗಿರ ಬಹುದು. ಆತನ ಶರೀರವು ದೀರ್ಘವಾಗಿಯೂ ಪ್ರಶಸ್ತವಾಗಿಯೂ ಇತ್ತು. ಆತನ ಭಾವಭಂಗಿಗಳಿಂದಲೂ, ಮುಖಾಕೃತಿಯಿಂದಲೂ, ಕರುಣಾದೃಷ್ಟಿಯಿಂದಲೂ ಸೌಶೀಲ್ಯವೇ ವ್ಯಕ್ತಪಡುತ್ತಿದ್ದಿತು. ಆತನು ಧರಿಸಿದ್ದ ಆ ಕೊಳಕು ಬಟ್ಟೆ, ತಲೆಯಲ್ಲಿ ಒರಟಾಗಿರುವ ನೀಳವಾದ ಕೂದಲು, ಕಣ್ಣಿನ ಪಕ್ಕದಲ್ಲಿನ ಕೃಷ್ಣವರ್ಣ, ಕೈಕಾಲುಗಳಲ್ಲಿರುವ ಉದ್ದುದ್ದವಾದ ಉಗುರು ಇವುಗಳಿಂದ, ಆತನ ವಿಷಯವಾಗಿ ಉದಿಸಿದ

ಸದ್ಭಾವನೆಯು ಆ ಕೂಡಲೇ ಅರಿಂದಮನ ಮನಸ್ಸಿನಿಂದ ತೊಲೆದು ಹೋಯಿತು. ಇದೂ ಅಲ್ಲದೆ ಶರೀರದಲ್ಲಿ ಒಂದೊಂದು ಕಡೆ ಕೊಳೆ ತುಂಬಿದೆ; ಕಿವಿಯ ಕೆಳಗಡೆ ಕುತ್ತಿಗೆಯ ಸುತ್ತಲೂ, ಹಣೆಯಲ್ಲಿಯೂ ಸಹ ಸುಲಿದು ತೆಗೆದರೆ ಎದ್ದು ಬರುವಷ್ಟು ಕೊಳೆಯಾಗಿದೆ. ಆತನ ಮುಖ ಮತ್ತೂ ಕಣ್ಣುಗಳ ಭಾವವನ್ನು ನೋಡಿ, ಆತನು ಮುಸಲ್ಮಾನ ಜಾತಿಯವನೆಂದು ಅರಿಂದಮನು ಊಹಿಸಿದನು. ಇವನು ಫೂಲಸಾಹೇಬನಿಗೆ ಏನಾಗಬೇಕೋ ಯಾರು ಬಲ್ಲರು ?

ಏನಾದರೂ ಆಗಲಿ, ಇಬ್ಬರೂ ಸೇರಿ ದೇವೇಂದ್ರವಿಜಯನಿಗೆ ಪ್ರಜ್ಞೆ ಬರುವಂತೆ ಮಾಡುವುದಕ್ಕೋಸ್ಕರ ಬಹುವಾಗಿ ಪ್ರಯತ್ನಮಾಡತೊಡಗಿದರು. ಬಹಳ ಹೊತ್ತಿನ ಮೇಲೆ ಅವರ ಪ್ರಯತ್ನವು ಫಲಕಾರಿಯಾಯಿತು. ದೇವೇಂದ್ರವಿಜಯನು ಎದ್ದು ಕುಳಿತನು.

ಅರಿಂದಮನು ಆ ಅಪರಿಚಿತ ವ್ಯಕ್ತಿಯ ಪರಿಚಯ ಮಾಡಿಕೊಳ್ಳುವುದಕ್ಕೋಸ್ಕರ ಆಶಿಸಿದನು. ಆ ಮನುಷ್ಯನನ್ನು ನೋಡಿದ ಮೊದಲು ಅವನ ತಲೆಯಲ್ಲಿ ಒಂದು ಬಗೆಯ ಘೋರತರ ಸಂದೇಹವು ಬಹುವಾಗಿ ಚಾಂಚಲ್ಯಗೊಳ್ಳುತ್ತಿದ್ದಿತು. ಆ ಸಂದೇಹವೇ ಅದೃಷ್ಟ ಬಲದಿಂದ ನಿಜವಾಗಿ ಪರಿಣಮಿಸುವುದಾದರೆ ತಾನು ಜುಮಲೆಯನ್ನೂ ಫೂಲಸಾಹೇಬನನ್ನೂ ಹಿಡಿಯುವುದಕ್ಕಾಗಿ ಪಟ್ಟ ಪ್ರಯಾಸವು ಕೊಂಚವಾದರೂ ವ್ಯರ್ಥವಾಗುವುದಿಲ್ಲವೆಂದುಕೊಂಡು ಅರಿಂದಮನು ಕುತೂಹಲಿಯಾಗಿ ಹೊಸಬನ ಹೆಸರು ಕೇಳಿದನು. ಪ್ರತ್ಯುತ್ತರವಾಗಿ ಆತನು ಹೇಳಿದ ಹೆಸರನ್ನು ಕೇಳಿದ ಕೂಡಲೇ ಮಂತ್ರವಾದಿಯು ಮಂತ್ರದಂಡದಿಂದ ಒಂದು ಲೋಟಾ ಮಸಿಯನ್ನು ಮುಟ್ಟಿದ ಕೂಡಲೇ ಅದು ಒಂದು ಲೋಟಾ ಹಾಲಿನ ಆಕಾರ ತಾಳುವ ರೀತಿಯಲ್ಲಿ ಅರಿಂದಮನ ಎಲ್ಲ ಊಹೆಗಳೂ ಒಂದೇ ಬಾರಿಗೆ ಸತ್ಯವಾಗಿ ಮಾರ್ಪುಗೊಂಡುವು. ಅವನು ಬಹು ಮಟ್ಟಿಗೆ ವಿಸ್ಮಿತನಾಗಿ ವಿಸ್ಮಯ ದೃಷ್ಟಿಯಿಂದ ಆತನ ಆಪಾದ ಮಸ್ತಕವನ್ನೂ ನಿರೀಕ್ಷಿಸತೊಡಗಿದನು. ಆತನ ಹೆಸರು ಸಿರಾಜ-ಉದ್ದೀನ ಎಂದು. ಯಾವನನ್ನು ಉದ್ಧಾರ ಮಾಡುವುದಾಗಿ

ಒಂದಾನೊಂದು ದಿನ ಅರಿಂದಮನು ಕುಲಸಮೆಗೆ ವಾಗ್ದಾನ ಮಾಡಿದ್ದನೋ ಅವನೇ ಇವನು.

ಸಿರಾಜುದ್ದೀನನು ಹೇಳಿದನು—ನಾನು ತಮ್ಮನ್ನು ಯಾವಾಗಲೂ ನೋಡಿಲ್ಲ; ಆದರೆ (ದೇವೇಂದ್ರವಿಜಯನನ್ನು ತೋರಿಸಿ) ಈ ದೊಡ್ಡ ಮನುಷ್ಯನನ್ನು ನಿನ್ನೆಯ ರಾತ್ರಿ ಇಲ್ಲಿ ಒಂದು ಸಲ ನೋಡಿದ್ದೆನು. ಹೊಗೆಯಿಂದ ತುಂಬಿ, ವಾಯುಸಂಚಾರಕ್ಕೂ ಅವಕಾಶವಿಲ್ಲದ ಒಂದು ಕೊಠಡಿಯಲ್ಲಿ ಈತನು ಮರಣಯಾತನೆಯಿಂದ ಗಟ್ಟಿಯಾಗಿ ಅರಚಿಕೊಳ್ಳುತ್ತಲಿದ್ದನು. ಆ ಸಮಯದಲ್ಲಿ ನಾನು ಕಿಡಕಿಯನ್ನೊಡೆದು ಈತನನ್ನು ಉಳಿಸಿದೆ. ನಾನು ಆಗ ಆ ಕೊಠಡಿಯ ಪಾರ್ಶ್ವದ ಕೊಠಡಿಯಲ್ಲಿಯೇ ಬಂದಿಯಾಗಿದ್ದೆನು; ಇಲ್ಲವಾಗಿದ್ದರೆ ನಿನ್ನೆಯ ದಿನ ಜುಮಾಲಿಯ ಕೈಯಿಂದ ಇವನ ಜೀವನವು ಕೊನೆಗಾಣುತ್ತಿದ್ದಿತು.

ಅರಿಂದಮ—ಆ ಸಮಯದಲ್ಲಿ ನೀನು ಪಾರ್ಶ್ವದ ಕೊಠಡಿಯಲ್ಲಿ ಬಂದಿಯಾಗಿದ್ದೆನೆಂದು ಹೇಳುತ್ತಿರುವೆ. ನಿನ್ನನ್ನು ಬಂದಿಯನ್ನಾಗಿ ಮಾಡಿದವರು ಯಾರು ?

ಸಿರಾಜ—ಫ್ರೂಲಸಾಹೇಬ.

ಅರಿಂದಮ—ಯಾವ ಅಭಿಪ್ರಾಯದಿಂದ ಫ್ರೂಲಸಾಹೇಬನು ನಿನ್ನನ್ನು ಬಂದಿಯನ್ನಾಗಿ ಮಾಡಿಟ್ಟಿರುವನೋ ಆ ವಿಚಾರವಾಗಿ ನಿನಗೇನಾದರೂ ತಿಳಿದಿದೆಯೆ ?

ಸಿರಾಜ—ಇಲ್ಲ, ನನಗೆ ಅದು ತಿಳಿಯದು, ಆದರೆ ಫ್ರೂಲಸಾಹೇಬನ ಭೀಷಣ ಸ್ವಭಾವವನ್ನು ನೋಡಿದರೆ ಅದೇ ತರದ ಯಾವುದೋ ಒಂದು ಭೀಷಣಾಭಿಪ್ರಾಯವು ಅವನಿಗೆ ಇದ್ದೇ ತೀರಬೇಕೆಂದು ತೋರುತ್ತದೆ.

ಅರಿಂದಮ—ಇಂದು ನೀನು ಬಿಡುಗಡೆ ಹೊಂದಿದ್ದು ಹೇಗೆ ?

ಸಿರಾಜ—ಇಂದು ಕೂಡ ನಾನು ಉಪ್ಪರಿಗೆಯ ಒಂದು ಕೊಠಡಿಯಲ್ಲಿ ನಿರ್ಬಂಧಿಸಲ್ಪಟ್ಟಿದ್ದೆನು. ಒಂದು ಮುರಿದ ಮಂಚದ ಮೇಲೆ

ಮಲಗಿಕೊಂಡು ನನ್ನ ಹಣೆಯುಬರಹವನ್ನು ಕುರಿತು ಆಲೋಚಿಸುತ್ತಲಿದ್ದೆನು. ಆ ಸಮಯದಲ್ಲಿ ಕೊಠಡಿಯ ಹೊರಗಡೆ ಮೂಲೆಯಲ್ಲಿ ಯಾರದೋ ಹೆಜ್ಜೆಯ ಸದ್ದು ಕೇಳಿಸಿತು. ಆ ಮೂಲೆಯಲ್ಲಿ ಒಂದು ಸಣ್ಣ ಬಾಗಿಲಿತ್ತು. ಅದು ಹಠಾತ್ತಾಗಿ ತೆರೆಯಿತು. ಹಾಗೆಯೇ ಜುಮೆಲೆಯು ಆ ಕೊಠಡಿಯೊಳಕ್ಕೆ ಬಂದಳು; ನಾನು ಆ ಪಿಶಾಚಿಯನ್ನು ನೋಡಿ ನಿದ್ರೆ ಮಾಡುವವನಂತೆ ಮಲಗಿದ್ದೆನು. ಅವಳು ಬಹಳ ಹೊತ್ತಿನವರೆಗೂ ನನ್ನ ಕೊಠಡಿಯಲ್ಲಿ ಸುಮ್ಮನೆ ಕುಳಿತಿದ್ದಳು. ಅನಂತರ ಒಂದು ಸಲ ಆ ಸಣ್ಣ ಬಾಗಿಲ ಮೂಲಕ ಕೊಠಡಿಯಿಂದ ಹೊರಕ್ಕೆ ಹೋದಳು, ಪುನಃ ಹಿಂದಿರುಗಿ ಬಂದಳು, ಪುನಃ ಹೋದಳು, ಮತ್ತೆ ಬಂದಳು. ಮೂರು ನಾಲ್ಕು ಸಲ ಈ ರೀತಿ ಮಾಡಿ, ಅವಳು ಪುನಃ ಬರಲಿಲ್ಲ. ಜುಮೆಲೆಯು ಹೀಗೆ ಭಯದಿಂದ ಕಂದಿ ಕುಂದಿದ್ದುದನ್ನು ನಾನು ಹಿಂದೆ ಎಂದೂ ಕಂಡವನಲ್ಲ. ಇಂದು ಪುನಃ ಯಾವುದಾದರೊಂದು ಹೊಸತರದ ಘಟನೆಯು ಸಂಘಟಿಸಿರಬೇಕೆಂದು ನನ್ನ ಮನಸ್ಸಿಗೆ ಸ್ವಲ್ಪ ಸಂಶಯವಾಯಿತು; ಅಥವಾ ಹಾಗೆ ಸಂಘಟಿಸುವ ಸೂಚನೆಯಾದರೂ ತೋರಿರಬೇಕು, ಎಂದಂದುಕೊಂಡೆನು. ಜುಮೆಲೆಯು ಪುನಃ ಹಿಂದಿರುಗಿ ಬಾರದುದನ್ನು ಕಂಡು ನಾನು ಮೆಲ್ಲ ಮೆಲ್ಲಗೆ ಎದ್ದು ನೋಡಿದೆ; ಜುಮೆಲೆಯು ಹೊರಟುಹೋಗುವಾಗ ಕೊಠಡಿಯ ಮೂಲೆಯಲ್ಲಿದ್ದ ಆ ಸಣ್ಣ ಬಾಗಿಲನ್ನು ಮುಚ್ಚದೆ ಮರೆತು ಹೋಗಿದ್ದಳು; ಜುಮೆಲೆಯ ಇದೊಂದು ಅಜಾಗ್ರತೆಯಿಂದ ನನಗೆ ತುಂಬ ಭರವಸೆಯುಂಟಾಯಿತು. ಈ ಸಮಯದಲ್ಲಿ ದುಷ್ಟನಾದ ಫೂಲಸಾಹೇಬ ಮತ್ತೂ ಡಾಕಿನಿಯಾದ ಜುಮೆಲೆಯರಿಗೆ ಕಾಣದ ಹಾಗೆ ಓಡಿಹೋಗಬಹುದೆಂದು ತೋರಿತು. ಹೀಗೆ ಉದ್ದೇಶಪಟ್ಟು ನಾನು ಆ ಬಾಗಿಲ ಮೂಲಕ ಕೊಠಡಿಯಿಂದ ಹೊರಕ್ಕೆ ಬಂದು ಕಗ್ಗತ್ತಲಿಗೆ ಸಿಕ್ಕಿದೆನು. ಆ ಸ್ಥಳದಲ್ಲಿ, ನನ್ನನ್ನೇ ನಾನು ಕಾಣದ ಹಾಗೆ ಕತ್ತಲೆ ದಟ್ಟವಾಗಿ ಕವಿದಿದ್ದಿತು. ಆಗ ಜುಮೆಲೆಯ ಮರೆವು ನಿಜವಾದ ಮರೆವೆಂದು ಭಾವಿಸದೆ ನಾನು ಮಾಡಬೇಕಾದುದನ್ನು ಕುರಿತು ಆಲೋಚಿಸಿದೆನು. ಅನುಭವದಿಂದ ಎಲ್ಲವೂ ಸರಿಹೋಯಿತು. ಜುಮೆ

ಲೆಯು ನನ್ನನ್ನು ಆ ಕೊಠಡಿಯಿಂದ ಈ ಅಂಧಕಾರದ ಕೊಠಡಿಯಲ್ಲಿ ಬಂದಿಯನ್ನಾಗಿ ಮಾಡಬೇಕೆಂದು ಈ ರೀತಿ ಮಾಡಿರಬಹುದೆಂದು ಊಹಿಸಿದೆನು. ಆದರೂ ಧೈರ್ಯಮಾಡಿ ಮುಂದರಿಯುತ್ತಾ ಬಂದೆನು; ಬಹು ಇಕ್ಕಟ್ಟಾದ ದಾರಿ, ಮಧ್ಯಭಾಗದಲ್ಲಿ ನಿಂತು ಎರಡು ಕೈಗಳನ್ನೂ ನೀಡಿದರೆ ಎರಡು ಪಕ್ಕದ ಗೋಡೆಗಳೂ ಕೈಗೆ ನಿಲುಕುವ ಹಾಗಿದ್ದಿತು. ಮೇಲ್ಭಾಗದ ಛಾವಣಿಯು ಛಿದ್ರಶೂನ್ಯವಾಗಿದ್ದಿತು. ನಾನು ಸ್ವಲ್ಪ ದೂರ ಬಂದ ಮೇಲೆ ಇದಿರಿಗೆ ಸ್ವಲ್ಪ ತಡೆಯಾಯಿತು. ಮೆಲ್ಲಮೆಲ್ಲಗೆ ಅದನ್ನು ತಟ್ಟಿನೋಡಿದೆ, ಅದು ಗೋಡೆಯಲ್ಲ ಒಂದು ಮರದ ಬಾಗಿಲು. ಅದನ್ನು ಎಷ್ಟು ಬಲವಾಗಿ ತಳ್ಳಿದರೂ ತೆಗೆಯುವುದಕ್ಕೆ ಆಗಲಿಲ್ಲ; ಆದರೆ ಸ್ವಲ್ಪ ಬಲವಾಗಿ ನನ್ನ ಕಡೆಗೆ ಎಳೆಯಲಾಗಿ ಅದು ತೆರೆಯಿತು. ಮತ್ತೂ ಸಂಧ್ಯಾಕಾಲದ ಕಾಂತಿಹೀನವಾದ ಬೆಳಕು ಕಣ್ಣಿಗೆ ಬಿದ್ದಿತು. ಆಗ ನಾನು ಆ ಮಾರ್ಗವಾಗಿ ಹೊರಕ್ಕೆ ಹೊರಟು ಮತ್ತೊಂದು ಕೊಠಡಿಗೆ ಬಂದೆನು. ಕೂಡಲೇ ಆ ಬಾಗಿಲು ತನ್ನಷ್ಟಕ್ಕೆ ತಾನೇ ಮುಚ್ಚಿಕೊಂಡಿತು. ಅಂತಹ ಆಶ್ಚರ್ಯಕರವಾದ ಬಾಗಿಲನ್ನು ನಾನು ನೋಡಿದ್ದೇ ಇಲ್ಲ; ಹೊರಕ್ಕೆ ಬಂದು ತಿರುಗಿನೋಡಿದಾಗ ಅದು ಒಂದು 'ಅಲಮೇರಾ'ವೆನಂತೆ ಮಾರ್ಪಟ್ಟಿದ್ದಿತು. ಏನಾದರಾಗಲಿ, ಆ ಕೊಠಡಿಯಲ್ಲಿ ಯಾರೂ ಇರಲಿಲ್ಲ. ನಾನು ಕೂಡಲೆ ಕೆಳಗಿಳಿದು ಬಂದೆ. ಹೊರಗಿನಿಂದಲೇ ಈ ಕೊಠಡಿಯಲ್ಲಿನ ನಡವಳಿಯನ್ನೆಲ್ಲಾ ಕಂಡು ಸ್ತಂಭಿತನಾದೆನು. ಓಡಿಬಂದು ಜುಮುಲೆಯ ಕೈಯೊಳಗಿಂದ ಸೀಸೆಯನ್ನು ಕಸರಿಕೊಂಡೆನು.

ಅರಿಂದಮ—ನೀನು ನಮಗೆ ಮಾಡಿದ ಉಪಕಾರವನ್ನು ನಾವು ಬದುಕಿರುವವರೆಗೂ ಮರೆಯಲಾಗುವುದಿಲ್ಲ. ನೀನು ಬಾರದೇ ಇದ್ದಿದ್ದರೆ ಜುಮುಲೆಯು ನಿಜವಾಗಿಯೂ ಅಗ್ನಿದ್ರಾವಕದಿಂದ ನಮ್ಮಿಬ್ಬರನ್ನೂ ಸುಟ್ಟು ಕೊಲ್ಲುತ್ತಿದ್ದಳು. ನೀನು ಕುಲಸಮಳನ್ನು ಬಲ್ಲೆಯಾ ?

ಅರಿಂದಮನ ಬಾಯಲ್ಲಿ ಕುಲಸಮಳ ಹೆಸರನ್ನು ಕೇಳಿ, ಸಿರಾಜುದ್ದೀನನು ಏನೋ ಒಂದು ಬಗೆಯಾಗಿಹೋದನು. ಕೇಳಿದನು, ಕುಲಸಮಳು ಯಾರು ?

ಅರಿಂದಮ—ತಿಳಿಯದೆ, ತಮಿಜಾಜುದ್ದೀನರ ಮಗಳು.

ಸಿರಾಜ—ಬಲ್ಲೆ; ಆದರೆ ಈ ಫೂಲಸಾಹೇಬನ ದೆಸೆಯಿಂದ ಅವರಲ್ಲಿ ಯಾರೂ ಉಳಿದುಕೊಂಡಿರುವಂತೆ ತೋರಲಿಲ್ಲ.

ಅರಿಂದಮ—ಕುಲಸಮ ಬದುಕಿದ್ದಾಳೆ. ಕುಲಸಮೆಯ ತಂದೆ ಸತ್ತುಹೋದನು.

ಸಿರಾಜ—ಈ ವಿಚಾರವನ್ನು ಕುರಿತು ಇಲ್ಲಿ ಇವರ ಬಾಯಿಂದಲೇ ಕೊಂಚ-ಕೊಂಚ ಕೇಳಿದ್ದೇನೆ. ಅದೂ ಅಲ್ಲದೆ ಅರಿಂದಮನೆಂಬ ಯಾವನೋ ಪತ್ತೇದಾರನು ಇವರ ತಂತ್ರಗಳೆಲ್ಲವನ್ನೂ ಹೊರಗೆಡಹಿದ ನೆಂದೂ ಕೇಳಿದೆ. ಈಗ ಆತನ ಭಯದಿಂದಲೇ ಇವರು ಇಲ್ಲಿ ತಲೆಮರಸಿ ಕೊಂಡಿದ್ದಾರೆ. ಏನಾದರೂ ಆಗಲಿ, ಕುಲಸಮಳ ವಿಚಾರವಾಗಿ ತಮಗೆ ಇನ್ನೇನಾದರೂ ತಿಳಿದಿದೆಯೆ ? ಕುಲಸಮಳ ವರ್ತಮಾನವು ತಮಗೆ ಹೇಗೆ ತಿಳಿಯಿತು ? ಆ ಪತ್ತೇದಾರನೇ ಕುಲಸಮಳನ್ನು ಕಾಪಾಡಿದನೆಂದು ಕೇಳಿದೆ, ನಿಶ್ಚಯವೆ ?

ಅರಿಂದಮ—ಅರಿಂದಮನೆಂಬುದು ನನ್ನ ಹೆಸರೇ. ಕುಲಸಮಳು ನಿರಾಪದಳಾಗಿದ್ದಾಳೆ ; ಆಕೆಗಾಗಿ ನೀನು ಉದ್ವಿಗ್ನನಾಗಬೇಕಾಗಿಲ್ಲ.

ಅನಂತರ ಕುಲಸಮ ಮತ್ತು ಫೂಲಸಾಹೇಬರ ವಿಚಾರವಾಗಿ ತನಗೆ ತಿಳಿದಿದ್ದುದನ್ನೆಲ್ಲಾ ಅರಿಂದಮನು ಸಂಕ್ಷೇಪವಾಗಿ ಹೇಳಿದನು.

ಸಿರಾಜ—ಹಾಗಾದರೆ ಫೂಲಸಾಹೇಬ ಮತ್ತೂ ಜುಮಲೆ ಯರನ್ನು ದಸ್ತಗಿರಿ ಮಾಡುವ ತಂತ್ರವೇನಾದರೂ ನಡೆದಿದೆಯೆ ?

ಅರಿಂದಮ—ಜುಮಲೆಯನ್ನು ಇಂದು ಪುನಃ ಹಿಡಿಯಬಹು ದೆಂದು ತೋರುವುದಿಲ್ಲ. ಫೂಲಸಾಹೇಬನನ್ನು ಹಿಡಿದು ಮೇಲ್ಮಹಡಿಯ ಕೊಠಡಿಯಲ್ಲಿ ಇಟ್ಟುಬಂದಿದ್ದೇನೆ. ಅವನನ್ನು ಹಿಡಿದುಹಾಕಿದಾಗ ಅವನು ತನ್ನ ವಿಷದ ಸೂಜಿಯನ್ನು ತನ್ನ ಕೈಗೇ ಚುಚ್ಚಿಕೊಂಡಿದ್ದನು. ಈ ವೇಳೆಗೆ ಅವನು ಮೃತನಾಗಿರಬಹುದೆಂದು ತೋರುತ್ತದೆ. ನಡೆಯಿರಿ, ಮೂವ್ವರೂ ಮೇಲಕ್ಕೆ ಹೋಗೋಣ.

* * * * *

ಮೂರು ಮಂದಿಯೂ ಫೂಲಸಾಹೇಬನನ್ನು ನೋಡುವುದಕ್ಕೆ ಹೊರಟರು. ಅರಿಂದಮನು ಫೂಲಸಾಹೇಬನಿಗೆ ಕೈಕೋಳಗಳನ್ನು ತೊಡಿಸಿ ಯಾವ ಕೊಠಡಿಯಲ್ಲಿ ಉರುಳಿಸಿ ಬಂದಿದ್ದನೋ ಈಗ ಆ ಕೊಠಡಿಗೆ ಮೂರು ಮಂದಿಯೂ ಪ್ರವೇಶಿಸಿದರು.

ಅಲ್ಲಿ ಫೂಲಸಾಹೇಬನು ಇರಲಿಲ್ಲ; ಎಲ್ಲರೂ ಬಹಳ ಮಟ್ಟಿಗೆ ವಿಸ್ಮಯಗೊಂಡರು. ನೋಡಿಯೂ ಕೇಳಿಯೂ ಅರಿಂದಮನು ತಾನು ಕೇವಲ ದಡ್ಡನೆಂದು ಭಾವಿಸಿಕೊಂಡನು.

---

## ಒಂಬತ್ತನೆಯ ಪರಿಚ್ಛೇದ

### ಗುಪ್ತದ್ವಾರ

ಬಹಳ ಹೊತ್ತಿನ ಮೇಲೆ ಸಿರಾಜುದ್ದೀನನು—ತಾವು ಫೂಲಸಾಹೇಬನನ್ನು ಬಂಧಿಸಿ ಇಟ್ಟಿದ್ದುದು ಇದೇ ಸ್ಥಳದಲ್ಲಿಯೆ? ನಾನು ಇದಕ್ಕೆ ಮೊದಲು ಇಲ್ಲಿಗೆ ಒಂದು ಸಲ ಬಂದಿದ್ದೆನಷ್ಟೆ? ಆಗ ಈ ಕೊಠಡಿಯಲ್ಲಿ ಯಾರೂ ಇರಲಿಲ್ಲ.

ಅರಿಂದಮ—ಇದೇ ಕೊಠಡಿಯಲ್ಲಿಯೇ. ಬಾಗಿಲು ಒಡೆದಿರುವುದು ಕಾಣುವುದಿಲ್ಲವೇ? ಈ ಕೊಠಡಿಗೆ ಮಹತ್ತರವಾದ ಗುಣವೊಂದಿದೆ, ಜುಮೆಲಿಯು ಈ ಕೊಠಡಿಯೊಳಕ್ಕೆ ನುಗ್ಗಿ ಛಾಯಾಪ್ರತಿಮೆಯ ಹಾಗೆ ಅದೃಶ್ಯಳಾದಳು; ಈಗ ಪುನಃ ಇದೊಂದು ಅಸಂಭವ ವ್ಯಾಪಾರವು ನಡೆದಿದೆ.

ಸಿರಾಜ—ಈ ಕೊಠಡಿಗೆ ಒಂದು ಗುಣ ಇರುವುದೆಂದರಲ್ಲ. ನಾನು ಆ ಅಂಧಕಾರಮಯವಾದ ಸಣ್ಣ ಮಾರ್ಗವಾಗಿ ಹೊರಟು ಈ ಕೊಠಡಿಯಲ್ಲಿಯೇ ಹೊರಕ್ಕೆ ಬಂದದ್ದು. ಇಲ್ಲಿ ಕಾಣಿಸುವ ಅಲಮಾರುವಿನ ಒಳಗಡೆ ಒಂದು ದಾರಿಯಿದೆ. ನಾನು ತಮಗೆ ಗುಪ್ತದ್ವಾರದ ವಿಷಯವಾಗಿ ಹೇಳಿದೆನಲ್ಲಾ ಆ ಗುಪ್ತದ್ವಾರವು ಈ ಅಲಮೇರಾವಿನ ಒಳಗೆ ಇದೆ. ಇಲ್ಲಿ ನೋಡಿ ಎಂದು ಹೇಳಿ ಅಲಮಾರುವನ್ನು ಆತನು

ಎಳೆದು ತೆರೆದನು ಮತ್ತು ಒಳಗಡೆ ಇರುವ ಒಂದು ಮರದ ಚಕ್ಕೆಯನ್ನು ಸ್ವಲ್ಪ ಒತ್ತಿದ ಕೂಡಲೇ ಅದು ಸ್ವಲ್ಪ ದೂರ ಒಳಭಾಗಕ್ಕೆ ಸರಿಯಿತು. ಹಾಗೆಯೇ ಒಳಗಡೆಯ ಆ ಅಂಧಕಾರ ಮಾರ್ಗವು ಗೋಚರವಾಯಿತು. ಜುಮಲೆಯು ಈ ಮಾರ್ಗವಾಗಿಯೇ ನಿಮ್ಮ ಬಳಿಯಿಂದ ಅಂತರ್ಹಿತಳಾಗಿ ನನ್ನ ಕೊಠಡಿಗೆ ಬಂದು ಕುಳಿತಿದ್ದಳು ಎಂದು ಹೇಳಿದನು.

ಅರಿಂದಮ—ಹಾ! ಈಗತಾನೇ ಎಲ್ಲವೂ ತಿಳಿಯಿತು.

ಹೀಗೆಂದು ಹೇಳಿ ಅರಿಂದಮನು ದೇವೇಂದ್ರವಿಜಯ ಮತ್ತೂ ಸಿರಾಜುದ್ದೀನರನ್ನು ಸಂಗಡ ಕರೆದುಕೊಂಡು ಆ ಅಲಮೇರಾಹಿನ ರಹಸ್ಯಮಾರ್ಗವಾಗಿ ಒಳಕ್ಕೆ ಪ್ರವೇಶಿಸಿದನು. ಯಾವ ಕೊಠಡಿಯಲ್ಲಿ ತಾನು ಬಂದಿಯಾಗಿದ್ದನೋ ಆ ಕೊಠಡಿಯೊಳಕ್ಕೆ ಸಿರಾಜುದ್ದೀನನು ಅರಿಂದಮನನ್ನು ಕರೆದುಕೊಂಡುಹೋದನು. ಆ ಕೊಠಡಿಯಿಂದ ಹೊರಕ್ಕೆ ಹೋಗುವುದಕ್ಕೆ ಯಾವ ಮಾರ್ಗವೂ ಇರಲಿಲ್ಲವಾಗಿ ಆ ಗುಪ್ತ ಮಾರ್ಗದಿಂದಲೇ ಎಲ್ಲರೂ ಹಿಂದಿರುಗಿದರು.

ಅನಂತರ ಮೂರು ಮಂದಿಯೂ ಸೇರಿ ಕೊಠಡಿಗಳನ್ನೆಲ್ಲಾ ಒಂದೊಂದನ್ನಾಗಿ ಹುಡುಕುತ್ತಾ ಅಲೆದಾಡಿದರು. ಫೂಲಸಾಹೇಬನನ್ನಾಗಲೀ ಅಥವಾ ಜುಮಲೆಯನ್ನಾಗಲೀ ಎಲ್ಲಿಯೂ ಕಾಣಲಿಲ್ಲ.

ಇತ್ತಲಾಗಿ ಸಂಧ್ಯೆಯು ಕಳೆಯುತ್ತ ಬಂದುದನ್ನು ಕಂಡು ರಾತ್ರಿಯ ಕತ್ತಲೆಯು ದಟ್ಟವಾಗಿ ವನಭೂಮಿಯನ್ನೆಲ್ಲಾ ಆವರಿಸಿಬಿಟ್ಟಿತು. ದೂರದ ಊರಿನ ಕಲರವವು ಬರುಬರುತ್ತ ಕಡಿಮೆಯಾಗುತ್ತ ಬಂದಿತು. ಆಗ ಎಲ್ಲರೂ ನಿರುದ್ಯಮಚಿತ್ತರಾಗಿ ಆ ತೋಟದ ಮನೆಯನ್ನು ಬಿಟ್ಟು ಹೊರಕ್ಕೆ ಬಂದರು.

ಅಂದಿನ ಅನುಸಂಧಾನವು ಅಲ್ಲಿಗೇ ಮುಗಿಯಿತು. ಮೂವ್ವರೂ ಮುಗಲಿಗೆ ಪ್ರಯಾಣಮಾಡಿದರು.

---

*

## ಹತ್ತನೆಯ ಪರಿಚ್ಛೇದ

### ಭೂಗರ್ಭದಲ್ಲಿ

ಇಲ್ಲಿ ಫೂಲಸಾಹೇಬ ಮತ್ತೂ ಜುಮಲೆಯರ ವಿಷಯವಾಗಿ ಒಂದೆರಡು ಮಾತು ಹೇಳಿದರೆ ಅಸಂಗತವಾಗದೆಂದು ತೋರುತ್ತದೆ.

ಜುಮಲೆಯನ್ನು ಕಂಡುಹಿಡಿಯಬೇಕೆಂದು ಅರಿಂದಮ, ದೇವೇಂದ್ರ ವಿಜಯ ಮತ್ತೂ ಸಿರಾಜುದ್ದೀನ ಈ ಮೂರು ಮಂದಿಯೂ ಸೇರಿ ಈ ಕೊಠಡಿ, ಆ ಕೊಠಡಿ ಎಂದು ಸುತ್ತುತ್ತಿದ್ದಾಗ, ಅದೇ ಸಮಯದಲ್ಲಿ ಪಾತಾಳಪುರಿಯ ಮಧ್ಯೆ, ಒಂದು ಕೊಠಡಿಯಲ್ಲಿ ಜುಮಲೆಯು ವಿಷಣ್ಣ ಮುಖದಿಂದ ನಿಂತು ಸಜಲನೇತ್ರಳಾಗಿ, ಮೂರ್ಛೆಗೊಂಡು ಅಚೇತನನಾಗಿ ಬಿದ್ದಿರುವ ಫೂಲಸಾಹೇಬನ ಶರೀರವನ್ನು ಬಹು ಕಾತರಳಾಗಿ ನೋಡು ತ್ತಿದ್ದಳು. ಆ ಪಾತಾಳಪುರಿಯ ಒಂದು ಪಾರ್ಶ್ವದಲ್ಲಿ ಒಂದು ಸಣ್ಣ ದೀಪವು ಅಲ್ಲಿಯ ದಟ್ಟವಾದ ಅಂಧಕಾರದ ಮಧ್ಯೆ ಬಹು ತೇಜೋ ಹೀನವಾಗಿ ಉರಿಯುತ್ತಿದ್ದಿತು. ಆ ದೀಪದ ಸಣ್ಣ ಜ್ವಾಲೆಯು ದಟ್ಟವಾದ ಅಂಧಕಾರದ ಮಧ್ಯೆ ಸಿಂಧೂರದ ಹಾಗೆ ಅಚ್ಚಕೆಂಪಾಗಿದ್ದಿತು. ಆ ಪಾತಾಳಪುರಿಯ ನಾಲ್ಕೂ ಕಡೆ ಮುಚ್ಚಲ್ಪಟ್ಟಿದ್ದಿತು. ಯಾವ ಮಾರ್ಗವಾಗಿ ಅದರೊಳಕ್ಕೆ ಪ್ರವೇಶ ಮಾಡಬೇಕೆಂಬುದನ್ನು ಜುಮಲೆಯು ಮಾತ್ರ ಬಲ್ಲಳು. ನಮಗೆ ಅದನ್ನು ತಿಳಿದಿರಬೇಕಾದ ಆವಶ್ಯಕತೆಯೇನೂ ಕಂಡುಬರಲಿಲ್ಲ.

ಜುಮಲೆಯು ಸೀಸೆಯಿಂದ ಎರಡು ಮೂರು ತರದ ಔಷಧಿಗಳನ್ನು ತೆಗೆದು ಎರಡು ಮೂರು ಸಲ ಫೂಲಸಾಹೇಬನ ಬಾಯಿಗೆ ಹಾಕಿದಳು. ಔಷಧವು ಕಟವಾಯಿಂದ ಹರಿದು ನೆಲದ ಪಾಲಾಯಿತು.

ಇದರಿಂದ ಕೊಂಚವಾದರೂ ಪ್ರಯೋಜನವಾಗದ ಕಾರಣ ಜುಮಲೆಯು ಹರಿತವಾದೊಂದು ದೊಡ್ಡ ಚಾಕುವನ್ನು ಎತ್ತಿ ಕೊಂಡಳು. ಆ ಚೂರಿಯಿಂದ ಫೂಲಸಾಹೇಬನ ಬಲದ ಕೈಯಲ್ಲಿ ಗಾಯ ಮಾಡಿದಳು. ರಕ್ತಪ್ರವಾಹವು ಪ್ರಬಲವೇಗದಿಂದ ಹರಿಯಿತು. ಬರು

ಬರುತ್ತ ರಕ್ತಧಾರೆಯು ಕಡಿಮೆಯಾದಾಗ ಜುಮುಲೆಯು ಆ ಗಾಯಕ್ಕೆ ಬಾಯಿಹಾಕಿ ರಕ್ತವನ್ನು ಹೀರಿ ಉಗುಳುತ್ತ ಬಂದಳು. ಹೀಗೆ ಬಹಳ ಹೊತ್ತು ಮಾಡಿದ ಮೇಲೆ ಫೂಲಸಾಹೇಬನಿಗೆ ಸ್ವಲ್ಪ ಜ್ಞಾನ ಬಂದಿತು. ಅವನು ಮೃತಶಯ್ಯೆಯಲ್ಲಿರುವ ದುರ್ಬಲ ರೋಗಿಯು ಹಾಗೆ ಏಳುವುದ ಕ್ಕಾಗಿ ಬಾರಿಬಾರಿಗೂ ವ್ಯರ್ಥವಾಗಿ ಬಲಪ್ರಯೋಗ ಮಾಡುತಲಿದ್ದನು. ಕಡೆಗೆ ನಿಶ್ಚೇಷ್ಟನಾಗಿ ಬಿದ್ದುಕೊಂಡು ಜುಮುಲೆಯನ್ನು ತೀವ್ರ ದೃಷ್ಟಿಯಿಂದ ನೋಡಿ—ಪಿಶಾಚಿ, ನೀನು ಯಾರೆ ? ನೀನು ನನ್ನನ್ನು ಇದಾವ ನರಕಕ್ಕೆ ತಂದುಬಿಟ್ಟೆಯೆ ? ಹೋಗು-ಹೋಗು-ಹೋಗು. ಇಲ್ಲಿಂದ ಈಗಲೇ ದೂರಕ್ಕೆ ತೊಲಗಿಹೋಗು; ನರಕಕ್ಕೆ ತಂದಿರುವೆ. ಇಲ್ಲಿಯೂ ನಾನು ಸುಖಿಯಾಗಿರಲು ಬಿಡಲೊಲ್ಲೆಯಲ್ಲೆ ! ಎಂದು ಗದ್ದಿಸಿದನು.

ಹೀಗೆಂದು ಹೇಳಿ ಫೂಲಸಾಹೇಬನು ಮತ್ತೊಂದು ಕಡೆಗೆ ಮುಖವನ್ನು ತಿರುಗಿಸಿಕೊಂಡು ಬುಸಬುಸಗುಟ್ಟತೊಡಗಿದನು.

ಜುಮುಲೆಯು ಆ ಗಾಯಕ್ಕೆ ಕಟ್ಟುಕಟ್ಟಿ, ಫೂಲಸಾಹೇಬನಿಗೆ ಪುನಃ ಮತ್ತೆ ಯಾವುದೋ ಔಷಧ ಕುಡಿಸಿದಳು. ಅದರಿಂದ ಸ್ವಲ್ಪ ಹೊತ್ತಿನೊಳಗಾಗಿ ಫೂಲಸಾಹೇಬನ ದುರ್ಬಲ ಶರೀರದ ದೌರ್ಬಲ್ಯವು ಬಹು ಮಟ್ಟಿಗೆ ಕಡಿಮೆಯಾಯಿತು. ಫೂಲಸಾಹೇಬನು ಮೆಲ್ಲಮೆಲ್ಲಗೆ ಎದ್ದು ಕುಳಿತನು.

ಜುಮುಲೆ—ಈಗ ಹೇಗಿದೆ ? ಇನ್ನೂ ಏನಾದರೂ ಬಾಧೆಯುಂಟೆ ?

ಫೂಲಸಾಹೇಬ—(ಕ್ಷೀಣಸ್ವರದಲ್ಲಿ) ತಲೆಯಲ್ಲಿ ತುಂಬ ನೋವಾಗಿದೆ. ನೀನು ನನ್ನನ್ನು ಇಲ್ಲಿಗೇಕೆ ಕರೆದು ತಂದೆ ?

ಜುಮುಲೆ—ಅರಿಂದಮನ ವರ್ತಮಾನವು ಮರೆತುಹೋಯಿತೇನು ? ಮೊದಲು ಅರಿಂದಮನು ನನ್ನನ್ನು ಹಿಡಿವುದಕ್ಕೋಸ್ಕರವಾಗಿ ಪ್ರಯತ್ನ ಪಟ್ಟಾಗ ನೀನು ಇಲ್ಲಿ ಇರಲಿಲ್ಲ. ಅವನು ನನ್ನ ಮಲಗುವ ಮನೆಯ ವರೆಗೂ ಹಿಂದಟ್ಟಿ ಬಂದನು. ನಾನು ಆ ಕೊಠಡಿಯಲ್ಲಿ ಆಲಮೇರಾವಿನ ಗುಪ್ತದ್ವಾರದ ಮಾರ್ಗವಾಗಿ ಸಿರಾಜುದ್ದೀನನ ಕೊಠಡಿಗೆ ಹೋಗಿ

ತಪ್ಪಿಸಿಕೊಂಡೆ; ಆಗ ಸಿರಾಜುದ್ದೀನನು ನಿದ್ರಿಸುತ್ತಿದ್ದನು. ಸ್ವಲ್ಪ ಹೊತ್ತಿನ ಮೇಲೆ ನಾನು ಪುನಃ ಆ ಗುಪ್ತದ್ವಾರದ ಹಿಂದುಗಡೆ ಇದ್ದುಕೊಂಡು ಆಲಿಸಿ ಕೇಳಿದೆ. ಅರಿಂದಮನಿಗೂ ನಿನಗೂ ಏನೋ ಮಾತುಕತೆಗಳಾಗುತ್ತಿದ್ದುವು. ಒಡನೆಯೇ ನಿಮ್ಮಿಬ್ಬರಿಗೂ ಕೈಕೈ ಕಲೆಯಿತು; ನಾನು ಪಕ್ಕದಲ್ಲಿಯೇ ಇದ್ದು ನೋಡುತ್ತಿದ್ದೆನು. ಕಡೆಗೆ ನೀನು ನಿನ್ನ ವಿಷದ ಸಲಾಕಿಯನ್ನು ಕೈಗೆ ಚುಚ್ಚಿಕೊಂಡು ಪ್ರಜ್ಞೆತಪ್ಪಿ ಬಿದ್ದುಕೊಂಡೆ. ಅರಿಂದಮನು ನಿನ್ನ ಕೈಕಾಲುಗಳಿಗೆ ಕೋಳಗಳನ್ನೂ ಬೇಡಿಯನ್ನೂ ತೊಡಿಸಿ ನಿನ್ನನ್ನು ಕೆಡಹಿಬಿಟ್ಟು ಹೋದನು. ಅವನು ಹೊರಟುಹೋದ ಮೇಲೆ ನಾನು ಒಬ್ಬಳೇ ನಿನ್ನನ್ನು ಎತ್ತಿಕೊಂಡು ಈ ಕೊಠಡಿಗೆ ತಂದೆನು. ಇಲ್ಲಿಗೆ ಬಂದನಂತರ ಇದರ ಪಾರ್ಶ್ವದಲ್ಲಿಯ ಅಂಧಕೂಪದೊಳಗೆ ಮನುಷ್ಯನು ನರಳಾಡುವ ಸದ್ದು ಕೇಳಿಸಿತು; ಆದರೆ ಇಲ್ಲಿಂದ ಯಾವುದೂ ಕಾಣಿಸಲಿಲ್ಲ. ಆ ನರಳಾಟದ ಕಾರಣವೂ ಸಹ ಸರಿಯಾಗಿ ಗೊತ್ತಾಗದೇ ಹೋದ್ದರಿಂದ ಇಲ್ಲಿಂದ ಮೇಲಕ್ಕೆ ಹೋಗಿ ನೋಡಿದೆನು. ಇದರ ಮೇಲ್ಭಾಗದ ಕೊಠಡಿಯಲ್ಲಿರುವ ಅಂಧಕೂಪದ ಬಾಗಿಲೊಳಗೆ ಒಂದು ಹಗ್ಗವು ಕಟ್ಟಿತ್ತು. ಒಳಗಡೆ ಬಗ್ಗಿ ನೋಡಲಾಗಿ ಎಲ್ಲವೂ ಗೊತ್ತಾಯಿತು. ಆಗ ಆ ಗಂಧಕ ದ್ರಾವಕದಿಂದ ಅರಿಂದಮ ಮತ್ತು ದೇವೇಂದ್ರವಿಜಯರನ್ನು ಸುಟ್ಟು ಕೊಲ್ಲಬೇಕೆಂದು ಪ್ರಯತ್ನಿಸಿದೆನು; ಆದರೆ ಕಾರ್ಯತಃ ಏನೂ ಸಾಗಲಿಲ್ಲ. ಸಿರಾಜುದ್ದೀನನ ಕೊಠಡಿಯಿಂದ ಹೊರಟುಬಂದಾಗ ಆ ಗುಪ್ತದ್ವಾರವನ್ನು ಮುಚ್ಚಿ ಬರುವುದು ಮರೆತುಹೋಯಿತು. ಇಂತಹ ಸಮಯದಲ್ಲಿ ಸಿರಾಜುದ್ದೀನನು ಬಂದು ನನ್ನ ಕೈಯಿಂದ ಸೀಸೆಯನ್ನು ಕಸರಿ ತೆಗೆದುಕೊಂಡನು. ಆಗಲೇ ಪ್ರತೀಕಾರ ಮಾಡುವುದು ಸುಲಭವಲ್ಲವೆಂದು ಯೋಚಿಸಿ ಇಲ್ಲಿಗೆ ಬಂದು ನಿನ್ನ ಶುಶ್ರೂಷೆ ಮಾಡ ತೊಡಗಿದೆನು. ಬಹುವಿಧವಾಗಿ ಪ್ರಯತ್ನಪಟ್ಟು, ಏತರಿಂದಲೂ ನಿನಗೆ ಜ್ಞಾನ ಬಾರದಿರುವುದನ್ನು ಕಂಡು, ತುಂಬ ಯೋಚನೆಗೆ ಕಾರಣವಾಯಿತು. ಕಡೆಗೆ ನಿನ್ನ ಕೈಯೊಳಗಿನ ಯಾವ ನರಕ್ಕೆ ಆ ಸೂಜಿ ತಗಲಿದ್ದಿತೋ ಆ ನರವನ್ನು ಚೂರಿಯಿಂದ ಕತ್ತರಿಸಿಹಾಕಿದೆನು;

ಹಾಗೆಯೇ ಆ ಗಾಯಕ್ಕೆ ಬಾಯೊತ್ತಿ ರಕ್ತವನ್ನು ಹೀರಿ ತೆಗೆದೆನು. ರಕ್ತದ ಸಂಗಡ ವಿಷದ ಕ್ರೌರ್ಯವು ಬಹು ಮಟ್ಟಿಗೆ ತೊಲಗಿಹೋಯಿತು. ನಂತರ ನಿನಗೆ ಪ್ರಜ್ಞೆ ಬಂದಿತು.

ಫೂಲಸಾಹೇಬ—ಹಾಗಾದರೆ ಸಿರಾಜುದ್ದೀನನೂ ಕೈತಪ್ಪಿ ಹೋದ! ಈ ಸಿರಾಜುದ್ದೀನನ ನೆಪದಿಂದ ಕುಲಸಮೆಯ ಬಳಿಯಲ್ಲಿ ಹತ್ತೆಂಟು ಸಾವಿರ ರೂಪಾಯಿ ಬರಮಾಡಿಕೊಳ್ಳಬಹುದು ಎಂದು ಕೊಂಡಿದ್ದೆನು; ಈಗ ಅದಕ್ಕೂ ಮಾರ್ಗವಿಲ್ಲ.

ಜುಮಲೆ—ಅರಿಂದಮನು ಬದುಕಿರುವವರೆಗೆ ನಮ್ಮ ಸಂಕಲ್ಪಗಳೊಂದೂ ನೆರವೇರುವ ಹಾಗಿಲ್ಲ.

ಫೂಲಸಾಹೇಬ—ಈಗ ಅದು ಚೆನ್ನಾಗಿ ತಿಳಿಯಬಂದಿತು; ಅರಿಂದಮನನ್ನು ಕೊಂದುಹಾಕದಿದ್ದರೆ ನಮ್ಮಗಳ ಅದೃಷ್ಟವು ಸುಪ್ರಸನ್ನವಾಗುವುದೇ ಇಲ್ಲ. ಏನು ಮಾಡಿದರೆ ಅರಿಂದಮನು ಬೇಗ ಸಾಯುವನೋ, ಆ ಪ್ರಯತ್ನವನ್ನು ಎಲ್ಲಕ್ಕೂ ಮೊದಲು ಮಾಡುತ್ತೇನೆ.

---

ಶ್ರೀ

# ಮಾಯಾವಿ

## ೨ನೆಯ ಭಾಗ



## ಒಂದನೆಯ ಪರಿಚ್ಛೇದ

### ಭಯಂಕರ ಸನ್ನಾಹ

ಅನಂತರ ಎರಡು ತಿಂಗಳು ಕಳೆಯಿತು. ಆ ಎರಡು ತಿಂಗಳ ಮಧ್ಯೆ ಪಾಠಕರ ಹೃದಯದಲ್ಲಿ ನಿದ್ರಿಸುತ್ತಿರುವ ವಿಸ್ಮಯವನ್ನು ಎಚ್ಚರಗೊಳಿಸುವಂತಹ ಭೀಷಣವೂ ರೋಮಾಂಚಕರವೂ ಆದ ಯಾವುದೊಂದು ಘಟನೆಯೂ ಘಟಿಸಲಿಲ್ಲ. ಈ ಮಧ್ಯೆ, ಸಿರಾಜುದ್ದೀನನಿಗೂ ಕುಲಸುಮೆಗೂ ಮದುವೆಯಾಗಿ ಆ ದಂಪತಿಗಳು ಸುಖಸಂತೋಷಗಳಿಂದಿರುವರೆಂಬುದನ್ನು ಕೇಳಿ, ಉದಾರಚಿತ್ತರಾದ ನಮ್ಮ ಪಾಠಕ ಪಾಠಕಿಯರು ನಿಶ್ಚಿಂತರಾಗುವರೆಂದು ಊಹಿಸುತ್ತೇವೆ. ಹಾಗೆಯೇ ಫೂಲಸಾಹೇಬನನ್ನು ಹುಡುಕುವುದರಲ್ಲಿ ಶ್ರೇಷ್ಠ ಪತ್ತೇದಾರನಾದ ಅರಿಂದಮನ ಎರಡು ತಿಂಗಳ ದೀರ್ಘ ಕಾಲವು ವ್ಯರ್ಥವಾಗಿ ವ್ಯಯವಾಯಿತೆಂಬುದನ್ನು ಕೇಳಿ ಪಾಠಕ ಪಾಠಕಿಯರು ಮರುಗಬಹುದು. ಆದರೆ ಅರಿಂದಮನು ನಿರುತ್ಸಾಹಿಯಾಗಿ ಕೆಲಸಮಾಡದೆ ಕುಳಿತಿರಲಿಲ್ಲ. ಕಾಲವು ಕಳೆದುಹೋದಹಾಗೆಲ್ಲಾ ಅರಿಂದಮನು ಫೂಲಸಾಹೇಬನಿಗೋಸ್ಕರ ಅಧೈರ್ಯಗೊಳ್ಳುತ್ತಿರುವನು. ಈ ಎರಡು ತಿಂಗಳುಗಳಲ್ಲಿ ಆತನಿಗೆ ಆಹಾರದಲ್ಲಿ ರುಚಿಯಿಲ್ಲ; ನಿದ್ರೆಯಲ್ಲಿ ಸುಖವಿಲ್ಲ; ಮನಸ್ಸಿಗೆ ಶಾಂತಿಯಿಲ್ಲ; ಈ ಕಾರಣದಿಂದಲೇ ಅವನಿಗೆ ಆರೋಗ್ಯದ ಕಡೆ ಗಮನವೇ ಇಲ್ಲ. ಇಷ್ಟು ಪರಿಶ್ರಮಗೊಂಡರೂ ಕೈಗೊಂಡ ಕಾರ್ಯಸಾಧನೆಯ ವಿಚಾರದಲ್ಲಿ ಕೊಂಚವಾದರೂ ಸಾರ್ಥಕತೋರಲಿಲ್ಲ.

ಇತ್ತಲಾಗಿ ಅರಿಂದಮನು ಫೂಲಸಾಹೇಬನನ್ನು ಹಿಡಿವುದರಲ್ಲಿ ತನಗೆ ಪ್ರಾಣಾಪಾಯ ಸಂಭವಿಸಿದರೂ ಸಂಭವಿಸಲೆಂದು ಪ್ರಯತ್ನಪಡು ತ್ತಿರುವನು. ಇದೇ ಸಮಯದಲ್ಲಿ ನಗರದ ಹೊರಭಾಗದಲ್ಲಿ ಗಹನ ವಾದೊಂದು ಅರಣ್ಯ; ಅದರ ಮಧ್ಯದಲ್ಲಿ ಅರಿಂದಮನ ಮರಣವನ್ನು ಬಯಸುವ ಭಯಂಕರವಾದೊಂದು ದುರಾಲೋಚನೆ ನಡೆಯುತ್ತಿದೆ.

ಅರಿಂದಮನು ಸಿರಾಜುದ್ದೀನನನ್ನು ಯಾವ ಮನೆಯಿಂದ ಹಿಡಿಸಿ ದನೋ ಆ ಮನೆಯನ್ನು ಅತಿಕ್ರಮಿಸಿ ಈಶಾನ್ಯಮುಖವಾಗಿ ಬಹುದೂರ ನಡೆದರೆ ವಿಸ್ತಾರವಾದೊಂದು ಮಾವಿನ ತೋಟವು ಕಾಣಿಸುವುದು. ಆ ತೋಟದ ಹೆಸರು 'ಕಾಂಪಾ' ಎಂದು. 'ಕಾಂಪಾ'ವಿನ ನಾಲ್ಕು ಕಡೆಗಳಲ್ಲಿಯೂ ದೊಡ್ಡ ದೊಡ್ಡ ಮರಗಳು! ವಿಸ್ತಾರವಾದ ಅರಣ್ಯ!! ಅದರಲ್ಲಿ ಗಭೀರವಾದ ನಿಸ್ತಬ್ಧತೆ!!!

ರಾತ್ರಿ; ಚಂದ್ರೋದಯವಾಗಿದೆ; ಬಹುಳ ಸಪ್ತಮಿಯ ಕ್ಷೀಣ ಚಂದ್ರ. ಕ್ಷೀಣಚಂದ್ರನ ಬೆಳಕು ವನಮಧ್ಯೆ ಅಷ್ಟು ಚೆನ್ನಾಗಿ ಪ್ರವೇಶ ಮಾಡುವುದು ಸಾಧ್ಯವಿರಲಿಲ್ಲ; ಅಲ್ಲಲ್ಲಿ ಕೊಂಚ ಕೊಂಚ; ನೋಡಿದರೆ ಕೇವಲ ಅಸ್ಪಷ್ಟವಾಗಿ ಕಾಣಿಸುತ್ತಿದೆ; ಆದರೆ, ಆ ವನದ ಪಾರ್ಶ್ವದಲ್ಲಿ, ಕಾಳೂರಾಯನ ಹಳೆಯ ಮನೆ ಇರುವ ಭಾಗದಲ್ಲಿ, ಬಹು ಮಟ್ಟಿಗೆ ಬಯಲಾಗಿರುವುದರಿಂದ ಅಲ್ಲಿ ಚಂದ್ರಿಕೆಯು ನಿರ್ವಿಘ್ನವಾಗಿ ವ್ಯಾಪಿಸಿತ್ತು. ಏನಾದರೇನು, ಆ ಭೀಷಣಸ್ಥಳದಲ್ಲಿ ಬೆಳದಿಂಗಳೂ ಬಹು ಭಯಂಕರ ವಾಗಿ ತೋರುತ್ತಿರುವುದು.

ಈ ಅಡವಿಯ ಮಧ್ಯೆ ಇರುವ ನಿರ್ಜನವಾದ ಮಂದಿರವು ಒಬ್ಬ ಡಕಾಯಿತನಿಂದ ಸ್ಥಾಪಿತವಾದದ್ದು. ಬಹು ದಿನಗಳಿಗೆ ಮುಂಚೆ ಈ ಮನೆ ಯಲ್ಲಿ ಲೆಕ್ಕವಿಲ್ಲದಷ್ಟು ನರಬಲಿಗಳು ನಿರಾಂತಕವಾಗಿ ನಡೆದುಹೋಗಿರು ವುದು ಮಾತ್ರವಲ್ಲದೆ ಎಷ್ಟೋ ಜನರ ತಲೆಗಳನ್ನು ಅವರವರ ಶರೀರದಿಂದ ಬೇರ್ಪಡಿಸುವುದಕ್ಕಾಗಿ ರಹಸ್ಯವಾದ ಸಮಾಲೋಚನೆಗಳೂ ಇಲ್ಲಿ ನಡೆದಿರುವವು. ಈ ದಿನ, ಈ ಬಹುಳ ಸಪ್ತಮಿಯ ಮಧ್ಯರಾತ್ರಿಯಲ್ಲಿ ಅನೇಕರು ಒಟ್ಟುಗೂಡಿ ಮಂದಿರದ ಬಾಗಿಲನ್ನು ಮುಚ್ಚಿ ಅಂತಹದೇ

ಒಂದು ಭಯಂಕರ ದುರಾಲೋಚನೆಯಲ್ಲಿ ಮಗ್ನರಾಗಿದ್ದಾರೆ. ಈ ದುರಾಲೋಚನೆಗಾರರ ನಡುವೆ ಸಿಕ್ಕಿದ ಹೊಗೆಯುಸೊಪ್ಪು ಮತ್ತೂ ಸಿದ್ಧಪತ್ರೆ ಇವು ಕ್ಷಣ ಕ್ಷಣಕ್ಕೂ ಸುಟ್ಟು ಬೂದಿಯಾಗುತ್ತಲಿವೆ. ಮಂದಿರದೊಳಗೆ ನಾಲ್ಕೂ ಕಡೆಯಲ್ಲಿ ಗಾಳಿಯ ಸಂಚಾರಕ್ಕೂ ಅವಕಾಶ ವಿಲ್ಲದ ಹಾಗೆ ಬಾಗಿಲುಗಳನ್ನೂ ಕಿಟಕಿಗಳನ್ನೂ ಮುಚ್ಚಿದ್ದುದರಿಂದ ಬಿಡುವಿಲ್ಲದೆ ಹೊರಡುತ್ತಿದ್ದ ಹೊಗೆಯು ಮಂದಿರದಲ್ಲಿಯೇ ನಿಬಿಡ ವಾಯಿತು. ಒಂದು ಕಡೆಯಲ್ಲಿ ಒಂದು ದೀಪವಿದ್ದಿತು. ಅದು ಆ ಧೂಮರಾಶಿಯನ್ನು ಭೇದಿಸಿಕೊಂಡು ತನ್ನ ಬೆಳಕನ್ನು ವಿಸ್ತಾರ ಗೊಳಿಸುವುದು ಅಸಾಧ್ಯವೆಂದರಿತು ಕ್ರಮ ಕ್ರಮವಾಗಿ ಕಾಂತಿಹೀನ ವಾಗುತಲಿತ್ತು. ಇಂತಹ ಸಮಯದಲ್ಲಿ ಮುಚ್ಚಿದ್ದ ಬಾಗಿಲನ್ನು ಯಾರೋ ತಟ್ಟುವ ಶಬ್ದವು ಮಂದಿರ ಮಧ್ಯದಲ್ಲಿ ಪ್ರತಿಧ್ವನಿತವಾಯಿತು.

ಒಳಗಿದ್ದವರಲ್ಲಿ ಒಬ್ಬನು—"ಯಾರದು ?" ಎಂದನು.

"ನಾನು" ಎಂದು ಹೊರಗಡೆಯಿಂದ ಉತ್ತರ ಬಂದಿತು.

ಮೊದಲು ಮಾತನಾಡಿದ ಆ ಮುಂಗೋಪಿಯು ತನ್ನ ಸೊಟ್ಟ ಮೋರೆಯನ್ನು ಮತ್ತಷ್ಟು ವಕ್ರಮಾಡಿಕೊಂಡು,—ಅಯ್ಯಾ, 'ನಾನು' ಎಂದರೆ ತಿಳಿಯುವ ಬಗೆ ಹೇಗೆ? ಎಂದು ಬೇಸರದಿಂದ ಗಟ್ಟಿಯಾಗಿ ಹೇಳಿದನಲ್ಲದೆ, ಆಗಂತುಕನನ್ನು ಉದ್ದೇಶಿಸಿ—"ನಿನ್ನ ನಂಬರು ?" ಎಂದನು.

" ನಂಬರು ೧."

" ನಮ್ಮ ಒಟ್ಟು ನಂಬರು ? "

" ಹದಿಮೂರು."

ಕೂಡಲೇ ಮಂದಿರದ ಬಾಗಿಲು ತೆರೆಯಲ್ಪಟ್ಟಿತು. ಒಬ್ಬನು ಒಳಕ್ಕೆ ಪ್ರವೇಶಮಾಡಿದನು. ಈ ಮನುಷ್ಯನು ನಮಗೆ ಅಪರಿಚಿತನಲ್ಲ; ಚಿರಪರಿಚಿತನಾದ ಫೂಲಸಾಹೇಬ !

ಫೂಲಸಾಹೇಬನು ತನಗೋಸ್ಕರವಾಗಿ ಸಿದ್ಧವಾಗಿದ್ದ ಸ್ಥಳದಲ್ಲಿ ಹೋಗಿ ಕುಳಿತನು. ಯಾರೂ ಯಾವ ಮಾತನ್ನೂ ಆಡಲಿಲ್ಲ. ಸ್ವಲ್ಪ

ಹೊತ್ತಿನವೇಲೆ ಫೂಲಸಾಹೇಬನು ಧೂವರಾವೃತವಾದ ಆ ಸ್ತಬ್ಧತೆಯನ್ನು ಭಂಗಪಡಿಸಿ ನಮ್ಮವರೆಲ್ಲರೂ ಬಂದಿರುವರೆ? ಎಂದು ಕೇಳಿದನು.

ಒಬ್ಬನು ಅಲ್ಲಿದ್ದವರನ್ನೆಲ್ಲ ಎಣಿಸಿ, ಹೂಂ ಎಂದು ಉತ್ತರ ಕೊಟ್ಟನು.

ಫೂಲಸಾಹೇಬ—ಇಂದಿನ ನಮ್ಮ ಉದ್ದೇಶವು ಯಾರಿಗೂ ತಿಳಿಯದ ವಿಚಾರವಲ್ಲ, ಅಲ್ಲವೆ?

ಎಲ್ಲರೂ—ಸರಿಯಾದ ರೀತಿಯಲ್ಲಿ ಹಗೆ ತೀರಿಸಿಕೊಳ್ಳುವುದು.

ಫೂಲಸಾಹೇಬ—ನಮ್ಮ ಹಗೆತನಕ್ಕೆ ಗುರಿಯಾದವನು ಯಾರು?

ಎಲ್ಲರೂ—"ಅರಿಂದಮ" ಎಂದು ಒಟ್ಟಿಗೆ ಹೇಳಿದರು. ಪುನಃ ಎಲ್ಲರೂ ನೀರವ. ಆಗ ಆ ವಿಸ್ತಾರವಾದ ಮನೆಯು "ಗಂ ಗಂ" ಎನ್ನುವಂತಿದ್ದಿತು.

---

## ಎರಡನೆಯ ಪರಿಚ್ಛೇದ

### ಭೀಷಣ ದುರಾಲೋಚನೆ

"ನೀವುಗಳೆಲ್ಲರೂ ಯಾವುದಾದರೊಂದು ರೀತಿಯಲ್ಲಿ ಆ ಅರಿಂದಮನಿಂದ ಭಂಗಪಟ್ಟೇ ಇರುವಿರಿ. ನೀವು ಅವರ ಪ್ರತೀಕಾರಕ್ಕಾಗಿ ಯಾವ ಪ್ರಯತ್ನವನ್ನೂ ಮಾಡದೇ ಇರುವುದಾದರೆ ಅದಕ್ಕೆ ಮಿಂಚಿದ ಹೇಡಿತನವೂ ಉಂಟೇನು? ಎರಡನೆಯ ನಂಬರಿನವನು ಯಾರು? ನನ್ನ ಇದಿರಾಗಿ ಬಂದು ನಿಲ್ಲು" ಎಂದು ಫೂಲಸಾಹೇಬನು ಹೇಳಿದನು.

ಸೇರಿದ್ದ ಗುಂಪಿನ ಮಧ್ಯದಿಂದ ಒಬ್ಬನು ಎದ್ದುಬಂದು ಫೂಲಸಾಹೇಬನ ಇದಿರಾಗಿ ನಿಂತನು. ಆ ವ್ಯಕ್ತಿಯು ಬಹು ದೀರ್ಘ; ಅಲ್ಪ ಸ್ವಲ್ಪವಾಗಿ ಸುಧಾರಣೆಗೊಂಡ ತಾಳೆಯ ಮರವೆಂದೇ ಹೇಳಬಹುದು. ಇಷ್ಟು ದೀರ್ಘಾಕಾರನಾದವನನ್ನು ಕಾಣುವುದು ಅತಿವಿರಳ. ಮುಖವನ್ನು ನೋಡಿದ ಮಾತ್ರದಿಂದಲೇ 'ಯುವನ ಯಾಮಿನೀ ವಿನೋದ

ಕತೆ'ಯಲ್ಲಿ ಉದ್ಧೃತನಾದ ದೈತ್ಯರಾಜನ ಸ್ಮರಣೆಯು ತಾನಾಗಿ ಬರುವುದು.

ಫೂಲಸಾಹೇಬನು ಅವನನ್ನು ಕುರಿತು ಯಾಜಮಾನ್ಯದ ದರ್ಪದಿಂದ, ಅರಿಂದಮನು ನಿನಗೆ ಏನು ಮಾಡಿದನು ? ಎಂದು ಪ್ರಶ್ನೆ ಮಾಡಿದನು.

೨ನೇ ನಂಬರಿನವ—ಅವನು ನನ್ನ ಎಡದ ಕೈಯನ್ನೇ ಮುರಿದು ಹಾಕಿದ್ದಾನೆ.

ಫೂಲ.—ಅವನು ನಿನ್ನ ಕೈ ಮುರಿದದ್ದು ಹೇಗೆ ?

೨ನೇ ನಂಬರಿನವ—ಅರಿಂದಮನಿಗೂ ನನಗೂ ಒಂದು ದಿನ ಕೈಕೈ ಕಲೆಕಿತು. ಆಗ ಆ ಲವಡೀಮಗನು ನನ್ನ ಕೈ ತಿರುಗಿಸಿ ಹಿಡಿದುಕೊಂಡು ನನ್ನನ್ನು ಎತ್ತಿಹಾಕಿದ್ದರಿಂದ ಕೈಮುರಿದು ಹೋಯಿತು.

ಫೂಲ.—ಹಾಗಾದರೆ ಅವನ ಮೇಲೆ ನಿನಗೆ ಸಂಪೂರ್ಣ ದ್ವೇಷವು ಇದ್ದೇಯಿರಬಹುದು ?

೨ನೇ ನಂಬರಿನವ—ಆ ಮಾತನ್ನು ಪುನಃಪುನಃ ಹೇಳಬೇಕೆ ? ಸಮಯ ಸಿಕ್ಕಿ, ಆ ಸೂಳೇಮಗನ ತಲೆಯನ್ನೇ ಅಗಿದು ತಿಂದುಬಿಟ್ಟಾಗ ನನ್ನ ದ್ವೇಷವು ಕೊಂಚ ಮಟ್ಟಿಗೆ ಕಡಿಮೆಯಾದರೂ ಆಗಬಹುದು.

ಫೂಲ.—ಒಳ್ಳೆಯದು, ಕುಳಿತುಕೋ. ಇದರ ಮಧ್ಯೆ ಮೂರನೆಯ ನಂಬರಿನವನಾರು ?

"ನಾನು" ಎಂದು ಹೇಳುತ್ತ, ಒಬ್ಬನು ಎದ್ದುಬಂದು ಎರಡನೆಯವನು ಅದುವರೆಗೂ ನಿಂತಿದ್ದ ಸ್ಥಳದಲ್ಲಿ ನಿಂತುಕೊಂಡನು ; ಆದರೆ ಎರಡನೆಯವನ ಸ್ಥಾನವನ್ನೆಲ್ಲಾ ಆಕ್ರಮಣ ಮಾಡಲಿಲ್ಲವೆಂಬುದು ವ್ಯಸನಕರವಾದ ವಿಚಾರ. ಅಕ್ಕಪಕ್ಕಗಳಲ್ಲಿನ ರೀತಿಯು ಹಾಗಿರಲಿ ; ಮೇಲ್ಭಾಗದಲ್ಲಿ ಬಹು ಭಾಗವು ಉಳಿದುಹೋಗಿತ್ತು. ಈ ವ್ಯಕ್ತಿಯು ಎರಡನೆಯ ನಂಬರು ವ್ಯಕ್ತಿಗಿಂತ ಉದ್ದದಲ್ಲಿ ಬಹು ಕಡಿಮೆ. ಗಾತ್ರದಲ್ಲಿ ಅವನಿಗಿಂತ ಬಹು ದಪ್ಪನಾಗಿದ್ದನು. ತೂಕದಲ್ಲಿ ನಾಲ್ಕರಷ್ಟು ಹೆಚ್ಚೆಂದು

ಹೇಳಿದರೂ ಹೇಳಬಹುದು. ಅತಿ ವಿರಕ್ತಿಯೂ ಬಹು ಕಪಟ ಸ್ವಭಾವವೂ ಒಂದಾಗಿ ಸೇರಿ ಮುಖವು ಕಾಂತಿಹೀನವಾಗಿದ್ದಿತಲ್ಲದೆ ಬಹು ಕಾಲದ ವರೆಗೂ ಅವು ಅಲ್ಲಿಯೇ ನೆಲೆಯಾಗಿರಲು ಸಂಕಲ್ಪಮಾಡಿಕೊಂಡಿದ್ದಂತೆ ತೋರುತ್ತಿದ್ದಿತು.

ಫೂಲಸಾಹೇಬನು ಅವನನ್ನು ಕುರಿತು, ಅರಿಂದಮನು ನಿನಗೆ ಮಾಡಿದ ಅಪಕಾರವೇನು ? ಎಂದನು.

ಆ ವ್ಯಕ್ತಿಯು ತನ್ನ ಮೂಗಿನ ಕಡೆಗೆ ಕೈತೋರಿಸಿದನು. ನಿಶ್ಚಯವಾಗಿಯೂ ಆ ದುಷ್ಟನ ಮೂಗು ಕುಸಿದುಹೋಗಿತ್ತು.

ಫೂಲ.—ಏಕೆ ಹೀಗಾಯಿತು ?

೩ನೇ ನಂಬರಿನವ—ಅವನು ನನ್ನ ಮೂಗು ಕೊಯಿದುಹಾಕಿದ್ದಾನೆ.

ಫೂಲ.—ನಿನ್ನ ಮೂಗಿಗೆ ಪ್ರತಿಯಾಗಿ ಅವನ ಮೂಗನ್ನು ಅಪೇಕ್ಷಿಸುವೆಯೋ ಹೇಗೆ ?

೩ನೇ ನಂಬರಿನವ—ನನ್ನ ಮೂಗಿಗೆ ಬದಲಾಗಿ ನಾನು ಅವನ ಪ್ರಾಣವನ್ನೇ ಅಪೇಕ್ಷಿಸುತ್ತೇನೆ.

ಫೂಲ.—ಒಳ್ಳೆಯದು, ನೀನು ಹೊರಡು, ನಾಲ್ಕನೇ ನಂಬರಿನವನು ಯಾರಪ್ಪ ?

ದಳಮಧ್ಯದಿಂದ ದುರ್ಬಲನಾದ ಮನುಷ್ಯನೊಬ್ಬನು ಎದ್ದು ಕುಂಟುತ್ತ ಬಂದು ಫೂಲಸಾಹೇಬನಿದಿರಿಗೆ ನಿಂತನು.

ಫೂಲ.—ನಿನಗೇನಾಯಿತು ?

೪ನೇ ನಂಬರಿನವ—ನನ್ನ ಕಾಲು ಮುರಿದಿರುತ್ತಾನೆ. ಇದರ ಪ್ರತೀಕಾರ ಮಾಡದೆ ನಾನು ಬಿಡುವುದಿಲ್ಲ.

ಫೂಲ.—ಐದನೆಯ ನಂಬರಿನವನೆಲ್ಲಿ ?

೫ನೇ ನಂಬರಿನವ—ನಾನು ಇಲ್ಲಿದ್ದೇನೆ, ಎಂದು ಮುಂದೆ ಬಂದನು.

ಫ್ರೂಲ.—ನಿನ್ನ ಸಮಾಚಾರವೇನು ? ಹೇಳು ?

೫ನೇ ನಂಬರಿನವನು ತನ್ನ ಬಲಗೈಯನ್ನು ಫ್ರೂಲಸಾಹೇಬನ ಇದಿರಿಗೆ ಎತ್ತಿ ಹಿಡಿದನು. ಆ ಕೈಯಲ್ಲಿ ಹೆಬ್ಬೆರಳ ವಿನಾ ಮತ್ತಾವ ಬೆರಳೂ ಇರಲಿಲ್ಲ.

ಫ್ರೂಲ.—ಅರಿಂದಮನು ಒಟ್ಟಿಗೆ ನಿನ್ನ ನಾಲ್ಕು ಬೆರಳುಗಳನ್ನೂ ಹೇಗೆ ಕತ್ತರಿಸಿದನು ?

೫ನೇ ನಂಬರಿನವ—ಪಿಸ್ತೂಲಿನ ಗೋಲಿಯಿಂದ. ನಾನು ಅವನನ್ನು ಮುಷ್ಟಿಯಿಂದ ಹೊಡೆಯಬೇಕೆಂದು ಓಡಿಹೋಗುತ್ತಿದ್ದಾಗ ಅವನು ದೂರದಲ್ಲಿದ್ದುಕೊಂಡೇ ನೋಡಿ ಪಿಸ್ತೂಲಿನಿಂದ ಹೊಡೆದು ರೆಪ್ಪೆ ಮುಚ್ಚುವದರೊಳಗಾಗಿ ನನ್ನ ಮುಷ್ಟಿಯ ಅರ್ಧ ಭಾಗವನ್ನು ಹಾರಿಸಿಬಿಟ್ಟನು. ನನಗೆ ಅದರ ಸುಳಿವೇ ತಿಳಿಯಲಿಲ್ಲ.

ಫ್ರೂಲ.—ಆರನೆಯ ನಂಬರಿನವನು ಎದ್ದು ಬರಲಿ.

ಆರನೆಯ ನಂಬರಿನವನು ಕೂಡಲೇ ಎದ್ದು ಬಂದನು. ಫ್ರೂಲ ಸಾಹೇಬನು ಅವನನ್ನು ಕುರಿತು, ನೀನು ಎಂತಹ ಸಂಕಟದಿಂದ ನಮ್ಮ ಗುಂಪಿಗೆ ಬಂದು ಸೇರಿದೆ? ಅರಿಂದಮನು ನಿನಗೆ ಉಂಟುಮಾಡಿದ ಅನಿಷ್ಟವೆಂತಹದು ? ಎಂದು ಕೇಳಿದನು.

೬ನೇ ನಂಬರಿನವ—ಅರಿಂದಮನು ನನ್ನ ಒಂದು ಪಾರ್ಶ್ವದ ಹಲ್ಲುಗಳನ್ನೆಲ್ಲಾ ಉದುರಿಸಿಬಿಟ್ಟನು.

ಫ್ರೂಲ.—ಇನ್ನೇನಾದರೂ ಉಂಟೋ ?

೬ನೇ ನಂಬರಿನವ—ಮತ್ತೂ ನಮ್ಮ ತಂದೆಯನ್ನು ಗಲ್ಲಿಗೆ ಹಾಕಿಸಿದನು.

ಈ ವ್ಯಕ್ತಿಯ ವಿಕಟಾಕಾರವನ್ನು ನೋಡಿದರೆ ಇವನ ತಂದೆಗೆ ಫಾಸೀಶಿಕ್ಷೆಯಾಗುವದರಲ್ಲಿ ಆಶ್ಚರ್ಯವೇನಿದೆ?

ಫ್ರೂಲ.—ಹಾಗಾದರೆ, ನೀನು ಅರಿಂದಮನ ರಕ್ತದರ್ಶನ ಮಾಡದೆ ಹೇಗೂ ಸಮಾಧಾನಗೊಳ್ಳಲಾರೆಯೆಂದು ತೋರುತ್ತದೆ.

೭ನೇ ನಂಬರಿನವ—ಆ ಮಾತನ್ನು ಇನ್ನೊಂದು ಬಾರಿ ಹೇಳಿರಿ.

ಫೂಲ.—ಏಳನೆಯ ನಂಬರಿನವನೆಲ್ಲಿ—ಎದ್ದು ಬಾ.

೭ನೇ ನಂಬರಿನವ—ನಾನು ಏಳನೆಯ ನಂಬರಿನವನು.

ಫೂಲ.—ಅರಿಂದಮನು ನಿನಗೇನಾದರೂ ಮುರಿದನೋ?

೭ನೇ ನಂಬರಿನವ—ಏನೂ ಇಲ್ಲ.

ಫೂಲ.—ಹಾಗಾದರೆ ನಿನಗೇನಾಯಿತು?

೭ನೇ ನಂಬರಿನವ—ಏನೂ ಇಲ್ಲ.

ಫೂಲ.—ಹಾಗಾದರೆ ನೀನು ನಮ್ಮ ಗುಂಪಿಗೆ ಸೇರಿದ ಕಾರಣ ವೇನು?

೭ನೇ ನಂಬರಿನವ—ನಾನು ಅರಿಂದಮನನ್ನು ಮನಸಾ ದ್ವೇಷಿಸುತ್ತೇನೆ.

ಫೂಲ.—ಏತರಿಂದ ದ್ವೇಷ?

೭ನೇ ನಂಬರಿನವ—ಒಂದು ದಿನ ಅವನು ನನ್ನನ್ನು ಮಂಕನನ್ನಾಗಿ ಮಾಡಿ ತನ್ನ ಕೆಲಸವನ್ನು ಸುಲಭವಾಗಿ ಸಾಧಿಸಿದನು.

ಫೂಲ.—ಅದು ಹೇಗೆ ಹೇಳು?

೭ನೇ ನಂಬರಿನವ—'ಲೋಕ'ನೆಂಬ ನನ್ನ ಸಂಗಾತಿಯೊಬ್ಬನು ಒಂದು ಬಾರಿ ಒಬ್ಬನನ್ನು ಕೊಂದುಹಾಕಿದನು. ನಾವುಗಳು ಎಲ್ಲಿ, ಯಾವಾಗ ಕೊಲೆ ನಡೆಸಿದರೂ ಪರಸ್ಪರ ಮರೆಮಾಚದೆ ಹೇಳುತ್ತಿದ್ದೆವು. ಯಾವ ಕೆಲಸ ಮಾಡಬೇಕಾದರೂ ಇಬ್ಬರೂ ಆಲೋಚಿಸಿಯೇ ಮಾಡುತ್ತಿದ್ದೆವು. ಒಂದು ದಿನ ಲೋಕನು ಕೊಲೆಮಾಡಿ ಬಂದಿದಾನೆ. ಅದೇ ಸಾಯಂಕಾಲದಲ್ಲಿ ಆ ತಾಯಿಗಂಡ ಅರಿಂದಮನು ಲೋಕನಂತೆಯೇ ವೇಷಧಾರಿಯಾಗಿ ಬಂದು ನನ್ನಿಂದ ಆ ಮಾತು ಈ ಮಾತುಗಳನ್ನಾಡಿಸಿ ಆ ಖೂನಿಯ ವಿಚಾರವನ್ನೆಲ್ಲಾ ಪೂರ್ತಿಯಾಗಿ ತಿಳಿದುಕೊಂಡು ಲೋಕನಿಗೆ ಹನ್ನೆರಡು ವರ್ಷಗಳಕಾಲ ದ್ವೀಪಾಂತರವಾಸದ ಶಿಕ್ಷೆ ಮಾಡಿಸಿದನು. ಲೋಕನು ತನಗೆ ಶಿಕ್ಷೆಯಾದುದಕ್ಕೆ ನಾನೇ ಕಾರಣನಾದೆನೆಂಬುದನ್ನು

ತಿಳಿದು ದ್ವೀಪಾಂತರಕ್ಕೆ ಹೊರಡುವಾಗ—ಬದುಕಿ ಹಿಂದಿರುಗಿ ಬಂದರೆ ನಿನ್ನನ್ನು ಕೊಂದು ಗಲ್ಲಿಗೂ ಸಿದ್ಧನಾಗುವೆನು, ಎಂದು ಬೈದು, ಬೆದರಿಸಿ ಹೋದನು. ಅವನೇನಾದರೂ ಬದುಕಿಬಂದರೆ ಆದಿನ ತಾನು ಹೇಳಿ ದಂತೆ ನಡೆಯಿಸುವಂತಹ ಭಯಂಕರನೇ ಸರಿ. ಅವನು ಬರುವುದ ರೊಳಗಾಗಿ ನಾನು ಒಂದು ವೇಳೆ ಅರಿಂದಮನನ್ನೇ ಕಡೆಗಾಣಿಸಿ ಬಿಟ್ಟಿದ್ದರೆ, ನನ್ನ ಸ್ನೇಹಿತನಿಗೆ ನನ್ನಮೇಲಿರುವ ಕೋಪವು ಬಹು ಮಟ್ಟಿಗೆ ಕಡಿಮೆಯಾದರೂ ಆಗಬಹುದು.

ಫೂಲ.—ಒಳ್ಳೆಯದು ನೀನು ನಡೆ. ಎಂಟನೆಯ ನಂಬರಿನವನು ಎದ್ದು ಬರಲಿ.

ಏಳನೆಯವನ ಸ್ಥಳದಲ್ಲಿ ಎಂಟನೆಯವನು ಬಂದು ನಿಂತನು.

ಫೂಲ.—ನಿನ್ನ ಸಮಾಚಾರವೇನು ?

ಎಂಟನೆಯವ—ವಿಷಮ ಸಮಾಚಾರ.

ಫೂಲ.—ಇರಬಹುದು; ಅದೇನು ?

ಎಂಟನೆಯವ—ನಾನು ರಾತ್ರಿ ನಿದ್ರೆಮಾಡಲಾರೆ. ನಿದ್ರೆಹತ್ತಿತೋ ಇಲ್ಲವೊ ಸ್ವಪ್ನಗಳು! ಎಲ್ಲ ಸ್ವಪ್ನಗಳಲ್ಲಿಯೂ ಅರಿಂದಮನು ಇದ್ದೇ ಇರುವನು. ಒಂದು ಸ್ವಪ್ನದಲ್ಲಿ ಅರಿಂದಮನು ನನ್ನನ್ನು ಪರ್ವತದಿಂದ ಕೆಳಕ್ಕೆ ನೂಕುವನು ; ಒಂದೊಂದು ಬಾರಿ ಅವನು ನನ್ನನ್ನು ಪುಷ್ಕ ರಿಣಿಯ ಕೆಸರಿನಲ್ಲಿ ಅದ್ದಿಹಿಡಿದಿರುವನು ; ಒಂದೊಂದು ಸಲ ಅವನು ನನ್ನ ಕೈಕಾಲುಗಳನ್ನು ಹಿಡಿದುಕಟ್ಟಿ ಉರಿಯುತ್ತಿರುವ ಕಾಷ್ಠದಮೇಲೆ ಎತ್ತಿಹಿಡಿಯುವನು. ಹೀಗೆಯೇ ಇನ್ನೂ ಬಗೆ ಬಗೆಯಾದ ಭಯಂಕರ ಸ್ವಪ್ನಗಳಾಗುವವು. ಅವುಗಳು ಮರೆಯಲಸಾಧ್ಯವಾದವುಗಳು. ಅರಿಂದ ಮನು ಸಾಯುವವರೆಗೆ ನನಗೆ ಈ ದುಷ್ಟ ಸ್ವಪ್ನಗಳಿಂದ ಬಿಡುಗಡೆಯಿಲ್ಲ ವೆಂದು ಭಾವಿಸಿದ್ದೇನೆ.

ಫೂಲ.—ಒಳ್ಳೆಯದು ನೀನು ಹೋಗು ; ಒಂಬತ್ತನೆಯವನಾರು?

ಒಂಬತ್ತನೆಯವ—ನಾನು.

ಫ್ರೂಲ.—ನಿನ್ನ ಸಮಾಚಾರವೇನು ?

ಒಂಬತ್ತನೆಯವ—ಮೂರು ವರುಷ ಆರು ತಿಂಗಳು.

ಫ್ರೂಲ.—ಹೇಗೆ ?

ಒಂಬತ್ತನೆಯವ—ಕಠಿಣ ಪರಿಶ್ರಮದೊಡನೆ.

ಫ್ರೂಲ.—ಹತ್ತನೆಯವನಾರು ?

ಹತ್ತನೆಯವ—ನಾನು.

ಫ್ರೂಲ.—ನಿನ್ನ ವ್ಯಾಪಾರವೇನು ?

ಹತ್ತನೆಯವ—ಒಂಬತ್ತನೇ ನಂಬರಿನವನಿಗಿಂತಲೂ ಒಂದೂವರೆ ವರುಷ ಹೆಚ್ಚು; ಆದರೆ ಅಷ್ಟು ದಿನ ಅನುಭವಿಸಲಿಲ್ಲ. ಒಂದು ತಿಂಗಳು ಮುಗಿವುದರೊಳಗಾಗಿ ಬಂದೀಖಾನೆಯಿಂದ 'ಪರಾರಿ'ಯಾಗಿ ಬಂದಿದ್ದೇನೆ.

ಫ್ರೂಲ.—ಹಾಗಾದರೆ ನೀನೀಗ ಸರಿಯಾದ ಕೆಲಸಗಾರ. ಹನ್ನೊಂದ ನೆಯವನು ಯಾರು ?

ಹನ್ನೊಂದನೆಯ ನಂಬರಿನ ಒಬ್ಬ ಹುಡುಗನೆದ್ದು ಬಂದನು. ಅವನ ವಯಸ್ಸು ಇನ್ನೂ ಹದಿನೇಳರ ಒಳಗಾಗಿತ್ತು. ಇವನ ಮುಖಾ ಕೃತಿಯೂ ದೃಷ್ಟಿಯೂ ಬಹು ಭಯಾನಕ. ಇವನ ಮುಖವನ್ನು ಯಾರಾದರೂ ಹಠಾತ್ತಾಗಿ ನೋಡಿದಪಕ್ಷದಲ್ಲಿ ವಿಷಮಯವಾದ ಸರ್ಪ ವನ್ನು ಕಂಡರೆ ಹೇಗೋ ಹಾಗೆ ಅವರ ಹೃದಯವು ಭಯಭರಿತವಾಗು ವುದು. ಅವನ ಕಯ್ಯಲ್ಲಿ ಬಲು ಹರಿತವಾದ ಒಂದು ದೊಡ್ಡ ಚೂರಿಯಿರು ವುದು. ಅವನನ್ನು ಕುರಿತು ಯಾವುದೊಂದು ಪ್ರಶ್ನೆಮಾಡಲಿಲ್ಲವಾದರೂ ಅವನು ತಾನಾಗಿಯೇ ಕಯ್ಯೊಳಗಿನ ಚೂರಿಯನ್ನು ಆಡಿಸುತ್ತಾ, "ನಾನು ಅರಿಂದಮನನ್ನು ಸುಮ್ಮನೆ ಬಿಡುವುದಿಲ್ಲ. ನಮ್ಮ ತಂದೆಯು ಒಬ್ಬನನ್ನು ದೂರ ಸಾಗಿಸಿಕೊಂಡು ಹೋಗಿ ಕೊಲೆಮಾಡಿದನೆಂದು ಹೇಳಿ ಅರಿಂದಮನು ನಮ್ಮ ತಂದೆಯನ್ನು ಗಲ್ಲಿಗೆ ಹಾಕಿಸಿರುವನು. ಇದು ನಡೆದು ಇಂದಿಗೆ ಮೂರು ವರ್ಷವಾಯಿತು. ಆ ಮೊದಲು ಈ ಚೂರಿ

ಯೊಂದಿಗೆ ಕ್ಷಣಕಾಲವೂ ಅಗಲಿರಲಾರದ ಮಟ್ಟಿಗೆ ಮೈತ್ರಿಯನ್ನು ಬೆಳಸಿದ್ದೇನೆ. ಇದನ್ನು ಅರಿಂದಮನ ಹೃದಯದಲ್ಲಿ ಹೊಗಿಸದೆ ಬಿಡುವುದಿಲ್ಲ'' ಎಂದನು.

ಇಂತಹ ಮಗನ ತಂದೆಗೆ ಗಲ್ಲಿನಿಂದ ಮರಣವಾಗುವುದೇನೂ ಆಶ್ಚರ್ಯವಲ್ಲವೆಂಬುವುದು ಸರ್ವಸಮ್ಮತವಾದದ್ದು.

ಇದಾದಮೇಲೆ ಹನ್ನೆರಡನೆಯ ನಂಬರಿನವನು ಎದ್ದುಬಂದನು. ಅವನು ವಯಸ್ಸಿನಲ್ಲಿ ವೃದ್ಧ. ವೃದ್ಧನಾಗಿದ್ದರೂ ಈ ವಯಸ್ಸಿನಲ್ಲಿ ಕೂಡ ಮೂರು ನಾಲ್ಕು ಮಂದಿ ಬಲಿಷ್ಠ ಯುವಕರನ್ನಾದರೂ ಮುರಿದು ಕೆಡಹುವ ಶಕ್ತಿಯುಂಟೆಂಬುದು ಅವನ ದೀರ್ಘದೇಹದಿಂದಲೂ ವಿಸ್ತಾರವಾದ ಮೈಕಟ್ಟಿನಿಂದಲೂ ಸ್ಪಷ್ಟವಾಗಿ ತೋರುತಲಿದ್ದಿತು. ಅವನ ಆಕೃತಿಯೊಡನೆ ಪ್ರಕೃತಿಯೂ ಸರಿಯಾಗಿ ಹೊಂದಿಕೊಂಡಿದ್ದಿತು. ಗುಳಿಗೆ ಇಳಿದಂತಿರುವ ಅವನ ಆ ಕಾಡಿಗೆಗಣ್ಣಿನ ತೀವ್ರವಾದ ನೋಟ, ಕಪಾಲದ ಮೂಳೆಗಳು ಕಾಣಿಸುತ್ತಿರುವ ಮುಖದ ಭಯಂಕರ ಭಾವ—ಇವುಗಳನ್ನು ನೋಡಿದರೆ ಆ ವಿಷಯದಲ್ಲಿ ಸಂಶಯವೇ ಉಳಿಯುವಂತಿಲ್ಲ. ಅವನು ಬಂದವನೇ—''ಅರಿಂದಮನ ವಿಷಯದಲ್ಲಿ ಅಸಮಾಧಾನ ಪಡುವುದಕ್ಕೆ ನನಗೆ ಕಾರಣವುಂಟೋ ಇಲ್ಲವೋ ಎಂಬುದನ್ನು ಹೇಳುವ ಕುತೂಹಲವು ನನಗಿಲ್ಲ. ಅವನನ್ನು ನಿಮ್ಮೆಲ್ಲರಿಗಿಂತಲೂ ಹೆಚ್ಚಾಗಿ ನಾನು ದ್ವೇಷಿಸುತ್ತೇನೆ. ಇದನ್ನು ಕೇಳಿ, ನೀವು ನಿಶ್ಚಿಂತರಾಗಿರಬಹುದು. ನಂಬುವ ಪಕ್ಷದಲ್ಲಿ ನಾನೂ ನಿಶ್ಚಿಂತನಾಗಿರುತ್ತೇನೆ. ನಾನೂ ಸಂತೋಷದಿಂದ ನಿಮ್ಮೊಂದಿಗೆ ಇರುತ್ತೇನೆ. ಹಾಗಿಲ್ಲದಪಕ್ಷದಲ್ಲಿ ನಾನು ನನ್ನ ದಾರಿನೋಡಿಕೊಳ್ಳುತ್ತೇನೆ. ಅರಿಂದಮನಿಗೆ ಯಮಪುರದ ಮಾರ್ಗವನ್ನು ನಿಷ್ಕಂಟಕವಾಗಿರುವಂತೆ ಮಾಡಿಕೊಡುವ ಸಾಮರ್ಥ್ಯವು ನನಗೊಬ್ಬನಿಗೇ ಬೇಕಾದಷ್ಟು ಇರುತ್ತಿದೆ'' ಎಂದು ಹೇಳಿದನು.

ಅನಂತರ ಹದಿಮೂರನೆಯ ನಂಬರಿನವನು ಎದ್ದುನಿಂತು ಕೊಂಡನು. ಫೂಲಸಾಹೇಬನು ಅವನನ್ನು ನೋಡಿ,—ನೀನೇನೂ

ಹೇಳಬೇಕಾಗಿಲ್ಲ, ನಿನ್ನ ವಿಷಯವಾಗಿ ನಾನೇ ಅನೇಕ ವಿಚಾರಗಳನ್ನು ಬಲ್ಲೆನು ಎಂದು ನಗುತ್ತಾ ಹೇಳಿದನು.

ಆ ಆಸಾಮಿಯು ಅದೇ ಗೋರಾಚಾಂದ. ಹೆಸರು ಕೇಳಿದ ಮಾತ್ರದಿಂದಲೇ ಮನುಷ್ಯನಿಂಥವನೇ ಎಂಬುದು ಪಾಠಕ ಪಾಠಕಿಯರ ಜ್ಞಾಪಕಕ್ಕೆ ಬರುವುದರಲ್ಲಿ ಸಂಶಯವಿಲ್ಲ.

ಗೋರಾಚಾಂದನು ಕುಳಿತುಕೊಂಡಮೇಲೆ ಫೂಲಸಾಹೇಬನು ಎದ್ದುನಿಂತು, ಈ ರೀತಿಯಾಗಿ ಹೇಳಿದನು. ನಾನು ಅರಿಂದಮನನ್ನು ಏತಕ್ಕಾಗಿ ದ್ವೇಷಿಸುವೆನೆಂಬುದು ನಿಮ್ಮಲ್ಲಿ ಯಾರಿಗೂ ತಿಳಿಯದು. ಅವನು ನನ್ನ ಹಾಗೆಯೇ ಶಕ್ತಿವಂತ, ನನ್ನ ಹಾಗೆಯೇ ಯುಕ್ತಿವಂತ, ನನ್ನ ಹಾಗೆಯೇ ಬುದ್ಧಿವಂತ ಮತ್ತೂ ನನ್ನ ಹಾಗೆಯೇ ಎಲ್ಲ ಕೆಲಸಗಳಲ್ಲಿಯೂ ದಕ್ಷ. ಈ ಒಂದು ಕಾರಣದಿಂದಲೇ ನಾನು ಅವನನ್ನು ದ್ವೇಷಿಸುತ್ತೇನೆ. ನಾನು ಬದುಕಿರುವಾಗ ನನ್ನಂಥವನೇ ಇನ್ನೊಬ್ಬ ಮನುಷ್ಯನು ಈ ಪ್ರಪಂಚದಲ್ಲಿರುವುದೆಂದರೆ ನನಗೆ ಸೈರಣೆಯೇ ಇಲ್ಲ. ಇದು ಈಚೀಚೆಗೆ ನನಗೆ ತುಂಬ ಅಸಹ್ಯಕರವಾಗಿ ತೋರುತ್ತಿದೆ. ಸಾಧ್ಯವಾಗುವುದಾದರೆ ಆತನು ಈ ಪೃಥ್ವಿಯನ್ನು ಬಿಟ್ಟುಹೋಗಬೇಕು; ಆಲ್ಲಿಗೆ ನಾನು ನಿರಾಪದನಾಗಿರುತ್ತೇನೆ. ಇಲ್ಲವಾದರೆ ನಾನು ಲೋಕಾಂತರ ಹೊಂದಬೇಕು; ಅದರಿಂದ ಆತನು ನಿಶ್ಚಿಂತನಾಗುತ್ತಾನೆ. ಈ ಎರಡರಲ್ಲಿ ಒಂದನ್ನು ನಾನು ಮಾಡಿ ಮುಗಿಯಿಸದಿದ್ದರೆ ನಿಶ್ಚಿಂತನಾಗಿರುವುದು ಸಾಧ್ಯವಿಲ್ಲ. ಎಲ್ಲಿಯ ನೀರು ಯಾವಲ್ಲಿ ನಿಲ್ಲುವುದೋ ನೋಡೋಣ. ಈ ವಿಚಾರವು ಹಾಗಿರಲಿ, ಈಗ ಇಲ್ಲಿ ಸೇರಿರುವವರಲ್ಲಿ ತಮ್ಮ ಜೀವಿತಕಾಲದಲ್ಲಿ ಒಂದಾದರೂ ಕೊಲೆಮಾಡದಿರುವವರು ಯಾರು ? ಯಾರಾದರೂ ಇದ್ದೀರಾ ?

ಯಾರೂ ಯಾವ ಉತ್ತರವನ್ನೂ ಕೊಡಲಿಲ್ಲ; ಎಲ್ಲರೂ ಕೊಲೆಗಾರರು—ಎಲ್ಲರೂ ದಸ್ಯುಗಳು !

ಅನುಕೂಲವೇ ಆಯಿತು. ಇಂತಹ ಕೆಲಸಗಳಿಗೆಲ್ಲಾ ನಿಮ್ಮಂತಹ ಜನರೇ ಆವಶ್ಯಕ. ಅರಿಂದಮನನ್ನು ಕೊಲೆಮಾಡುವ ವಿಷಯದಲ್ಲಿ

ಎಲ್ಲರೂ ಈಗ ಶಪಥಮಾಡಬೇಕಾಗಿದೆ, ಎಂದು ಫೂಲಸಾಹೇಬನು ಹೇಳಿದನು.

ಅದನ್ನು ಕೇಳಿ ಆ ಕೊಲೆಪಾತಕಿಗಳೆಲ್ಲರೂ ಅರಿಂದಮನ ಪ್ರಾಣ ತೆಗೆವ ವಿಚಾರವಾಗಿ ಶಪಥಮಾಡಿದರು; ಮತ್ತೂ ಆ ಕೂಡಲೇ ಫೂಲ ಸಾಹೇಬನಿಂದ ಒಬ್ಬೊಬ್ಬರೂ ಒಂದೊಂದು ಹರಿತವಾದ ಸನೀಸು ಗಳನ್ನು ಬಹುಮಾನಪಡೆದರು.

ಅಂದು ನಡೆದುದು ಇಷ್ಟೇ.

---

## ನೂರನೆಯ ಪರಿಚ್ಛೇದ

### ಮೋಹಿನಿಯ ಕಡೆಯ ಪ್ರಯತ್ನ

ದೇವೇಂದ್ರವಿಜಯನು ಸಮಾಧಾನಗೊಂಡು ರೇವತಿಯ ಸಮಾ ಚಾರವನ್ನು ಇದಿರುನೋಡುತ್ತ ಇನ್ನೂ ಅರಿಂದಮನ ಮನೆಯಲ್ಲಿಯೇ ಇರಲು ನಿರ್ಬಂಧಿತನಾಗಿದ್ದನು. ದಿನಗಳು ಕಳೆದುಹೋದ ಹಾಗೆಲ್ಲಾ ದೇವೇಂದ್ರವಿಜಯನು ರೇವತಿಗೋಸ್ಕರವಾಗಿ ವ್ಯಗ್ರನಾಗುವನು. ರೇವತಿ ಯನ್ನು ಹುಡುಕುವ ವಿಚಾರವಾಗಿ ದೇವೇಂದ್ರನು ಏನನ್ನಾದರೂ ಕೇಳಿದ್ದೇ ಆದರೆ ಅರಿಂದಮನು ಬಾಯಲ್ಲಿ ನಯವಾಗಿ ಸಮಾಧಾನ ಹೇಳುವುದೂ ಅಲ್ಲದೆ, ಆಸೆಯನ್ನೂ ಹೆಚ್ಚಿಸುವನು; ಇಷ್ಟೇ ವಿನಾ ಕಾರ್ಯತಃ ಆ ವಿಚಾರವಾಗಿ ಯಾವುದೂ ನಡೆಯದಿರುವುದನ್ನು ನೋಡಿ ದೇವೇಂದ್ರವಿಜಯನು ಮನಸಾ ಅಸಂತುಷ್ಟನಾಗುತ್ತ ಬಂದನು. ಒಂದೊಂದು ವೇಳೆ ಅರಿಂದಮನ ಸಹವಾಸವೇ ತನಗೆ ಯೋಗ್ಯವಾದು ದಲ್ಲವೆಂದು ಭಾವಿಸಿಕೊಳ್ಳುವನು. ಆ ಸಮಯದಲ್ಲಿ ಮನುಷ್ಯನಿಗೆ ಉಚಿತವಾದ ಕೋಪವೂ, ರೇವತಿಯ ಉದ್ಧಾರಕ್ಕೋಸ್ಕರವಾಗಿ ಮತ್ತೆ ಯಾವ ಶ್ರೇಷ್ಠನಾದ ಪತ್ತೇದಾರನನ್ನಾದರೂ ನಿಯಮಿಸುವ ಕಲ್ಪನೆಯೂ ಆತನ ಮನಸ್ಸಿನಲ್ಲಿ ಬಹು ಪ್ರಬಲವಾಗಿಯೂ ತೀವ್ರವಾಗಿಯೂ ಆಗಿ ಹೋಗುತಲಿರುವುವು. ಆದರೆ ಮುಖದಲ್ಲಿ ಯಾವುದೂ ವ್ಯಕ್ತಗೊಳುತ ಲಿರಲಿಲ್ಲ. ಆ ಭಾವಗಳು ಮುಖದಲ್ಲಿ ಪ್ರಕಾಶಗೊಳ್ಳದಿದ್ದರೂ

ಒಂದೊಂದು ವೇಳೆ ಆತನ ಮಾತುಗಳು ಅವನ ಮನೋಭಾವವನ್ನು ಅರಿಂದಮನಿಗೆ ಪರಿಚಯ ಮಾಡಿಕೊಡುತ್ತಿದ್ದುವು. ಒಂದೆರಡು ಸಮಯಗಳಲ್ಲಿ ದೇವೇಂದ್ರವಿಜಯನ ಮನೋಭಾವವು ಅರಿಂದಮನ ಅನುಭವಕ್ಕೂ ಬಂದಿತು. ಫೂಲಸಾಹೇಬನನ್ನು ಹಿಡಿದು ತರುವ ವಿಷಯವಾಗಿ ಪ್ರಯತ್ನಮಾಡಿದಾಗ ದೇವೇಂದ್ರವಿಜಯನು "ಆಗಲಿ," "ಇಲ್ಲ" ಮುಂತಾಗಿ ಹೇಳಿದನೇ ಹೊರತು, ಕೆಲಸದ ಹೊತ್ತಿನಲ್ಲಿ ಕೆಲವು ಬಾರಿ 'ಹಾಜರಿ'ಯಾಗಿಯೂ ಮತ್ತೆ ಕೆಲವುಸಾರಿ 'ಗೈರ್‌ಹಾಜರಿ' ಯಾಗಿಯೂ ಆಗಿಬಿಡುತ್ತಿದ್ದನು. ಅರಿಂದಮನ ಆ ಸುಳ್ಳು (?) ಸಮಾಧಾನದ ಮಾತುಗಳಿಂದ ಒಂದೊಂದು ಸಲ ದೇವೇಂದ್ರವಿಜಯನ ಬೇಸರವೂ ಧೈರ್ಯವೂ ಹದ್ದುಮೀರಿ ಕಡೆಗೆ ನೀರಸವಾದ ಕ್ರೋಧವಾಗಿ ರೂಪಾಂತರಗೊಳ್ಳುವಂತಾಗುತಿದ್ದಿತು. ಅದರೊಂದಿಗೆ ದೇವೇಂದ್ರ ವಿಜಯನು ಊರಿಗೆ ಹಿಂದಿರುಗಿ ಹೋಗಲು ಸನ್ನಾಹಗೊಳ್ಳುತ್ತಿದ್ದನು. ತಡೆಯಲಾರದ ಬೇಸರ, ದಾರುಣವಾದ ಉತ್ಕಂಠಿತೆ, ದುಸ್ಸಹವಾದ ಉದ್ವೇಗ, ಮತ್ತೂ ಕೃಶವಾದಂತಿರುವ ಧೈರ್ಯ—ಇವುಗಳ ಮಧ್ಯೆ ದೇವೇಂದ್ರವಿಜಯನಿಗೆ ಬಹು ದೀರ್ಘವಾಗಿ ತೋರುತ್ತಿದ್ದ ಆ ದಿನಗಳು ಬರುಬರುತ್ತ ದೀರ್ಘತಮವಾಗುತ್ತ ನಡೆಯುತ್ತಿದ್ದುವು.

*     *     *

ಒಂದು ದಿನ ದೇವೇಂದ್ರವಿಜಯನು ಯಾವುದೋ ಕೆಲಸದ ಮೇಲೆ ಹೊರಕ್ಕೆ ಹೋಗಿದ್ದನು; ಅರಿಂದಮನು ಮಧ್ಯಾಹ್ನದ ಊಟವಾದ ಮೇಲೆ, ಮಲಗಿ ಸ್ವಲ್ಪ ವಿಶ್ರಮಿಸಿಕೊಳ್ಳುವುದಕ್ಕೆ ಸಿದ್ಧನಾಗಿರುವಷ್ಟರಲ್ಲಿ ಸೇವಕನು ಬಂದು, ಹೆಂಗಸೊಬ್ಬಳು ತಮ್ಮನ್ನು ನೋಡುವುದಕ್ಕೆ ಬಂದಿರುವಳು ಎಂದು ಹೇಳಿದನು. ಆ ಹೆಂಗಸನ್ನು ಅಲ್ಲಿಗೇ ಕರೆದು ಕೊಂಡು ಬರಬೇಕೆಂದು ಅರಿಂದಮನು ಭೃತ್ಯನಿಗೆ ಅಪ್ಪಣೆ ಮಾಡಿದನು.

*     *     *

ಸಲ್ಪ ಹೊತ್ತಿನೊಳಗಾಗಿ ಮುಖದಮೇಲೆ ಫರದೆ ಎಳದುಕೊಂಡ ಹೆಂಗಸೊಬ್ಬಳು ಅರಿಂದಮನ ಇದಿರಿಗೆ ಬಂದಳಾದರೂ ಮನೆಯೊಳಕ್ಕೆ

ಬಾರದೆ ಬಾಗಿಲ ಬಳಿಯಲ್ಲಿಯೇ ಕುಳಿತುಕೊಂಡಳು. ಅವಳ ಆಗಿನ ವೇಷ ಭೂಷಣಗಳು ಮಲಿನವಾಗಿಯೂ ತುಂಬ ಅಪರಿಷ್ಕಾರವಾಗಿಯೂ ಇದ್ದುವು. ಅತಿ ರೂಕ್ಷವಾಗಿದ್ದ ಒಂದೆರಡು ಕೇಶಗುಚ್ಛಗಳು ಕಿವಿಯ ಕಡೆಯಿಂದ ಮುಂಭಾಗಕ್ಕೆ ಬಂದು ಬಿದ್ದಿದ್ದುವು. ಅವಳು ಗೌರಾಂಗಿಯಾಗಿದ್ದರೂ, ಬೂದಿಮುಚ್ಚಿದ ಕೆಂಡದಹಾಗೆ, ಅವಳ ಮೈಬಣ್ಣದಲ್ಲಿ ಕೊಂಚವಾದರೂ ಕಾಂತಿಯಿರಲಿಲ್ಲ. ದಾವಾಗ್ನಿಗೆ ಸಿಕ್ಕಿದ ಚಿಗುರಿನಂತೆ ಅವಳ ದೇಹವು ಬಾಡಿ ಕಳೆಗುಂದಿತ್ತೆಂದು ಹೇಳುವುದೂ ಸರಿಯಾದ ಸಾಮ್ಯವೆಂದು ತೋರುವುದಿಲ್ಲ.

ಅರಿಂದಮನು ಅವಳನ್ನು ನೋಡಿ ವಿಸ್ಮಿತನಾದನು. ಮನೆಯೊಳಗೆ ಹಾಸಿಗೆಯಲ್ಲಿ ಮಲಗಿದ್ದಾತನು ಹಾಗೆಯೇ ಎದ್ದು ಒಂದು ತಲೆದಿಂಬನ್ನೆಳೆದು ಒರಗಿಕೊಂಡು—"ನೀವು ಯಾರು?" ಎಂದು ಪ್ರಶ್ನೆ ಮಾಡಿದನು.

ಹೆಂಗಸು ಮುಖಪರದೆಯೊಳಗಿನಿಂದಲೇ—ನಾನು ಫೂಲಸಾಹೇಬನ ಸ್ತ್ರೀ ಎಂದು ಮೃದುಸ್ವರದಿಂದ ಹೇಳಿದಳು.

ಹೆಂಗಸು ಆ ರೀತಿಯಲ್ಲಿ ಬಂದುದನ್ನು ನೋಡಿ ವಿಸ್ಮಿತನಾಗಿದ್ದ ಅರಿಂದಮನು, ಬಂದವಳು 'ಫೂಲಸಾಹೇಬನ ಸ್ತ್ರೀ' ಎಂಬುದನ್ನು ಕೇಳಿ ಮತ್ತೂ ವಿಸ್ಮಿತನಾದನು! ಕೊಂಚ ಹೊತ್ತು ಸ್ವಪ್ನವೆಂದೇ ತೋರಿತು. ವೇಷವನ್ನು ಮರಸಿಕೊಂಡಿರುವ ಜುಮಲಿಯಾಗಿರಬಹುದೆ? ಎಂದು ಒಂದು ಸಲ ಸಂದೇಹಿಸಿದನು. ಆದರೆ ಈ ಕಂಠಸ್ವರವು ಅವಳದಲ್ಲ. ಜುಮಲಿಯ ಕಂಠಸ್ವರವನ್ನು ಒಂದಾವರ್ತಿ ಕೇಳಿದವರು ಅದನ್ನು ಎಂದೆಂದಿಗೂ ಮರೆಯುವುದು ಸಾಧ್ಯವಿಲ್ಲ. ಅವಳ ಕಂಠಸ್ವರದಲ್ಲಿ ಎಂದೂ ಮರೆಯಲಾಗದ ಒಂದು ಬಗೆಯ ತೀವ್ರತೆಯು ಮಿಶ್ರಿತವಾಗಿರುವುದು. ಈ ಕಂಠಸ್ವರದಲ್ಲಿ ಆ ತೀವ್ರತೆಯಿಲ್ಲ. ಹಾಗಾದರೆ ಇವಳು ಯಾರು? ಸಂಶಯಗ್ರಸ್ತನಾದ ಅರಿಂದಮನು ಆ ಹೆಂಗಸಿಗೆ ಎಂತಹ ಉತ್ತರ ಕೊಡಬೇಕೋ ತೋರದವನಾಗಿ, ಹುಬ್ಬುಗಂಟಿಟ್ಟು, ನೀರಸ ಭಾವದಿಂದ ಅವಳ ಕಡೆ ನೋಡುತ್ತಿದ್ದನು.

ಅರಿಂದಮನು ನಿರವನಾದುದನ್ನು ನೋಡಿ ಆ ಅವಗುಂಠನವತಿಯು, ನೀವು ಫೂಲಸಾಹೇಬನನ್ನು ಕಾಣಿರಾ? ಎಂದು ತಾನೇ ಮಾತಿಗೆ ಮೊದಲಿಟ್ಟಳು.

ಅರಿಂದಮ—ಬಲ್ಲೆ.

ರಮಣಿ—ನಾನು ಅವನ ಹೆಂಡತಿ, ನನ್ನ ಹೆಸರು ಮೋಹಿನೀ.

ಅರಿಂದಮ—ಇದು ಈಗ ತಿಳಿಯಿತು.

ರಮಣಿ—ಫೂಲಸಾಹೇಬನು ಬಂದೀಖಾನೆಯಿಂದ ತಪ್ಪಿಸಿಕೊಂಡು ಹೋದದ್ದು ನಿಮಗೆ ಜ್ಞಾಪಕವಿದೆಯೆ?

ಅರಿಂದಮ—ಇದೆ.

ರಮಣಿ—ಅವನು ನಿಮ್ಮನ್ನು ಕೊಲೆ ಮಾಡುವುದಾಗಿ ಶಪಥ ಮಾಡಿದುದು ನಿಮಗೇನಾದರೂ ಜ್ಞಾಪಕವಿದೆಯೆ?

ಅರಿಂದಮ—ಚೆನ್ನಾಗಿ ಜ್ಞಾಪಕವಿದೆ.

ರಮಣಿ—ಹಾಗಾದರೆ ನೀವು ಕೇವಲ ಸಾಧುಗಳಹಾಗೆ ನಿಶ್ಚಿಂತರಾಗಿ ಕುಳಿತಿರುವುದೆ?

ಅರಿಂದಮ—ಆಲೋಚಿಸಿ ತಾನೇ ಮಾಡುವುದೇನು? ಈ ಎರಡು ತಿಂಗಳಿಂದ ಹುಡುಕಿದರೂ ಅವನೆಲ್ಲಿರುವನೆಂಬುದೇ ತಿಳಿಯಲಿಲ್ಲ.

ರಮಣಿ—ಅದು ತಿಳಿಯದೇ ಹೋದರೂ ನಿಮ್ಮಂತಹ 'ಭಾರಿ' ಪತ್ತೇದಾರರು ಸುಮ್ಮನೆ ಕುಳಿತಿರುವುದು ನ್ಯಾಯವೆ? ಎರಡು ತಿಂಗಳಲ್ಲಿ ಸಾಧ್ಯವಾಗದ್ದು ಎರಡು ದಿನಗಳಲ್ಲಿ ಸಾಧ್ಯವಾದರೂ ಆಗಬಹುದು.

ಅರಿಂದಮ—ಅದು ಏನಾದರೂ ಆಗಲಿ, ನೀನು ಫೂಲಸಾಹೇಬನ ಹೆಂಡತಿ; ಇದರಿಂದ ನಿನಗೇನು ಲಾಭ?

ರಮಣಿ—ಲಾಭವೆ? ಅನೇಕವಾಗಿ; ಅದು ಬಹಳ ಮಾತುಗಳು; ಅವುಗಳು ಈಗ ಬೇಕಾದುದಿಲ್ಲ. ಆವಶ್ಯಕವಾದುದನ್ನು ಮಾತ್ರ ಮೊದಲು ಕೇಳಿರಿ. ಫೂಲಸಾಹೇಬನು ನಿಮ್ಮನ್ನು "ಖೂನಿ" ಮಾಡುವ ಉದ್ದೇಶ್ಯದಿಂದ ಪ್ರಾಣಪಣಪ್ರಯತ್ನ ಮಾಡುತ್ತಿದ್ದಾನೆ; ಅವನೆಂಥವ

ನಾದರೂ ಆಗಲಿ, ಈ ಸಾರಿ, ಹಿಡಿದ ಹಟವನ್ನು ಸಾಧಿಸದೆ ಬಿಡಲಾರನೆಂದು ತೋರುತ್ತದೆ. ಆ ವಿಚಾರವಾಗಿ ನಿಮ್ಮನ್ನು ಎಚ್ಚರಿಸಿ ಹೋಗೋಣವೆಂದೇ ನಾನು ಬಂದದ್ದು. ಎಚ್ಚರಿಕೆ! ಫೂಲಸಾಹೇಬನು ಬಹು ಭಯಂಕರ ಮನುಷ್ಯ. ಅವನು ಬಹು ರೂಪಿ; ಮನುಷ್ಯ ಮಾತ್ರನೆಂದು ಹೇಳುವುದಕ್ಕಾಗುವುದಿಲ್ಲ. ಅವನು ಮಾನವರೂಪದ ಪಿಶಾಚ; ಅವನು ದಾನವ; ಅವನು ಘಾತುಕ; ಅವನೇ ಕೊಲೆಪಾತಕ; ಅವನು ಭಯಂಕರ ಸರ್ಪ; ಅವನೇ ಹಸಿದ ಹೆಬ್ಬುಲಿ; ಸ್ವಲ್ಪ ಎಚ್ಚರದಪ್ಪಿದರೂ ಅವನು ಹಾವಾಗಿ ಕಚ್ಚಿ ಬಿಡುವನು, ಇಲ್ಲವೆ ಹುಲಿಯಾಗಿ ತಿಂದು ಬಿಡುವನು; ಅಥವಾ ಪಿಶಾಚನಾಗಿ ಕುತ್ತಿಗೆ ಮುರಿಯುವನು. ಮತ್ತೂ......

ಅರಿಂದಮ—(ಮೋಹಿನಿಯ ಮಾತು ಪೂರೈಸಗೊಡದೆ) ಈಗ ಆವಶ್ಯಕವಾದ ಸುದ್ದಿ ಹೇಳುತ್ತೇನೆಂದು ಹೇಳಿದೆಯಲ್ಲವೆ?

ರಮಣಿ—ಹೌದು, ಜ್ಞಾಪಕವಿದೆ. ಫೂಲಸಾಹೇಬನು ನಿಮ್ಮನ್ನು ಕೊಲ್ಲುವುದಕ್ಕಾಗಿ ಒಂದು ದಂಗಡದ ದಸ್ಯುಗಳನ್ನು ಸಂಗ್ರಹಿಸಿದ್ದಾನೆ. ಅವರೆಲ್ಲರೂ ನಿಮ್ಮನ್ನು ಕೊಲ್ಲುವುದಾಗಿ ಫೂಲಸಾಹೇಬನ ಹತ್ತಿರ ಪ್ರಮಾಣ ಮಾಡಿದ್ದಾರೆ. ಸ್ವಲ್ಪ ಸಾವಧಾನ ತಪ್ಪಿದರೂ, ಯಾರು ಯಾವ ಸಮಯದಲ್ಲಿ ಬಂದು ನಿಮ್ಮ ಹೃದಯದಲ್ಲಿ ಕಠಾರಿಯನ್ನು ನೆಡುವರೆಂಬುದು ನಿಮಗೆ ಗೊತ್ತಾಗುವುದಿಲ್ಲ. ಎಚ್ಚರಿಕೆ! ಹಗಲೂ ರಾತ್ರಿಯೂ ಎಚ್ಚರದಿಂದಿರಬೇಕು. ಬಹು ಭಯಂಕರ ಮನುಷ್ಯರವರು. ಎಲ್ಲರೂ ಕೊಲೆಗಾರರು; ಕೊಲೆ ಮಾಡುವುದು, ಗಾಯಪಡಿಸುವುದು ಇವುಗಳಲ್ಲಿ ಅವರಿಗೆ ಎಳ್ಳಷ್ಟೂ ಸಂಕೋಚವಿಲ್ಲ.

ಅರಿಂದಮ—ಅವರು ಯಾರೆಂಬುದು ತಿಳಿದಿದೆಯೆ?

ರಮಣಿ—ಇಲ್ಲ; ಅವರು ಒಬ್ಬಿಬ್ಬರಲ್ಲ, ಒಟ್ಟು ಹದಿಮೂರು ಮಂದಿ. ಎಲ್ಲರೂ ಯಮದೂತರೇ!

ಅರಿಂದಮ—ಅವರ ವಾಸಸ್ಥಾನವಾದರೂ ಗೊತ್ತಿರುವುದೆ?

ರಮಣಿ—ಅವರಿಗೆ ಇಂತಹುದೇ ವಾಸಸ್ಥಾನವೆಂಬ ನಿಬಂಧನೆಯಿಲ್ಲ. ಯಾವ ದಿನ ಅವರು ಒಟ್ಟಾಗಿ ಯಾವ ಕಡೆಗೆ ಹೊರಡುವರೋ

ಆ ದಿನವೆಲ್ಲಾ ಅದೇ ಅವರ ವಾಸಸ್ಥಾನ. ಅವರೆಲ್ಲರೂ ಸೇರಿ ಹಗಲೂ ರಾತ್ರಿಯೂ ಯಾವನನ್ನೋ ಹುಡುಕಿಕೊಂಡು ಅಲೆಯುತ್ತಿರುತ್ತಾರೆ.

ಅರಿಂದಮ—ಅವರ ಪ್ರಯತ್ನಗಳೆಲ್ಲಕ್ಕೂ ನನ್ನ ಮರಣವೇ ಲಕ್ಷ್ಯವೆಂಬುದು ಹೇಗೆ?

ರಮಣಿ—ಅದರಲ್ಲಿ ಇನ್ನೂ ಸಂದೇಹವಿರುವುದೆ?

ಅರಿಂದಮ—ಅವರೊಳಗಣ ಮತ್ತಾವ ಸಮಾಚಾರವಾದರೂ ತಿಳಿದಿರುವುದೆ?

ರಮಣಿ—ಅವರ ಪರಾಮರ್ಶಗಳಲ್ಲಿ ಒಂದನ್ನು ಮಾತ್ರ ಕಿವಿಯಾರ ಕೇಳಿದೆನು; ಅವರು ಹೇಗೆ ಭಯಂಕರರೋ ಆ ಪರಾಮರ್ಶವೂ ಹಾಗೆಯೇ ಭಯಂಕರವಾದದ್ದು.

ಅರಿಂದಮ—ಎಂತಹ ಪರಾಮರ್ಶ?

ರಮಣಿ—ಈ ದಿನ ರಾತ್ರಿ ಅವರು ನಿಮ್ಮನ್ನು ಈ ಸ್ಥಳದಲ್ಲಿಯೇ ಕೊಲ್ಲುವುದಕ್ಕಾಗಿ ಬರುತ್ತಾರೆ.

ಅರಿಂದಮ—(ಮುಂದೆ ಮಾತನಾಡಗೊಡದೆ) ಈ ಸ್ಥಳದಲ್ಲಿ? ನನ್ನ ಮನೆಯಲ್ಲಿಯೆ?

ರಮಣಿ—ಯಾಕೆ? ಇನ್ನೂ ನಂಬಿಕೆ ಇಲ್ಲವೇನು?

ಅರಿಂದಮ—ಎಲ್ಲರೂ ಬರುತ್ತಾರೆಯೇ?

ರಮಣಿ—ಎಲ್ಲರೂ; ಎಲ್ಲರೂ ಶಪಥಮಾಡಿದ್ದಾರೆ.

ಅರಿಂದಮ—ಯಾವಾಗ ಬರುತ್ತಾರೆ?

ರಮಣಿ—ಈ ರಾತ್ರಿ.

ಅರಿಂದಮ—ಅದು ಗೊತ್ತು. ರಾತ್ರಿ ಎಷ್ಟು ಹೊತ್ತಿಗೆ?

ರಮಣಿ—ರಾತ್ರಿ ಎರಡು ಗಂಟೆಯ ಮೇಲೆ!

ಅರಿಂದಮ—ಸರಿ.

ರಮಣಿ—ಅಯ್ಯಾ, ಇಂದಿನ ದಿನ ನೀವು ಬದುಕುವ ಉಪಾಯ ಮಾಡಿದರೆ ಸಾಲದು. ಅವರನ್ನು ಹಿಡಿಯುವ ಪ್ರಯತ್ನವೇನಾದರೂ

ನಡೆದೀತೇನೋ ನೋಡುತ್ತೇನೆ; ನೀವು ಪಕ್ಕಾ ಪತ್ತೇದಾರರೆಂಬುದು ನನಗೆ ದೃಢಪಡಬೇಕಾದರೆ ಆಗಲೇ. ಈಗಲಿಂದಲೇ ಬೇಕಾದಷ್ಟು ಜನ ಪೋಲೀಸಿನವರನ್ನು ಕರೆದುಕೊಂಡುಬಂದು ಮನೆಯಲ್ಲಿ ಮರೆಸಿಡಿ. ನನ್ನ ಸಲಹೆಯನ್ನೂ ಕೇಳಿ.

ಅರಿಂದಮ—ಹಾಗೆಲ್ಲ ಮಾಡಿದರೆ ಫೂಲಸಾಹೇಬನು ಸಿಕ್ಕಿ ಹೋಗುವನು. ಆತನು ನಿನ್ನ-ಸ್ವಾಮಿಯಲ್ಲವೆ?

ರಮಣಿ—ಫೂಲಸಾಹೇಬನು ನನ್ನ ಸ್ವಾಮಿ ಎಂಬ ಮಾತನ್ನು ಇಷ್ಟೊಂದು ಪ್ರಯತ್ನಪೂರ್ವಕವಾಗಿ ನನಗೆ ಉಚ್ಚರಿಸಬೇಕಾದುದಿಲ್ಲ. ನಾನು ಫೂಲಸಾಹೇಬನ ಹೆಂಡತಿ, ಫೂಲಸಾಹೇಬನು ನನ್ನ ಪತಿ ಅಥವಾ ಸ್ವಾಮಿ ಎಂಬುದು ನನಗೆ ತಿಳಿಯದೆ? ತೀಕ್ಷ್ಣ ಬುದ್ಧಿಯುಳ್ಳ ಪತ್ತೇದಾರರೆಂದು ಹೆಸರುಗೊಂಡ ನೀವು ಕೇವಲ ಬುದ್ಧಿ ಇಲ್ಲದವರ ಹಾಗೆ ಈಗ ಹೀಗೆ ಮಾತನಾಡುವುದೆ?

ಅರಿಂದಮ—ಹಾಗಾದರೆ ನೀನು ಫೂಲಸಾಹೇಬನಿಗೆ ಕೆಡಕಾಗ ಲೆನ್ನುತ್ತೀಯೇನು? ಇದರ ಕಾರಣ?

ರಮಣಿ—ಕಾರಣವೆ? ಅವನು ನನ್ನ ಪರಮ ಶತ್ರು. ಪ್ರಪಂಚದಲ್ಲಿ ಮನುಷ್ಯ ಮನುಷ್ಯರಿಗೆ ಇಷ್ಟರ ದ್ವೇಷವುಂಟಾಗುವುದೆಂದು ನಾನು ತಿಳಿದಿರಲಿಲ್ಲ. ಫೂಲಸಾಹೇಬನಿಗೆ ನೀವು ಎಷ್ಟು ಮಟ್ಟಿಗೆ ಶತ್ರುಗಳಾಗಿರುವಿರೋ ಅದಕ್ಕೂ ಹೆಚ್ಚಾಗಿ ಫೂಲಸಾಹೇಬನು ನನಗೆ ಶತ್ರುವಾಗಿದ್ದಾನೆ. ಅವನು ಸೆರೆಸಿಕ್ಕಿದಾಗ ನಾನು ಕೊಂಚ ಸುಖಿಯಾಗಿದ್ದೆನು; ಈಗ ನನ್ನ ಯಾತನೆಗಳಿಂದ ನನ್ನ ಹೃದಯವು ಬೆಂದು ಬೂದಿಯಾಗಿ ಹೋಗುತ್ತಿದೆ.

ಅರಿಂದಮ—ಫೂಲಸಾಹೇಬನನ್ನು ದಸ್ತಗಿರಿಮಾಡಿದರೆ ನಿನಗೆ ಸಂತೋಷವೊ?

ರಮಣಿ—ಅವನನ್ನು ಕೊಂದರೆ ಸಂತೋಷ.

ಅರಿಂದಮ—ಗಂಡನಮೇಲೆ ಇಷ್ಟು ಕೋಪಗೊಳ್ಳುವುದಕ್ಕೆ ಕಾರಣವೇನು?

ರಮಣಿ—ಆ ಮಾತುಗಳಿಂದ ನಿಮಗೇನೂ ಉಪಯೋಗವಿಲ್ಲ; ಇನ್ನು ಹೊರಡುತ್ತೇನೆ. ನಾನು ಹೇಳಿದುದೆಲ್ಲ ಚೆನ್ನಾಗಿ ನೆನಪಿರಲಿ.

ಮೋಹಿನಿಯು ಥಟ್ಟನೆ ಎದ್ದು ಅಲ್ಲಿಂದ ಸರಸರನೆ ಹೊರಟು ಹೋದಳು.

ಅರಿಂದಮನು ಬೀದಿಯ ಕಡೆ ಕಿಟಕಿಯೊಂದರಲ್ಲಿ ಬಗ್ಗಿ ನೋಡಿದನು. ಮೋಹಿನಿಯು ಮುಖಪರದೆಯನ್ನು ತೆಗೆದುಹಾಕಿದ್ದಾಳೆ; ಹಾರು ಹಾರುತ್ತ ಓಡಿಹೋಗುತ್ತಿದ್ದಾಳೆ. ಆ ದಾರಿಯಲ್ಲಿ ಹೋಗುತ್ತಿದ್ದ ದಾರಿಗರೊಬ್ಬಿಬ್ಬರು ದಾರಿಯಲ್ಲಿಯೇ ನಿಂತು, ಅವಾಕ್ಕಾಗಿ ಮೋಹಿನಿಯನ್ನೇ ನೋಡುತ್ತಿದ್ದಾರೆ.

---

## ನಾಲ್ಕನೆಯ ಪರಿಚ್ಛೇದ

### ಅರಿಂದಮನ ಸನ್ನಾಹ

ತಾನಾಗಿ ಬಂದೊದಗಿದ ಈ ಘಟನೆಯು ನಿರತಿಶಯವಾದ ಅದ್ಭುತ ರಸಾತ್ಮಕವಾದುದೆಂಬುದು ಅರಿಂದಮನಿಗೆ ಅನುಭವವಾಯಿತು. ಮಾತು ಕತೆಗಳಿಗೆ ಮೊದಲೇ ಮೋಹಿನಿಯು ದುಶ್ಶೀಲಳಿರಬಹುದೆಂದು ಊಹಿಸಿದ್ದನು. ಅನಂತರ ಅವಳು ದಾರಿಯಲ್ಲಿ ಹೊರಟ ರೀತಿಯನ್ನು ನೋಡಿದ್ದರಿಂದ ತನ್ನ ಊಹೆಯು ಸ್ವಲ್ಪವಾದರೂ ನಿರಾಧಾರವಾದುದಲ್ಲವೆಂಬುದು ದೃಢಪಟ್ಟಿತು. ಇಷ್ಟಾದರೂ ಅರಿಂದಮನು ಅವಳ ಮಾತು ಕತೆಗಳನ್ನು ಹುಚ್ಚಳ ಮಾತೆಂದು ಅಲಕ್ಷ್ಯಮಾಡಲಿಲ್ಲ. ಆತನಂತೆ ಸಾಹಸಿಯೂ ಚತುರನೂ ಸದ್ವಿವೇಚಕನೂ ಆದವನು ಪುರುಷ ಪ್ರಯತ್ನಮಾಡದೆ ದೇವರಮೇಲೆ ಭಾರಹಾಕುವುದು ಕೇವಲ ನಿಂದಾರ್ಹವಾದ ವಿಷಯವಾಗಿದ್ದರೂ, ಆತನು ಅನೇಕ ಸಮಯಗಳಲ್ಲಿ ದೇವರ ದಯೆಯ ಮೇಲೆಯೇ ನಿರ್ಭರನಾಗಿರುತ್ತಿದ್ದನು. ಈ ಪ್ರಪಂಚದಲ್ಲಿ ದೈವಸಹಾಯದ ಹೊರತು ಕೇವಲ ಪುರುಷ ಪ್ರಯತ್ನದಿಂದ ಯಾವುದೂ ಸಾಧ್ಯವಾಗುವುದಿಲ್ಲವೆಂಬುದೂ, ದೈವದ ಸಹಾಯವೊಂದಿದ್ದರೆ ಎಂತಹ

ಗುರುತರ ಘಟನೆಯಾದರೂ ಪ್ರಬಲ ಪ್ರಯತ್ನವಿಲ್ಲದೆಯೇ ಕೈಗೂಡುವು ದೆಂಬುದೂ ಆತನ ಅನುಭವಕ್ಕೆ ಬಂದ ವಿಷಯಗಳಾಗಿದ್ದುವು.

ಆ ಅಪರಿಚಿತಳಾದ ಉನ್ಮಾದಿನಿಯ ಮಾತಿನಲ್ಲಿ ಅವನು ವಿಶೇಷ ವಾದ ನಂಬುಗೆಯಿಟ್ಟು ದಸ್ಯು ದಳವನ್ನು ಮುರಿಯುವುದಕ್ಕಾಗಿ ಯಾರೂ ಎಂದೂ ಮನಸ್ಸಿನಲ್ಲಿ ಸಹ ಆಲೋಚಿಸದಿರುವಂತಹ ಮಹತ್ತಾ ದೊಂದು ಸನ್ನಾಹ ಮಾಡತೊಡಗಿದನು. ಸನ್ನಾಹವು ತೀರಾ ಹೊಸ ಬಗೆ; ಆದರಿಂದ ಬಹು ಮಟ್ಟಿಗೆ ಜಯವೇ ಉಂಟು; ಮೇಲಾಗಿ ಇದರಲ್ಲಿ ಭಯ, ಶಾರೀರಕ ಪರಿಶ್ರಮ ಮುಂತಾದುವು ಇಲ್ಲವೆಂದರೂ ಬಾಧಕವಿಲ್ಲ.

ಅರಿಂದಮನು ಯೋಗೇಂದ್ರನಾಥನನ್ನು ನೋಡುವುದಕ್ಕೆಂದು ಠಾಣೆಗೆ ಬಂದನು. ಆ ಸಮಯದಲ್ಲಿ ಯೋಗೇಂದ್ರನಾಥನು ಅಲ್ಲಿಯೇ ಇದ್ದನು. ಅರಿಂದಮನು ಯೋಗೇಂದ್ರನಾಥನಿಗೆ ಫೂಲಸಾಹೇಬನ ಈ ನೂತನ ಕಲ್ಪನೆಯ ವಿಚಾರವೆಲ್ಲವನ್ನು ಹೇಳಿದನಾದರೂ ತಾನು ಅವನನ್ನು ದಸ್ತಗಿರಿಮಾಡುವುದಕ್ಕೋಸ್ಕರ ನಿಶ್ಚಯಮಾಡಿಕೊಂಡಿರುವ ಉಪಾಯದ ವಿಷಯವಾಗಿ ಒಂದು ಮಾತನ್ನೂ ಹೇಳಲಿಲ್ಲ.

ಯೋಗೇಂದ್ರನಾಥನು—ವ್ಯಾಪಾರವು ಸಹಜವಾದುದಲ್ಲ. ನಿಮ್ಮ ಮನೆಯೊಳಕ್ಕೆ ಡಕಾಯಿತರು ಪ್ರವೇಶಮಾಡುವುದೆ? ಚೆನ್ನಾಯಿತು! ಈ ಸಾರಿ ತನ್ನ ವಿದ್ಯೆ ಬುದ್ಧಿಗಳೆಲ್ಲವೂ ವ್ಯಕ್ತಗೊಳ್ಳುವವು, ಎಂದು ಹೇಳಿದನು.

ಅರಿಂದಮ—ಹದಿಮೂರು ಮಂದಿ ಡಕಾಯಿತರಿಗಾಗಿ ಭಯಪಡು ವಂತಹ ಶಿಕ್ಷೆಯು ಅರಿಂದಮನಿಗೆ ಇದುವರೆಗೂ ಆಗಿಲ್ಲ. ಈಗ ಬಂದಿ ರುವ ಸಮಾಚಾರವು ನಿಜವಾದುದೇ ಆದರೆ, ಅರಿಂದಮನು ಆ ಹದಿ ಮೂರು ಮಂದಿಯನ್ನೂ ಕಬ್ಬಿಣದ ಬಳೆಗಳಿಂದ ಅಲಂಕರಿಸಿ ನಾಳಿನ ಉದಯಸಮಯಕ್ಕೆ ಸರಿಯಾಗಿ ಇತ್ತ ಕರೆದುತರುವುದನ್ನು ನೀನೇ ನೋಡುವೆ.

ಯೋಗೇಂದ್ರ—ಅರಿಂದಮಬಾಬು! ಅವರು ಹದಿಮೂರು ಮಂದಿಯೆಂದೇ ತಾವು ಎಣಿಕೆಮಾಡಿದಿರಾ? ಫೂಲಸಾಹೇಬನೂ ಅವರಲ್ಲಿ ಒಬ್ಬನು; ಫೂಲಸಾಹೇಬನಿಂದ ಆರಿಸಲ್ಪಟ್ಟ ಹನ್ನೆರಡು ಜನ; ಇನ್ನೊಬ್ಬನೂ ಎರಡನೆಯ ಫೂಲಸಾಹೇಬನೇ ಎಂದು ನೆನೆಸಿರಿ.

ಅರಿಂದಮ—ಸಂಶಯವಿಲ್ಲ.

ಯೋಗೇಂದ್ರ—ಹಾಗಾದರೆ?

ಅರಿಂದಮ—ಪುನಃಪುನಃ 'ಹಾಗಾದರೆ' ಏಕೆ?

ಯೋಗೇಂದ್ರ—ಈಗ ಯಾವ ಉಪಾಯವನ್ನು ಆಲೋಚಿಸಿರುವಿರಿ?

ಅರಿಂದಮ—ಆತ್ಮರಕ್ಷಣೆಗಾಗಿಯೋ? ಇಲ್ಲವೆ ಅವರನ್ನು ಬಂಧಿಗಳನ್ನಾಗಿ ಮಾಡುವುದಕ್ಕೋ?

ಯೋಗೇಂದ್ರ—ಎರಡು ಕಾರಣಗಳಿಗೂ.

ಅರಿಂದಮ—ಇನ್ನೂ ಸಮಯವುಂಟು, ಅದಲ್ಲದಿದ್ದರೆ ಒಂದು ಉಪಾಯ ಮಾಡಿಕೊಂಡರಾಯಿತು.

ಯೋಗೇಂದ್ರ—ಸಮಯವಿನ್ನೆಲ್ಲಿ ಉಂಟು? ಅವರು ಬರುವುದು ಈ ರಾತ್ರಿಯೇ ಅಲ್ಲವೆ? ಈಗ ನನ್ನ ಕಡೆಯಿಂದ ತಮಗೆ ಎಷ್ಟು ಜನರು ಬೇಕೋ ಹೇಳಿಬಿಡಿ.

ಅರಿಂದಮ—ಒಬ್ಬನೂ ಬೇಡ.

ಯೋಗೇಂದ್ರ—(ವಿಸ್ಮಿತನಾಗಿ) ಅದು ಹೇಗೆ?

ಅರಿಂದಮ—ಈ ಜನರನ್ನು ಕಟ್ಟಿಕೊಂಡು ನಾನೇನು ಮಾಡಲಿ?

ಯೋಗೇಂದ್ರ—ಒಂಟಿಯಾಗಿದ್ದುಕೊಂಡು ತಾವೇ ಏನು ಮಾಡಬಲ್ಲಿರಿ?

ಅರಿಂದಮ—ಸಾಧ್ಯವಾದುದನ್ನು!

ಯೋಗೇಂದ್ರ—ಏನು? ಹುಚ್ಚರಂತೆ ಮಾತನಾಡುವಿರಲ್ಲ? ಊಹೆಗಳ ಮೇಲೆ ಊಹೆಗಳನ್ನು ಜತೆಗೂಡಿಸಿ ಮಾತನಾಡುವುದರಿಂದಲೂ,

ಕಾಡು ನಾಡುಗಳೆನ್ನದೆ ಅಲೆದಾಡುವುದರಿಂದಲೂ ನಿಮ್ಮ ಮಿದುಳು ಕೆಟ್ಟಿರಬಹುದೆಂದು ತೋರುತ್ತದೆ.

ಅರಿಂದಮ—(ನಗುತ್ತಾ) ಹಾಗೂ ಆಗುವುದು!

ಯೋಗೇಂದ್ರ—ನಿಮಗೆ ಎಲ್ಲ ವಿಚಾರಗಳಲ್ಲಿಯೂ ಪರಿಹಾಸ. ಕೆಲಸದ ಪ್ರಸ್ತಾಪದಲ್ಲಿ ಪರಿಹಾಸಮಾಡುವುದು ಬುದ್ಧಿವಂತರ ಲಕ್ಷಣವಲ್ಲ. ನೀವು ಒಂಟಿಯಾಗಿದ್ದರೆ ಆ ಹದಿಮೂರು ಮಂದಿಯನ್ನು ಏನೂ ಮಾಡಲಾಗುವುದಿಲ್ಲ.

ಅರಿಂದಮ—ದೇವೇಂದ್ರವಿಜಯನಿದ್ದಾನೆ.

ಯೋಗೇಂದ್ರ—ಅಂದಿನ ಘಟನೆಯಲ್ಲಿ ಆತನ ಬುದ್ಧಿಬಲಗಳ ಪರಿಚಯವಾಗಿದೆ. ಆ ದಿನದಂತೆಯೇ ಈ ದಿನವೂ ಆತನು ತಮಗೆ ನೆರವಾಗುವುದಾದರೆ ತಮ್ಮ ವಿಪತ್ತಿಗೆ ಆತಂಕವೇ ಇಲ್ಲ.

ಅರಿಂದಮ—ಹೊಸಬ. ಅದು ಹಾಗಿರಲಿ; ದೇವೇಂದ್ರವಿಜಯನ ಮುಖ ಕಣ್ಣು ಭಾವ ಮತ್ತೂ ಮಾತುಕತೆಗಳನ್ನು ನೋಡಿದರೆ ಆತನ ಬುದ್ಧಿಶಕ್ತಿಯು ಎಷ್ಟು ಪರಿಷ್ಕಾರವಾಗಿರುವುದೆಂಬುದು ತಿಳಿಯಬರುವುದು. ಅವನು ನನ್ನೊಡನೆ ಈ ಎರಡು ತಿಂಗಳುಗಳಿಂದ ಅಲೆದಾಡುವುದರಿಂದ ಪತ್ತೇದಾರಿಯನ್ನು ಕಲಿಯಬೇಕೆಂಬ ಕುತೂಹಲವು ಅವನಿಗೆ ಹುಟ್ಟಿರುತ್ತದೆ. ಬುದ್ಧಿಶಕ್ತಿಗಳು ಪ್ರಬಲವಾಗಿಲ್ಲದಿರುವುದಾದರೆ ಯಾವನೂ ಈ ಬಗೆಯ ವೃತ್ತಿಗೆ ಆಸೆಪಡುವುದಿಲ್ಲ. ಯಾರಲ್ಲಿ ಸ್ವಲ್ಪವಾದರೂ ಬುದ್ಧಿಯಿರುವುದೋ, ಯಾರಲ್ಲಿ ಚತುರತೆಯು ಚಿಕ್ಕದಾದರೂ ಇರುವುದೋ, ಯಾರ ಶರೀರದಲ್ಲಿ ಬಲವಿರುವುದೋ ಅಂಥವರು ಇಂತಹ ಕೆಲಸಗಳೆಂದರೆ ಸ್ವಲ್ಪ ಮಟ್ಟಿಗಾದರೂ ಆನಂದಿತರಾಗಿಯೇ ಆಗುವರು.

ಯೋಗೇಂದ್ರ—ನಿಮ್ಮ ದೇವೇಂದ್ರವಿಜಯನು ಚತುರನಲ್ಲವೆಂದಾಗಲೀ, ಬುದ್ಧಿವಂತನಲ್ಲವೆಂದಾಗಲೀ, ಬಲಶಾಲಿಯಲ್ಲವೆಂದಾಗಲೀ ನನ್ನ ಅಭಿಪ್ರಾಯವಲ್ಲ. ಅವನು ಈ ಗುಣಗಳಿಂದ ಕೂಡಿರುವನಾದರೂ

ಆ ಹದಿಮೂರು ಮಂದಿಗೆ ನೀವಿಬ್ಬರು ಇದಿರಾಗಿ ನಿಂತು ಹೋರಾಡಲಾಗುವುದೆ? ಅದೂ ಅಲ್ಲದೆ ಆ ಹದಿಮೂರು ಜನರಲ್ಲಿ ಸ್ವಯಂ ಫೂಲಸಾಹೇಬನು ಒಬ್ಬನಾಗಿ ಇದ್ದೇ ಇರುವನಲ್ಲವೆ?

ಅರಿಂದಮ—ಒಂದು ದಿನ ನಾನೊಬ್ಬನೇ ಇಪ್ಪತ್ತೊಂದು ಜನರಿಗೆ ಎಂತಹ ದುರ್ದಶೆಯನ್ನು ತಂದೆನೆಂಬುದು ಮರೆತುಹೋಯಿತೆ?

ಯೋಗೇಂದ್ರ—ಇಲ್ಲ, ಅದು ಜ್ಞಾಪಕವಿದೆ. ನಿಮ್ಮ ಬುದ್ಧಿಬಲವು ಅಸಾಧಾರಣವಾದದ್ದು. ಆದರೆ ಫೂಲಸಾಹೇಬನು ಸಾಮಾನ್ಯ ಮನುಷ್ಯನಲ್ಲ; ಅದ್ದರಿಂದ ಹೀಗೆ ಹೇಳಿದೆ.

ಅರಿಂದಮ—ಹೋಗಲಿ, ನನಗೆ ಒಂದು ವಿಷಯದಲ್ಲಿ ಸಹಾಯವು ಬೇಕಾಗಿದೆ. ಕೆಲವು ಇಲೆಕ್ಟ್ರಿಕ್ ಬ್ಯಾಟರಿಗಳ ಅವಶ್ಯಕತೆಯುಂಟಾಗಿದೆ; ಸಾಯಂಕಾಲದೊಳಗಾಗಿ ತರಿಸಿಕೊಡಬಲ್ಲೆಯಾ?

ಯೋಗೇಂದ್ರ—ಇಲೆಕ್ಟ್ರಿಕ್ ಬ್ಯಾಟರಿಯಿಂದ ಏನುಮಾಡುತ್ತೀರಿ?

ಅರಿಂದಮ—(ನಗುತ್ತಾ) ಮಾಡುವುದೇನು ? ಸ್ವಲ್ಪ ಮಟ್ಟಿಗೆ ವಿಜ್ಞಾನ ಶಾಸ್ತ್ರ ವಿಚಾರವಾದ ಸಮಾಲೋಚನೆ ಮಾಡುವುದು.

ಯೋಗೇಂದ್ರ—ನಿಮ್ಮ ಮನೋಗತವನ್ನು ತಿಳಿಯುವುದು ಕಷ್ಟ. ನೀವು ಬಹು ಮರ್ಮಿಗಳು.

ಅರಿಂದಮ—ತಮಗೂ ಹಾಗೆಯೆ ?

ಯೋಗೇಂದ್ರ—ಅಲ್ಲದೆ ಏನು? ಇಲೆಕ್ಟ್ರಿಕ್ ಬ್ಯಾಟರಿಗಳಲ್ಲದೆ ಇನ್ನೇನಾದರೂ ಅವಶ್ಯಕವೋ ?

ಅರಿಂದಮ—ಹದಿನಾಲ್ಕು ಜತೆ ಕೈಕೋಳಗಳು ಮತ್ತೂ ಸರಪಳಿಗಳು. ಎಲ್ಲವೂ ಗಟ್ಟಿಮುಟ್ಟಾಗಿರಬೇಕು.

ಯೋಗೇಂದ್ರ—ಒಂದೇಕೆ ಹೆಚ್ಚಾಗಿ?

ಅರಿಂದಮ—ಆ ಹದಿಮೂರು ಜನರೊಡನೆ ಜುಮಲಿಯು ಏನು ಮಾಡಿದರೂ ಮಾಡಬಹುದು. ಹಾಗಿಲ್ಲವಾದರೆ ಫೂಲಸಾಹೇಬನಿಗೆ ಎರಡು ಜತೆ ಕೋಳಗಳು ಆವಶ್ಯಕವಾದರೂ ಆಗಬಹುದು.

ಯೋಗೇಂದ್ರ—ಅರಿಂದಮಬಾಬು, ನಾನೇನೂ ಹೇಳಲಾರೆ. ನಿಮ್ಮ ಮಾತುಗಳು ನನಗೆ ಒಪ್ಪಿಗೆಯಿಲ್ಲ. ಹೆಚ್ಚು ಜನರು ಬೇಕಿಲ್ಲವೆಂದರೇನು? ನಾನು ಠಾಣೆಯಿಂದ ಹನ್ನೆರಡು ಜನರನ್ನು ಕಳುಹಿಸಿಕೊಡುತ್ತೇನೆ. ಈ ರಾತ್ರಿಯ ಮಟ್ಟಿಗೆ ಅವರು ನಿಮಗೆ ಸಹಾಯಕರಾಗಿ ನಿಮ್ಮ ಮನೆಯಲ್ಲಿ ಕಾಯ್ದುಕೊಂಡಿರಲಿ; ಅಂತಹ ಸಮಯಗಳಲ್ಲಿ ಅವರಿಂದ ಬಹು ಮಟ್ಟಿಗೆ ಸಹಾಯವಾಗುವುದು.

ಅರಿಂದಮ—ಒಬ್ಬನೂ ಬೇಕಿಲ್ಲ. ನನ್ನ ಪ್ರಯತ್ನದಲ್ಲಿ ನಂಬುಗೆ ಇಲ್ಲವೇನು?

ಯೋಗೇಂದ್ರ—ನಿಮಗೆ ಹೇಗೆ ಇಷ್ಟವೋ ಹಾಗೆ ಮಾಡಿರಿ. ನಾನು ಮತ್ತೇನೂ ಹೇಳುವುದಿಲ್ಲ.

ಅರಿಂದಮ—ನಾನು ಹೊರಡುತ್ತೇನೆ. ಇನ್ನು ಹೊತ್ತು ಕಳೆಯಲಾರೆ. ಇಲೆಕ್ಟ್ರಿಕ್ ಬ್ಯಾಟರಿಗಳನ್ನೂ ಕೈಕೋಳಗಳನ್ನೂ ಸಂಕೋಲೆಗಳನ್ನೂ ಆದಷ್ಟು ಬೇಗ ಕಳುಹಿಸಿಕೊಡಿ.

ಯೋಗೇಂದ್ರ—ಎಲ್ಲವೂ, ಅರ್ಧ ಗಂಟೆಯೊಳಗಾಗಿ ಬಂದು ಸೇರುವುವು.

---

## ಐದನೆಯ ಪರಿಚ್ಛೇದ

### ಸ್ವಾಗತ ಸನ್ನಾಹ

ಯೋಗೇಂದ್ರನಾಥನ ಕಡೆಯಿಂದ ಹೊರಟ ಅರಿಂದಮನು ನಿಜನಿವಾಸಕ್ಕೆ ಬಂದು ನೋಡಿದನು. ದೇವೇಂದ್ರವಿಜಯನು ಇನ್ನೂ ಬಂದಿರಲಿಲ್ಲ. ಅರಿಂದಮನು ಒಂದು ಹೊಗೆಯ ಸುತ್ತನ್ನು ತೆಗೆದುಕೊಂಡು ಬೈಠಕಖಾನೆಯ ಬಾಗಿಲ ಬಳಿ ಕುಳಿತು ಯಾವುದೊಂದು ಯೋಚನೆಯೂ ಇಲ್ಲದೆ ಹೊಗೆಬತ್ತಿಯನ್ನು ಹೊತ್ತಿಸುತ್ತಿದ್ದನು.

ಯೋಗೇಂದ್ರನಾಥನು ಕೊಟ್ಟುಕಳುಹಿದ ಇಲೆಕ್ಟ್ರಿಕ್ ಬ್ಯಾಟರಿಗಳೂ ಕೈಕೋಳಗಳೂ ಸಂಕೋಲೆಗಳೂ ತಲೆಹೊರೆಗಳಾಗಿ ಯಥಾ

ಸಮಯದಲ್ಲಿ ಬಂದು ತಲ್ಪಿದುವು. ಅರಿಂದಮನು ಒಂದೊಂದನ್ನೂ ತೆಗೆದುಕೊಂಡು, ಹಿಂದು ಮುಂದು ತಿರುಗಿಸಿನೋಡಿ, ಒಳಕ್ಕೆ ತೆಗೆದುಕೊಂಡು ಹೋದನು. ಕೈಕೋಳಗಳೂ ಸಂಕೋಲೆಗಳೂ ಆವಶ್ಯಕವಾದಾಗ ಕೂಡಲೇ ಸಿಕ್ಕುವ ಹಾಗೆ ಮಹಡಿಯಮೇಲೆ ಅವನ್ನು ಜೋಪಾನಪಡಿಸಿದನು.

ಅನಂತರ ಇಲೆಕ್ಟ್ರಿಕ್ ಬ್ಯಾಟರಿಗಳನ್ನು ಮೇಲಕ್ಕೆ ಹೋಗುವ ಮೆಟ್ಟಿಲುಗಳ ಅಡಿಯಲ್ಲಿರಿಸಿದನು. ಹಾಗೆಯೇ ಬ್ಯಾಟರಿಗಳಿಗೆ ತಂತಿಗಳನ್ನು ಸೇರಿಸಿ ಮಹಡಿ ಮೆಟ್ಟಿಲಿನ ನಾಲ್ಕೂ ಕಡೆಯಲ್ಲಿಯೂ ಮತ್ತು ರೈಲಿಂಗಿಗೂ ಜಂಟಿಸಿಬಿಟ್ಟನು. ತನ್ನ ಮಲಗುವ ಮನೆಯ ರಕ್ಕೆಬಾಗಿಲುಗಳಿಗೂ ಒಂದು ತಂತಿಯನ್ನು ಜಂಟಿಸಿ ಇಲೆಕ್ಟ್ರಿಕ್ ಬ್ಯಾಟರಿಯೊಂದಿಗೆ ಕೂಡಿಸಿದನು.

ಇದೆಲ್ಲವನ್ನೂ ಅರಿಂದಮನು ಸರಿಮಾಡುವ ಹೊತ್ತಿಗೆ ರಾತ್ರಿ ಒಂಬತ್ತು ಗಂಟೆಯಾಯಿತು. ರಾತ್ರಿ ಒಂಬತ್ತು ಗಂಟೆಯಮೇಲೆ ದೇವೇಂದ್ರವಿಜಯನು ಮನೆಗೆ ಬಂದನು.

ಅರಿಂದಮನು ದೇವೇಂದ್ರವಿಜಯನನ್ನು ಕುರಿತು—ಫೂಲಸಾಹೇಬನು ಇಂದು ಇಲ್ಲಿಗೆ ಬಿಜಯ ಮಾಡಿಸುತ್ತಾನೆ, ಎಂದನು.

ದೇವೇಂದ್ರವಿಜಯನು, ಆಗತಾನೇ ಆಕಾಶದಿಂದ ಉರುಳಿಕೊಂಡವನಂತೆ ಗಾಬರಿಯಾಗಿ, ಫೂಲಸಾಹೇಬ! ಇಲ್ಲಿ ಎಲ್ಲಿಗೆ ಬರುವನು? ಎಂದು ಕೇಳಿದನು.

ಇಲ್ಲಿ—ನಮ್ಮ ಮನೆಗೆ.

ಈಗ ಅವನೆಲ್ಲಿ?

ಅವನು ಎಲ್ಲಿಯಾದರೂ ಇರಲಿ, ಇಂದು ನಮ್ಮ ಮನೆಗೆ ಬರುತ್ತಾನೆ.

ತಮ್ಮ ಮನೆಗೇಯೇ?

ಹೌದು; ನಮ್ಮ ಮನೆಗೇ.

ಸಿಕ್ಕಿಬೀಳುವುದಕ್ಕೆ?

ಬಹು ಮುಟ್ಟಿಗೆ ಸಿಕ್ಕಿ ಬೀಳುವುದಕ್ಕೇ.

ನಿಮ್ಮ ಮಾತು ನನಗೆ ತಿಳಿಯುವುದೇ ಇಲ್ಲ.

ಬಾ, ತಿಳಿಯಿಸುತ್ತೇನೆ ಎಂದು ಅರಿಂದಮನು ನಗುತ್ತಾ ಹೇಳಿದನು.

*   *   *

ಅರಿಂದಮನು ದೇವೇಂದ್ರವಿಜಯನನ್ನು ಸೆಳೆದುಕೊಂಡು ಮಹಡಿಯ ಮೇಲಕ್ಕೆ ಹೋಗುವ ಸೋಪಾನದ ಬಳಿಗೆ ಕರೆದು ತಂದನು. ಹಾಗೆಯೇ ಇಲೆಕ್ಟ್ರಿಕ್ ಬ್ಯಾಟರಿಯ ಸಹಾಯದಿಂದ ಮೆಟ್ಟಿಲ ಮೇಲಿನ ತಂತಿಗಳೊಳಗೆ ಅಲ್ಪ ಪರಿಮಾಣದಲ್ಲಿ ವಿದ್ಯುಚ್ಛಕ್ತಿಯು ಪ್ರವಹಿಸುವಂತೆ ಮಾಡಿಬಿಟ್ಟು—ಈಗ ನೀನು ಮೆಟ್ಟಿಲಿನ ಮೇಲೆ ಹತ್ತಿ ಸ್ವಲ್ಪ ನಿಲ್ಲು ನೋಡುವ, ಎಂದನು.

ಅರಿಂದಮನು ವಯಸ್ಸಿನಲ್ಲಿ ದೇವೇಂದ್ರವಿಜಯನಿಗಿಂತ ಬಹಳ ಹಿರಿಯನಾದುದರಿಂದಲೂ, ಈ ಎರಡು ತಿಂಗಳ ಕಾಲದಿಂದ ಬೆಳೆದು ಬಂದ ಮೈತ್ರಿಯ ದೆಸೆಯಿಂದಲೂ ಆತನೊಡನೆ ಮಾತನಾಡುವಾಗ, 'ತಾವು,' 'ತಮ್ಮ' ಮುಂತಾದ ಗೌರವ ಸೂಚಕವಾದ ಮಾತು ಕತೆಗಳಿಗೆ ಬದಲಾಗಿ ಸ್ನೇಹ ಸೂಚಕವಾದ 'ನೀನು,' 'ನಿನ್ನ' ಮುಂತಾದ ಶಬ್ದಗಳನ್ನೇ ಉಪಯೋಗಿಸುತ್ತಿರುವನು. ಅರಿಂದಮನ ಮಾತು ಕೇಳಿದ ದೇವೇಂದ್ರವಿಜಯನು ಕೂಡಲೇ ದರ್ಪದಿಂದ ಪಾರ್ಶ್ವದಲ್ಲಿದ್ದ ರೇಲಿಂಗನ್ನು ಹಿಡಿದು ಮೆಟ್ಟಿಲನ್ನು ಹತ್ತಿದನು; ಅದರೊಡನೆಯೇ ಯಾತನಾಮಯವಾದ ತೀವ್ರತರ ಚೀತ್ಕಾರಪೂರ್ವಕವಾದ ಅವನ ಆರ್ತನಾದವು ಆ ಮನೆಯಲ್ಲಿ ಪ್ರತಿಧ್ವನಿತವಾಯಿತು. ದೇವೇಂದ್ರವಿಜಯನು ಮೆಟ್ಟಿಲಿನಿಂದ ಐದು ಮೊಳಗಳ ದೂರಕ್ಕೆ ಹಾರಿಬಿದ್ದನು.

ಅನಂತರ ಅರಿಂದಮನು ದೇವೇಂದ್ರವಿಜಯನಿಗೆ ಎಲ್ಲವನ್ನೂ ಹೇಳಿದನು. ದೇವೇಂದ್ರನು ಕೇಳಿ ವಿಸ್ಮಿತನಾದನು. ಅರಿಂದಮನು,

ನೀನು ಒಂದು ಬ್ಯಾಟರಿಯ ಶಕ್ತಿಯನ್ನು ಮಾತ್ರ ನೋಡಿದೆ; ಹತ್ತು ಬ್ಯಾಟರಿಗಳೂ ಒಟ್ಟುಗೂಡಿ ಕೆಲಸ ಮಾಡುವಾಗ ಮೆಟ್ಟಿಲಮೇಲೆ ಒಂದು ಸಲ ಕಾಲೂರಿದರೆ ಸಾಕು—ಇನ್ನೊಂದು ಕಾಲನ್ನು ಕದಲಿಸುವುದಕ್ಕೂ ತ್ರಾಣವಿರುವುದಿಲ್ಲವೆಂದು ತಿಳಿ. ಫ್ರೂಲಸಾಹೇಬನು ಸಿಕ್ಕಿಬಿದ್ದಾಗ ರೇವತಿಯ ವಿಚಾರವಾದ ಎಲ್ಲ ವೃತ್ತಾಂತವನ್ನೂ ತಿಳಿಸುವ ವರೆಗೆ ಅವನನ್ನು ಈ ಮೆಟ್ಟಿಲಮೇಲೆ, ಈ ಯಾತನಾಮಯವಾದ ಅವಸ್ಥೆಯಲ್ಲಿಯೇ ನಿಲ್ಲಿಸುವೆನು. ದಾರುಣವಾದ ಈ ಬಾಧೆಯ ದೆಸೆಯಿಂದ ಅವನು ತನ್ನ ರಹಸ್ಯ ಸಮಾಚಾರಗಳೆಲ್ಲವನ್ನೂ ತಾನಾಗಿ ಪ್ರಕಾಶಪಡಿಸುವನು, ಎಂದು ಹೇಳಿದನು.

ಇದೆಲ್ಲವನ್ನೂ ಕೇಳಿ ದೇವೇಂದ್ರಬಾಬುವಿನ ಮನಸ್ಸಿನಲ್ಲಿ ತುಂಬ ಆನಂದವಾಯಿತು. ಅವನ ಮುಖಭಾವವನ್ನು ನೋಡಿದ ಅರಿಂದಮನಿಗೆ ಇದು ತಿಳಿಯದೇ ಇರಲಿಲ್ಲ. ಹೇಳಿದನು—ನೀನು ನೋಡುತ್ತಿರುವ ಈ ಘಟನೆಯಿಂದ ರೇವತಿಯ ಉದ್ಧಾರ ಕಾರ್ಯವು ಬಹು ಸ್ವಲ್ಪ ಮಾತ್ರ ಉಳಿದಿರುವುದೆಂದೇ ಬೋಧೆಯಾಗುವುದು, ಎಂದು.

ದೇವೇಂದ್ರ—ತಮ್ಮ ಆಲೋಚನೆಗಳ ಮಧ್ಯೆ ಪ್ರವೇಶಿಸುವ ಶಕ್ತಿಯು ಇನ್ನೂ ನನಗೆ ಸಾಲದು. ತಾವು ಹೇಳುತ್ತಿರುವುದೆಲ್ಲ ತಿಳಿಯದಿದ್ದರೂ ತಿಳಿದವನಂತೆ ಒಂದು ಬಗೆಯಾಗಿ ಅಭಿನಯಿಸುತ್ತಿದ್ದೇನೆ. ಫ್ರೂಲಸಾಹೇಬನು ಇಲ್ಲಿಗೇಕೆ ಬರುವನು ?

ಅರಿಂದಮ—ನನ್ನನ್ನು ಕೊಲ್ಲುವುದಕ್ಕೆ.

ದೇವೇಂದ್ರ—ಅವನಿಗೆ ಅಷ್ಟು ಧೈರ್ಯವೆ?

ಅರಿಂದಮ—ಫ್ರೂಲಸಾಹೇಬನ ವಿಚಾರದಲ್ಲಿ ಇದೊಂದು ಧೈರ್ಯದ ಮಾತೇನಲ್ಲ.

ದೇವೇಂದ್ರ—ರಾತ್ರಿ ಎಷ್ಟು ಹೊತ್ತಿಗೆ ?

ಅರಿಂದಮ—ರಾತ್ರಿ ಎರಡು ಗಂಟೆಯ ನಂತರ.

ದೇವೇಂದ್ರ—ಹೇಗೆ ಬರುವನು ?

ಅರಿಂದಮ—ಕಳ್ಳನಂತೆ ಗುಟ್ಟಾಗಿ ಬರುವುದಿಲ್ಲ. ಡಕಾಯಿತರ ದಳಸಮೇತನಾಗಿ, ಡಕಾಯಿತಿ ಮಾಡಲು ಬರುವ ಹಾಗೆಯೇ, ತನ್ನ ಗುಂಪಿನವರೊಡಗೂಡಿ ಬರುತ್ತಾನೆ.

ದೇವೇಂದ್ರ—ಅವನಿಗೆ ಈಗ ಗುಂಪೆಲ್ಲಿ ಜತೆಯಾಯಿತು!

ಅರಿಂದಮ—ಈ ಎರಡು ತಿಂಗಳಿಂದ ಅವನು ಯಾವ ಪ್ರಯತ್ನವನ್ನೂ ಮಾಡದೆ ಕುಳಿತು ಕಾಲಹರಣ ಮಾಡುತ್ತಿದ್ದಾನೇನು? ಒಳಗಿಂದೊಳಗೇ ಎಲ್ಲವನ್ನೂ ಸಿದ್ಧಮಾಡಿಕೊಂಡಿದ್ದಾನೆ.

ದೇವೇಂದ್ರ—ಹಾಗಾದರೆ ಇದು ಬಹು ಭಯಂಕರ ಸಮಾಚಾರವೇ ಸರಿ. ಈ ಸುದ್ದಿಯು ತಮಗೆ ಹೇಗೆ ತಿಳಿಯಿತು?

ಆಗ ಅರಿಂದಮನು ತಾನು ಮೋಹಿನಿಯಿಂದ ಕೇಳಿದುದನ್ನೆಲ್ಲಾ ದೇವೇಂದ್ರನಿಗೆ ಹೇಳಿದನು. 'ಮೋಹಿನಿ' ಎಂಬ ಹೆಸರುಳ್ಳ ಒಬ್ಬ ಹುಚ್ಚಿಯ ಮಾತುಗಳಲ್ಲಿ ಅರಿಂದಮನು ಇಷ್ಟು ವಿಶ್ವಾಸವಿಟ್ಟುದನ್ನು ನೋಡಿ ಅನೇಕರು ಅರಿಂದಮನು ಸರಿಯಾದ ಕೆಲಸಮಾಡಲಿಲ್ಲವೆಂದೆನ್ನಬಹುದು. ಆದರೆ ಬಹು ದಿನಗಳಿಂದಲೂ ಪತ್ತೇದಾರಿಯ ಕೆಲಸದಲ್ಲಿ ಪಳಕಗೊಂಡಿದ್ದ ಅರಿಂದಮನಿಗೆ ಆ ಅಸಾಧಾರಣವಾದ ನೈಪುಣ್ಯವೂ, ಅನನ್ಯ-ಸುಲಭವಾದ ಆಲೋಚನಾಶಕ್ತಿಯೂ ಇದ್ದಿತಾಗಿ ಒಂದು ಮಾತು ಹೊರಬಿತ್ತೆಂದರೆ ಅದು ಕಾಲಕ್ರಮದಲ್ಲಿ ಹೇಗೆ ಹೇಗೆ ಪರಿಣಮಿಸಬಹುದೆಂಬುದನ್ನು ಆತನು ಸುಲಭವಾಗಿ ನಿರ್ಧರಿಸುತ್ತಿದ್ದನು. ಮೋಹಿನಿಯು ಸ್ವಂತ ವಿಚಾರವಾಗಿ ಯಾವುದೊಂದು ಮಾತನ್ನೂ ಹೊರಪಡಿಸದೆ ಇದ್ದಳಾದರೂ ಅವಳ ಮಾತಿನ ಭಾವದಿಂದ ಮೋಹಿನಿಯು ಯಾವುದೋ ವಿಚಾರದಲ್ಲಿ ಪೋಲಿಸಾಹೇಬನಿಂದ ಭಯಗೊಳಿಸಲ್ಪಟ್ಟವಳಾಗಿರಬೇಕೆಂದೂ ಇಂತಹ ಸಂದರ್ಭಗಳಲ್ಲಿ ಆ ವಿಚಾರವು ಅದರಸಾತ್ಮಕವೂ, ಸ್ವಲ್ಪ ಮಟ್ಟಿಗೆ ಮರ್ಮಭೇದಕವೂ ಆಗಿರಬೇಕೆಂದೂ ಅರಿಂದಮನು ತಿಳಿದುಕೊಳ್ಳದಿರಲಿಲ್ಲ.

---

## ಆರನೆಯ ಪರಿಚ್ಛೇದ

### ಗುಪ್ತದ್ವಾರ

ರಾತ್ರಿ ಹನ್ನೊಂದು ಗಂಟೆಗೆ ಮೊದಲೇ ಅರಿಂದಮನು ಮತ್ತೂ ದೇವೇಂದ್ರ ವಿಜಯರು ಆಹಾರಾದಿಗಳನ್ನು ಮುಗಿಯಿಸಿಕೊಂಡು ಬೀದಿಯ ಬಾಗಿಲನ್ನು ಮುಚ್ಚಿ ಅಗಳಿಹಾಕಿ ಭದ್ರಪಡಿಸಿ ಮಹಡಿಯಮೇಲಿನ ಒಂದು ಕೊಠಡಿಯಲ್ಲಿ ಕುಳಿತು ಪಗಡೆಯಾಡತೊಡಗಿದರು.

ದೇವೇಂದ್ರವಿಜಯನು ಆಟವಾಡುವಾಗ ಒಮ್ಮೊಂದೊಮ್ಮೆ ಅನ್ಯಮನಸ್ಕನಾಗುತ್ತಲಿದ್ದನು. ಒಂದೊಂದು ಸಲ ಆಟಕ್ಕೆ ಮನಗೊಡದೆಯೇ ಫೂಲಸಾಹೇಬನ ಪದಧ್ವನಿಯನ್ನು ಆಲಿಸಲು ವ್ಯಾಕುಲಿತನಾಗುತ್ತಿದ್ದನು; ಫೂಲಸಾಹೇಬನ ಪರಿವಾರದವರ ಭಯಂಕರ ಮೂರ್ತಿಗಳನ್ನು ಮನಸ್ಸಿನಲ್ಲಿಯೇ ಕಲ್ಪಿಸಿಕೊಳ್ಳಲು ಉದ್ಯೋಗಿಯಾಗುತ್ತಲೂ ಇದ್ದನು. ಅರಿಂದಮನು ಆಟದಲ್ಲಿಯೇ ಮನಸ್ಸಿಟ್ಟಿದ್ದ ಕಾರಣ ಬಾರಿಬಾರಿಗೂ ಗೆಲ್ಲುತ್ತಲೇ ಇದ್ದನು. ಇಷ್ಟರಲ್ಲಿಯೇ ಜೀವಕ್ಕೂ ಮೃತ್ಯುವಿಗೂ, ಹಾಗೆಯೇ ಚೂರಿಗೂ ರಕ್ತಕ್ಕೂ, ಸಂಗ್ರಾಮವು ಸನ್ನಿಹಿತವಾಗುವುದೆಂದೇ ಹೇಳಬಹುದಾದಂತಹ ಮಹಾವಿಪತ್ತಿನ ಭಾರವನ್ನು ಅರಿಂದಮನು ತಾಳಿದ್ದನಾದರೂ ಅದಕ್ಕಾಗಿ ಆತನ ಮುಖದಲ್ಲಿ ಉದ್ವೇಗದ, ಆತಂಕೆಯ ಅಥವಾ ಚಿಂತೆಯ ಚಿಹ್ನೆಗಳೊಂದೂ ಕಾಣಿಸುತ್ತಿರಲಿಲ್ಲ.

ರಾತ್ರಿ ಹನ್ನೆರಡು ಗಂಟೆಯ ವೇಳೆಗೆ ಆಟವು ಮುಗಿಯಿತು. "ಇನ್ನು ಅವರು ಬರುವ ವೇಳೆಯಾಯಿತು; ಇನ್ನೊಂದು ಗಂಟೆಯೊಳಗಾಗಿ ಅವರ ಶುಭಾಗಮನವಾಗುವುದು. ನಾವಿಬ್ಬರೂ ಇಲ್ಲಿಯೇ ಇದ್ದುಕೊಂಡು ಅವರನ್ನು ಸತ್ಕರಿಸುವುದಕ್ಕೆ ಬೇಕಾದ ಸಲಕರಣಗಳನ್ನು ಸಿದ್ಧಪಡಿಸಿಕೊಳ್ಳೋಣ ಬಾ" ಎಂದು ಅರಿಂದಮನು ಹೇಳಿದನು.

ದೇವೇಂದ್ರ—ನಾನು ಎಲ್ಲಿ ನಿಲ್ಲಬೇಕೋ ಹೇಳಿರಿ.

ಅರಿಂದಮ—ಕೆಳಗೆ ಮೆಟ್ಟಿಲಿನ ಪಾರ್ಶ್ವದಲ್ಲಿರುವ ಕೊಠಡಿಯಲ್ಲಿ ನೀನು ಇರಬೇಕು. ನೀನು ಹೊರಡುವಾಗ್ಗೆ ರಬ್ಬರಿನ ಪಾದರಕ್ಷೆ

ಗಳನ್ನು ಹಾಕಿಕೊಂಡೇ ಹೋಗು. ಅವನ್ನು ದಪ್ಪ ರಬ್ಬರಿನಿಂದ ತಯಾರಿಸಿರುವುದರಿಂದ ಮೆಟ್ಟಿಲಲ್ಲಿ ಪ್ರವಹಿಸುವ ವಿದ್ಯುತ್ಪ್ರವಾಹದಿಂದ ನಿನಗೆ ಬಾಧೆಯಾಗುವುದಿಲ್ಲ.

ಹೀಗೆ ಹೇಳಿ ಅರಿಂದಮನು ಎರಡು ಜತೆ ರಬ್ಬರಿನ ಪಾದರಕ್ಷೆಗಳನ್ನೂ ಕೈಚೀಲಗಳನ್ನೂ ತಂದನು. ಅವುಗಳನ್ನು ಅವರಿಬ್ಬರೂ ಅಲಂಕರಿಸಿಕೊಂಡರು.

ದೇವೇಂದ್ರ—ಕೊಠಡಿಯಲ್ಲಿ ನಾನೇನು ಮಾಡಬೇಕಾದುದೇನು ?

ಅರಿಂದಮ—ಆ ಕೊಠಡಿಯ ತೆಂಕಲು ಮೂಲೆಯಲ್ಲಿ ಒಂದು ಹಗ್ಗವು ನೇತಾಡುತ್ತಿದೆ. ಹದಿಮೂರು ಮಂದಿ ಮೆಟ್ಟಿಲುಮೇಲೆ ಹತ್ತಿದರೆಂದು ನಿನಗೆ ತೋರಿದ ಕೂಡಲೇ ಆ ಹಗ್ಗವನ್ನು ಎಳೆದು ಹಿಡಿದುಕೋ. ಅನಂತರ ಆವಶ್ಯಕವಾದುದನ್ನು ನಾನು ಮಾಡುತ್ತೇನೆ.

ದೇವೇಂದ್ರ—ಒಂದು ವೇಳೆ ಹದಿಮೂರು ಮಂದಿಯಲ್ಲಿ ಒಬ್ಬನು ಹೊರಗಡೆ ಕಾವಲಿಗಾಗಿ ನಿಲ್ಲಬಹುದು.

ಅರಿಂದಮ—ಅವರಿಗೆ ಕಾವಲಿರುವುದಕ್ಕೆ ಬೇರೆ ಜನವುಂಟು. ಆ ಕೆಲಸವನ್ನು ಜುಮಾಲಿಯು ಚೆನ್ನಾಗಿ ನಿರ್ವಹಿಸಬಲ್ಲಳು. ಜುಮಾಲಿಯಲ್ಲಿ ಫೂಲಸಾಹೇಬನಿಗೆ ಸಂಪೂರ್ಣ ಭರವಸೆ.

ದೇವೇಂದ್ರ—ಹೇಗೇ ಆಗಲಿ, ಹದಿಮೂರು ಮಂದಿಯೂ ಒಟ್ಟಿಗೆ ಸೋಪಾನದ ಮೇಲೆ ಹತ್ತುವರೇನು ?

ಅರಿಂದಮ—ಹೌದು, ಹದಿಮೂರು ಮಂದಿಯೂ ಒಟ್ಟಾಗಿಯೇ ಹತ್ತುವರು. ಫೂಲಸಾಹೇಬನ ಸ್ವಭಾವವನ್ನು ನೋಡಿದರೆ, ಅವನು ಕಳ್ಳರ ಹಾಗೆ ಮೆಲ್ಲಮೆಲ್ಲಗೆ ಮರೆಯಾಗಿದ್ದುಕೊಂಡು, ಭಯದಿಂದ ಕೆಲಸಮಾಡತಕ್ಕವನೆಂದು ತೋರುವುದಿಲ್ಲ. ತನ್ನ ವೀರತ್ವದ ಅಭಿನಯವನ್ನೆಂದಿಗೂ ಅವನು ಮುಚ್ಚಿಡಲಾರನು. ಎಲ್ಲರನ್ನೂ ಸಂಗಡ ಕರೆದುಕೊಂಡು ನನ್ನ ಮಲಗುವ ಮನೆಯೊಳಕ್ಕೆ ಬಂದು, ನನ್ನ ಹಾಸುಗೆಯ ಸುತ್ತಲೂ ನಿಂತು, ಅವರ ಹದಿಮೂರು

ಚೂರಿಗಳೂ ಒಂದೇ ಮುಹೂರ್ತದಲ್ಲಿ ನನ್ನ ಹೃದಯದೊಳಗೆ ಪ್ರವೇಶಿಸುವಂತೆ ಮಾಡುವುದರಿಂದ ತನ್ನ ಶೌರ್ಯವು ಸರ್ವಾಂಗಸುಂದರವಾಗುವ ಹಾಗೆ ಪ್ರಯತ್ನಮಾಡುವನೆಂದೇ ನನ್ನ ನಂಬುಗೆ. ಇಷ್ಟರಮೇಲೆ ಅವನ ಮನಸ್ಸಿನಲ್ಲಿ ಏನಿರುವುದೆಂಬುದು ಅವನಿಗೇ ಗೊತ್ತು. ಅವನು ಹೇಗೆ ಬೇಕಾದರೂ ಭಾವಿಸಿಕೊಂಡು ಬರಲಿ; ಒಂದು ಬಾರಿ ಅವನು ಬಂದದ್ದೇ ಆದರೆ ಪುನಃ ಹಿಂದಿರುಗಿ ಹೋಗಲಾರನು. ದೇವೇಂದ್ರಬಾಬು, ಈ ಪತ್ತೇದಾರಿ ಕೆಲಸವು ಮಹಾಕಷ್ಟಕರವಾದದ್ದು. ಎಲ್ಲಿಯೇ ಆಗಲಿ, ಸ್ವಲ್ಪ ಸಂದೇಹವುಂಟಾದರೂ ಆ ಸಂದೇಹವನ್ನೇ ನಿಜವೆಂಬುದರ ಸ್ಥಳದಲ್ಲಿ ನಿಲ್ಲಿಸಿಕೊಂಡು, ಅದರ ಮೂಲವಾಗಿ ತನ್ನ ಅಪಾರವಾದ ಸನ್ನಾಹವನ್ನೆಲ್ಲ ಸಿದ್ಧಮಾಡಿಕೊಳ್ಳಬೇಕಾಗುವುದು. ಈಗ ನಿನಗಿರುವ ಈ ಉತ್ಸಾಹದಲ್ಲಿ, ನೀನು ಕೆಲವು ದಿನಗಳವರೆಗೆ ನನ್ನೊಡನೆ ಇರುವುದಾದರೆ ನೀನೂ ಬಹು ಪ್ರಸಿದ್ಧ ಪತ್ತೇದಾರನಾಗಬಹುದು. ನಿನಗೆ ಕೊಂಚ ವೈದ್ಯವಿಚಾರವೂ ತಿಳಿದಿದೆ; ಈ ಪತ್ತೇದಾರಿಯ ಕೆಲಸ ಮಾಡುವವನಿಗೆ ಒಂದೊಂದು ಸಮಯದಲ್ಲಿ ವೈದ್ಯವಿದ್ಯೆಯೂ ಸಹಕರಿಸುವುದು.

ದೇವೇಂದ್ರ—ಆದರೆ, 'ಡಾಕ್ಟರ' ಕೆಲಸದಲ್ಲಿರುವ ಮರ್ಯಾದೆಯು ಈ ಕೆಲಸದಲ್ಲಿಲ್ಲವಲ್ಲ? ಮುಖ್ಯವಾಗಿ ಡಾಕ್ಟರನಾದರೆ, ಅನೇಕ ಜನರಿಗೆ ಅನೇಕ ವಿಧವಾಗಿ ಉಪಕಾರ ಮಾಡಬಹುದು; ಬಹಳ ಮಾತಿನಿಂದೇನು ಮೃತ್ಯುಮುಖದಲ್ಲಿರುವ ಎಷ್ಟೋ ಮಂದಿಯನ್ನು ಬದುಕಿಸಬಹುದು.

ಅರಿಂದಮ—ನಿನ್ನ ಈ ಮಾತಿಗೆ ಉತ್ತರವಾಗಿ ನಾನು ಬಹಳ ಮಾತುಗಳನ್ನೇ ಆಡಬೇಕಾಗುವುದು. ಡಾಕ್ಟರನ ಕೆಲಸಕ್ಕಿಂತಲೂ ಪತ್ತೇದಾರಿ ಕೆಲಸದಿಂದ ಸಹಸ್ರ ಗುಣಾಧಿಕವಾಗಿ ಪ್ರಜೆಗಳಿಗೆ ಉಪಕಾರವಾಗುವುದು. ಮಾನ ಧನಗಳ ದೆಸೆಯಿಂದ ಮೃತ್ಯುಮುಖದಲ್ಲಿ ಸಿಲುಕಿದ ಎಷ್ಟೋ ಜನರ ಮಾನ ಧನಗಳನ್ನು ಪತ್ತೇದಾರನು ರಕ್ಷಿಸುವುದರಿಂದ ಆ ಜನರ ಶಾಂತ ಶರೀರದಲ್ಲಿ ನೂತನ ಜೀವನ ಸಂಚಾರವಾಗುವುದಿಲ್ಲವೆ? ಪ್ರೀತಿಪಾತ್ರರಾದ ಮಕ್ಕಳನ್ನು ಕಳೆದುಕೊಂಡು ಶೋಕಾತುರ

ರಾದ ತಂದೆ ತಾಯಿಯರ ಬರಿಗೈಗಳನ್ನು ಈ ಪತ್ತೇದಾರಿಯು ಎಂದಿನಂತೆ ಪೂರ್ಣ ಮಾಡುವುದು. ದಸ್ಯುಗಳ ಕೈಯಿಂದಲೂ ಕೊಲೆಗಾರರ ಸೆರೆಯಿಂದಲೂ ಅವಲಂಬನರಹಿತರಾದ ಎಷ್ಟೋ ಮಂದಿ ಮಕ್ಕಳ ತಾಯಿತಂದೆಗಳನ್ನೂ, ಅಭಾಗಿನಿಯರಾದ ಎಷ್ಟೋ ಜನ ಹೆಂಗಸರ ಪತಿಗಳನ್ನೂ ಉದ್ಧಾರ ಮಾಡುವುದಕ್ಕೆ ಈ ಪತ್ತೇದಾರಿಯಿಂದ ಸಾಧ್ಯವಾಗುವುದಿಲ್ಲವೆ? ಅಥವಾ ಈ ಕಾರ್ಯಗಳೆಲ್ಲವೂ ಪರೋಪಕಾರವೆನಿಸಿಕೊಳ್ಳುವುದಿಲ್ಲವೋ? ಇವುಗಳಿಗಾಗಿ ಪಡುವ ಶ್ರಮವು ನಿರರ್ಥಕವಾಗುವುದೋ ಏನು? ಎಂತಹ ಡಾಕ್ಟರನಾದರೂ ಸರಿ, ಪರೋಪಕಾರದ ಸಲುವಾಗಿ ಪತ್ತೇದಾರಿಯಂತಹ ಶ್ರಮಸ್ವೀಕಾರ ಮಾಡುವುದಾದರೆ, ಡಾಕ್ಟರೀ ವಿದ್ಯೆಯು ಅವನ ಮೆದುಳಿನಿಂದ ಬೇಗನೆ ಬಯಲಾಗಿ ಹೋಗುವಂತೆ ಮಾಡುವುದಕ್ಕೋಸ್ಕರ ತೀಕ್ಷ್ಣ ಫಲಕಾರಿಯಾದ ಯಾವುದಾದರೊಂದು ಸ್ಮೃತಿನಾಶಕ ಚಿಕಿತ್ಸೆಯನ್ನು ಕಂಡುಹಿಡಿವುದಕ್ಕೆ ಪ್ರಯತ್ನ ಮಾಡಿಯೇ ಮಾಡುವನು. ಪತ್ತೇದಾರನಾದವನು ಕುತೂಹಲದಿಂದಲಾಗಲೀ, ದಯಾಪರನಾಗಿ ಆಗಲೀ, ಉತ್ಸಾಹಪರವಶನಾಗಿಯಾಗಲೀ ತನ್ನ ಶರಣಾಗತರ ಸಕಲ ಭಯಂಕರ ವಿಪತ್ತುಗಳಿಗೂ ತಾನು ತಲೆಗೊಟ್ಟು, ಸಹಾಯ ಹೀನವಾದ ತನ್ನ ಪ್ರಾಣವನ್ನು ಕೊಲೆಗಾರರ ಚೂರಿಯ ಅಡಿಯಲ್ಲಿ ಅಲೆದಾಡುವುದಕ್ಕೆ ಸ್ವೇಚ್ಛೆಯಾಗಿ ಬಿಡುವಹಾಗೆ ಮತ್ತೆ ಯಾರಾದರೂ ಮಾಡುವರೇನೋ ಆಲೋಚಿಸು. ಇಷ್ಟಾದರೂ ನಮ್ಮ ದೇಶದವರು ಪತ್ತೇದಾರರನ್ನು ಗೌರವಿಸುವುದಿಲ್ಲವೆಂಬುದು ನಿಜ. ಅದು ಅವರ ದೋಷವಲ್ಲ; ಅದು ನಮ್ಮ ಅದೃಷ್ಟ ದೋಷ. ಇಂಗ್ಲೆಂಡ್, ಫ್ರಾನ್ಸ್, ಅಮೆರಿಕಾ ಮೊದಲಾದ ದೇಶಗಳಲ್ಲಿ ಪತ್ತೇದಾರರು ಸನ್ಮಾನಿತರಾಗಿರುವುದನ್ನೂ ಅಲ್ಲಿಯ ಬಾಲ ವೃದ್ಧರಾದಿಯಾದ ಎಲ್ಲ ಸ್ತ್ರೀಪುರುಷರೂ ಪತ್ತೇದಾರರ ವಿಚಾರದಲ್ಲಿ ತೋರ್ಪಡಿಸುವ ಪ್ರೀತಿ ವಿಶ್ವಾಸಗಳನ್ನೂ ನೋಡುವುದಾದರೆ, ಆಯಾ ಸ್ಥಳದ ನ್ಯಾಯಾಧೀಶನ ಅದೃಷ್ಟದಲ್ಲಿಯೂ ಅಂತಹ ಗೌರವಲಾಭವಿಲ್ಲವೆಂದು ತೋರುವುದು. ಈ ವಿಚಾರವೆಲ್ಲವನ್ನೂ ನನ್ನಿಂದಲೇ ಕೇಳುವುದರಿಂದ ಇದು ಆತ್ಮಶ್ಲಾಘನೆಯೆಂದೇ ತೋರಬಹುದು; ಅಲ್ಲದೆ ನಾನೇ ಹೇಳುವುದು ಚೆನ್ನಾಗಿ

ಕುದುರೆಗಳಿರುವ ಒಂದು ಅಶ್ವಶಾಲೆಗೆ ಬೆಂಕಿಹೊತ್ತಿದರೆ ಹೇಗಿರುವು ದೆಂಬುದನ್ನು ನೀವು ಊಹಿಸಬಲ್ಲಿರಾ? ಊಹಿಸಬಲ್ಲಿರಾದರೆ, ಇದೂ ಬಹಳ ಮಾಡಿ ಅದೇ ಮಾದರಿ, ಎಂದು ಹೇಳಬಹುದು.

ಈ ವೇಳೆಗೆ ಸರಿಯಾಗಿ ಅರಿಂದಮನು ಕೈಯಲ್ಲಿ ಲಾಂದರವನ್ನು ಹಿಡಿದುಕೊಂಡು ಶಯನಮಂದಿರದಿಂದ ಬಂದನು. ಬಂದವನೇ ಸೋಪಾನದ ಮೇಲ್ಭಾಗದಲ್ಲಿ ನಿಂತುಕೊಂಡು, ನಗುಮೊಗದಿಂದ, ಆ ಅಪೂರ್ವ ದೃಶ್ಯವನ್ನು ನೋಡುತ್ತಿದ್ದನು. ಇದೇ ಸಮಯದಲ್ಲಿ ಕೆಳಗಡೆ ಸೋಪಾನದ ಹತ್ತಿರ ಗೋಡೆಗೆ ಒರಗಿ ನಿಂತುಕೊಂಡು ದೇವೇಂದ್ರ ವಿಜಯನೂ ನಗುತ್ತ ಮುಗ್ಧನಾಗಿ ಬಿಟ್ಟಿದ್ದನು.

ಎಂತಹ ಸುಂದರ ದೃಶ್ಯ! ಸೋಪಾನದ ಮೇಲಿಂದ ತಳದ ವರೆಗೂ ಹದಿಮೂರು ಮಂದಿ ಸಾಲಾಗಿ ನಿಂತಿದ್ದಾರೆ! ಅವರ ಬಾಯಲ್ಲಿ ತರ್ಜನ–ಗರ್ಜನಗಳ ವಿನಾ ಬೇರೇ ಮಾತು ಹೊರಡದು. ಇದರ ಮೇಲೆ ಅವರದು ಅದೆಂತಹ ವಿಚಿತ್ರ ಮುಖಭಂಗಿ! ಬಾಧೆಯ ದೆಸೆಯಿಂದ ಕೆಲವರು ನರ್ತನಮಾಡುವರು, ಕೆಲವರು ಆ ಕೈಪಿಡಿಯಿಂದ ಕೈಬಿಡಿಸಿ ಕೊಳ್ಳುವ ಪ್ರಯತ್ನದಲ್ಲಿ ಮುಖ ವಿಕಾರಮಾಡಿಕೊಂಡು ಕುಣಿದಾಡು ವರು; ಆದರೆ ವಿತರಿಂದಲೂ ಕೃತಕಾರ್ಯರಾಗುವ ಹಾಗಿಲ್ಲ. ಯಾರಿಗೆ ಯಾವ ಸ್ಥಳಕ್ಕೆ ಆ 'ಇಲೆಕ್ಟ್ರಿಕ್ ಬ್ಯಾಟರಿ'ಯು ಸಂಸ್ಪರ್ಶವಾಗು ವುದೋ ಅವರಿಗೆ ಅವರ ದೇಹದಿಂದ ಆ ಭಾಗವನ್ನು ತೆಗೆದಂತೆಯೋ ತೋರುವುದು.

ಡಾಕ್ಟರ್ ಫೂಲಸಾಹೇಬನು ಮೆಟ್ಟಿಲಿನ ಮೇಲ್ಭಾಗದಲ್ಲಿ, ಅರಿಂದಮನಿಗೆ ಇದಿರಾಗಿ ನಿಂತಿರುವನು; ಅವನ ಮುಖದಲ್ಲಿ ಯಾತನೆ, ಚೀತ್ಕಾರ ಮೊದಲಾದ ಸಂಕಟ ಸೂಚಕವಾದ ಧ್ವನಿ ಹೊರಡದಿದ್ದರೂ ಅವನ ಮುಖಭಾವವನ್ನೂ, ಪುಷ್ಟವಾದ ಅವನ ದೇಹವು ಮತ್ತಷ್ಟು ಉಬ್ಬಿದಂತಿರುವುದನ್ನೂ ನೋಡಿದರೆ ಅವನಿಗೆ ಸಹಿಸಲಾರದ ಯಾತ ನಾನುಭವವಾಗುತ್ತಿರುವುದೆಂದೇ ತೋರುವುದು.

ಅರಿಂದಮನು—ಡಾಕ್ಟರ್ ಬಾಬು, ಸೌಖ್ಯವೇ? ಬಹು ದಿನಗಳ ಮೇಲೆ ಇಷ್ಟ ಮಿತ್ರರೊಡನೆ ದಯಮಾಡಿಸಿದಿರಿ; ಇದು ನನ್ನ ಸೌಭಾಗ್ಯವೇ ಸರಿ; ತಮ್ಮ ಸತ್ಕಾರವು ಉಚಿತ ರೀತಿಯಲ್ಲಿ ನೆರವೇರುತ್ತಿರುವುದೆಂದೂ ತೋರುತ್ತದೆ. ಯಾವ ಕೊರತೆಯೂ ಕಾಣುವುದಿಲ್ಲವಲ್ಲ? ಎಂದು ಕಿರುನಗೆಯೊಡನೆ ಹೇಳಿದನು.

ಫೂಲಸಾಹೇಬನು ಯಾವ ಉತ್ತರವನ್ನೂ ಹೇಳಲಿಲ್ಲ; ತನ್ನ ಮುಖವನ್ನು ಮತ್ತೊಂದು ಕಡೆಗೆ ತಿರುಗಿಸಿಕೊಂಡನು. ಅರಿಂದಮನು ಮೊದಲು ನಿಮ್ಮ ಸ್ನೇಹಿತರನ್ನು ಬಿಡಿಸಿದ ನಂತರ ತಮಗೆ ಮುಕ್ತಿಲಾಭವಾಗುವುದು, ಎಂದು ಹೇಳಿ ಒಟ್ಟಾಗಿಟ್ಟಿದ್ದ ಕೈಕೋಳಗಳನ್ನು ಎತ್ತಿಕೊಂಡು ಕೆಳಗಿಳಿದು ಬಂದನು. ಅವನು ಕೈಗಳಿಗೆ ರಬ್ಬರಿನ ಚೀಲಗಳನ್ನೂ ಕಾಲುಗಳಿಗೆ ರಬ್ಬರಿನ ಪಾದರಕ್ಷೆಗಳನ್ನೂ ಹಾಕಿಕೊಂಡಿದ್ದುದರಿಂದ 'ಬ್ಯಾಟರಿ'ಯಿಂದ ಅವನಿಗೆ ತೊಂದರೆಯಾಗಲಿಲ್ಲ.

ಅರಿಂದಮನು ದೇವೇಂದ್ರವಿಜಯನ ಕೈಗೆ ಕೆಲವು ಕೈಕೋಳಗಳನ್ನು ಕೊಟ್ಟನು; ಇಬ್ಬರೂ ಜತೆಯಾಗಿ ದಸ್ಯುಗಳ ಕೈಗಳಿಗೆ ಕೋಳಗಳನ್ನು ತೊಡಿಸಲು ಆರಂಭಿಸಿದರು. ಕ್ರಮವಾಗಿ ಹನ್ನೆರಡು ಜನರು ಬಂದಿಗಳಾದರು. ಉಳಿದವನೆಂದರೆ ಫೂಲಸಾಹೇಬನು ಮಾತ್ರ.

---

## ಎಂಟನೆಯ ಪರಿಚ್ಛೇದ

### ಕೊಲೆಗಾರನ ಹೇಳಿಕೆ

ಇಷ್ಟೆಲ್ಲಾ ಆಗುವ ಹೊತ್ತಿಗೆ ಫೂಲಸಾಹೇಬನ ಯಾತನೆಯು ಸಹಿಸಲಾರದಷ್ಟಾಯಿತು. ಆದರೂ ಅವನು ನೀರವ; ಅವನ ಕಣ್ಣುಗಳೂ ಮುಖವೂ ಕೆಂಪೇರಿಬಿಟ್ಟಿವೆ.

ಅರಿಂದಮ—ಡಾಕ್ಟರ್ ಸಾಹೇಬ, ನಿನಗೆ ಮುಕ್ತಿಲಾಭವಾಗುವುದಕ್ಕೆ ಇನ್ನೂ ಸಾವಕಾಶವುಂಟು. ನಾನು ಕೇಳುವ ಪ್ರಶ್ನೆಗಳಿಗೆಲ್ಲಾ ಸರಿಯಾದ ಉತ್ತರ ಕೊಡದಿರುವೆಯಾದರೆ ಈ ರಾತ್ರಿಯೆಲ್ಲಾ ಇದೇ

ಅವಸ್ಥೆಯಲ್ಲಿರಬೇಕಾಗುವುದು. ನೀನು ಪೆಟ್ಟಿಗೆಯೊಳಗೆ ಒಬ್ಬ ಹುಡುಗಿಯ ಮೃತದೇಹವನ್ನು ಕಳುಹಿಸಿದೆಯಷ್ಟೆ? ಆ ಹುಡುಗಿ ಯಾರು?

ಇದನ್ನು ಕೇಳಿ ಫೂಲಸಾಹೇಬನು ನಗಲು ಯತ್ನಿಸಿದನು; ಆದರೆ ಅವನ ಯಾತನೆಯಿಂದ ಆ ನಗೆಯು ಕ್ಷಣಸ್ಥಾಯಿಯಾದ ವಿಕೃತ ಮುಖಭಂಗಿಯಾಗಿಹೋಯಿತು.

ಫೂಲಸಾಹೇಬ—ಅಂದು ನನ್ನಿಂದ ತಪ್ಪಿಸಿಕೊಳ್ಳುವೆನೆಂದು ಅಪರಿಚಿತರೊಡನೆ ಓಡಿಹೋದ ರೇವತಿಗೆ ಅವಳು ತಂಗಿ—ರೋಹಿಣೀ!

ಅವಳನ್ನು ಕೊಂದವರು ಯಾರು?

ನಾನು. ಸ್ವಹಸ್ತದಿಂದ.

ಏತಕ್ಕಾಗಿ ಕೊಂದದ್ದು?

ನನಗೆ ಕೊಲೆಮಾಡುವುದೆಂಬುದು ಒಂದು ಬಗೆಯ 'ನಿಷಾ.'

ಆ 'ನಿಷಾ' ಈಗ ಬಿಟ್ಟುಹೋಯಿತೆ?

ನಾನು ಗಲ್ಲಿನ ಹಗ್ಗದಲ್ಲಿ ತೂಗಾಡುವವರೆಗೂ ಅದು ನನ್ನನ್ನು ಬಿಟ್ಟುಹೋಗುವುದಿಲ್ಲ.

ರೇವತಿಯ ಚಿಕ್ಕಪ್ಪನೆಂಥವನು?

ನನಗಿಂತಲೂ ಭಯಂಕರ.

ಏಕೆ ಹಾಗೆ ಹೇಳುವೆ?

ಹಣದಾಸೆಯಿಂದ ಅಣ್ಣನ ಮಕ್ಕಳನ್ನು ಕೊಲ್ಲಬೇಕೆಂದು ಅಪೇಕ್ಷಿಸುವವನು ನನಗಿಂತಲೂ ಭಯಂಕರನಲ್ಲವೆ? ಯಾವ ಸಂಬಂಧವೂ ಅಲ್ಲದ ನಾನು ಆ ಹುಡುಗಿಯನ್ನು ಕೊಲ್ಲುವುದೇನು ಹೆಚ್ಚು?

ಈ ಕೆಲಸಮಾಡುವುದಕ್ಕಾಗಿ, ರೇವತಿಯ ಚಿಕ್ಕಪ್ಪನು ನಿನ್ನ ಪರಿಶ್ರಮಕ್ಕೋಸ್ಕರ ಎಷ್ಟು ಹಣ ಕೊಡುವಂತೆ ನಿಶ್ಚಯವಾಗಿದೆ?

ಐವತ್ತುಸಾವಿರ ರೂಪಾಯಿ.

ಇದರಲ್ಲಿ ಎಷ್ಟು ಬಂದಿದೆ.

ಒಂದು ಕಾಸೂ ಇಲ್ಲ.

ಏಕೆ ?

ರೇವತಿಯು ಕೊಲೆಯಾಗದ ಕಾರಣ.

ಏತಕ್ಕಾಗಲಿಲ್ಲ ?

ನನ್ನ ಕೈಗೆ ಬಂದಿದ್ದ ತುತ್ತನ್ನು ನೀನು ಕಸುಗೊಂಡಿರುವೆ.

ಅವರಿಗೆ ಸಾವಕಾಶ ಮಾಡಿದುದೇಕೆ ?

ರೇವತಿಯ ರೂಪವನ್ನು ಕಂಡು ಭ್ರಾಂತನಾಗಿ ; ಮತ್ತೂ ಒಂದು ಉದ್ದೇಶವಿದ್ದಿತು ; ರೇವತಿಯನ್ನು ನನ್ನವಳನ್ನಾಗಿ ಮಾಡಿಕೊಳ್ಳ ಬೇಕೆಂದೂ, ಅವಳು ನನ್ನ ಇಷ್ಟಾನುಸಾರ ನಡೆಯುವ ಪಕ್ಷದಲ್ಲಿ ರೇವತಿಯ ಚಿಕ್ಕಪ್ಪನು ತಪ್ಪಿತಸ್ಥನಾಗಿ, ಸಮಸ್ತ ಸಂಪತ್ತಿಯೂ ನನಗೇ ದೊರೆಯುವುದೆಂದೂ ಭಾವಿಸಿದ್ದೆನು.

ರೇವತೀ ಮತ್ತೂ ಅವರ ಚಿಕ್ಕಪ್ಪ ಇವರಲ್ಲಿ ನೀನು ಕೇಶವ ಬಾಬು ಎಂದು ಹೇಳಿಕೊಂಡಿರುವೆಯೋ ?

ಹೌದು, ನಾನೊಬ್ಬನೇ ; ಕಾರ್ಯ ಸಾಧನೆಗಾಗಿ ನನಗೆ ಅನೇಕ ಹೆಸರುಗಳುಂಟು.

ಮೋಹಿನಿಯು ನಿನಗೆ ಏನಾಗಬೇಕು ?

ಈ ವರ್ತಮಾನಗಳೆಲ್ಲ ನಿನಗೆ ತಿಳಿದ ಬಗೆ ಹೇಗೆ ?

ಮೋಹಿನಿಯು ನಿನ್ನ ಹೆಂಡತಿಯೆ ?

ಮೋಹಿನಿಯು ನನ್ನ ಮೃತ್ಯು !

ಹೀಗೆ ಏತಕ್ಕೆ ಹೇಳುವೆ ?

ಹಾಗಿಲ್ಲವಾಗಿದ್ದರೆ, ನನಗೆ ಈ ದುರ್ದಸೆಯುಂಟಾಗುತಿದ್ದಿತೇನು ?

ಮೋಹಿನಿಯು ಹೇಗೆ ನಿನ್ನ ದುರ್ದಸೆಗೆ ಕಾರಣಳು ?

ಫೂಲನಾಕೇಬನು ಉತ್ತೇಜಿತನಾಗಿ–ಅರಿಂದಮ, ನನ್ನಲ್ಲಿ ಯಾವು ದನ್ನೂ ಮರೆಮಾಚಲು ಪ್ರಯತ್ನಪಡಬೇಡ. ನಿನ್ನ ಬಾಯಲ್ಲಿ ಮೋಹಿನಿಯ ಹೆಸರನ್ನು ಕೇಳಿದುದರಿಂದ ನಾನು ಎಲ್ಲವನ್ನೂ ಊಹಿಸಬಲ್ಲೆನು.

ಆ ರಾಕ್ಷಸಿಯು ತಾನಾಗಿ ನನ್ನನ್ನು ಈ ವಿಪತ್ತಿಗೆ ಗುರಿಮಾಡಿದಳು; ಇಲ್ಲವಾಗಿದ್ದಿದ್ದರೆ ಇಷ್ಟು ಹೊತ್ತಿಗೆ, ನಿಜವಾಗಿಯೂ ಈಗಿನ ಸ್ಥಿತಿಗೆ ವಿಪರೀತವೇ ಆಗಿರುತ್ತಿದ್ದಿತು. ನೀನು ನನ್ನನ್ನು ಈ ದುರವಸ್ಥೆಯಲ್ಲಿ ನಿಲ್ಲಿಸಿ, ಸಂತೋಷದಿಂದ ಮೇಲೆ ನಿಂತುಕೊಂಡು ಅಪ್ಪಣೆಮಾಡುತ್ತಿರುವ ಹಾಗೆಯೇ ನಾನೂ ನಿನ್ನನ್ನು ಭಯಂಕರ ಮೃತ್ಯುಮುಖದಲ್ಲಿರಿಸಿ ನನ್ನಧಿಕಾರವನ್ನು ತೋರಿಸುತಲಿದ್ದೆನು. ಆ ಮನೆಹಾಳಿಯಾದ ಮೋಹಿನಿಯು ನನ್ನ ಕೋರಿಕೆಗೆ ಭಂಗತಂದಳು. ನಿಜವಾಗಿಯೂ ಅವಳು ಇಲ್ಲಿಗೆ ಬಂದು ನಮ್ಮ ರಹಸ್ಯ ಸಮಾಚಾರಗಳನ್ನೆಲ್ಲಾ ನಿನಗೆ ಹೇಳಿದ್ದಾಳೆ. ಅರಿಂದಮ, ಇನ್ನು ಸಾಧ್ಯವಿಲ್ಲ. ನೀನು ನನ್ನನ್ನು ಅಸಹ್ಯವಾದ ಈ ಯಾತನೆಯಿಂದ ಪಾರುಮಾಡು; ಪ್ರಾಣಹೋಗುತ್ತಿದೆ. ಬಹಳ ಸಂಕಟ, ಎಂದು ಹೇಳಿದನು.

ಅರಿಂದಮ—ಇನ್ನು ಸ್ವಲ್ಪ ಸ್ಥೈರಿಸಿಕೊ. ನೀನು ರೇವತಿಯು ಚಿಕ್ಕಪ್ಪನ ವಿಷಯವಾಗಿ ಹೇಳಿದುದೆಲ್ಲ ನಿಶ್ಚಯವೇ ?

ಫೂಲ.—ಒಂದಕ್ಷರವೂ ಸುಳ್ಳಲ್ಲ. ಸಾಯುವುದಕ್ಕೆ ಸಿದ್ಧನಾಗಿರುವಾಗ ಸುಳ್ಳಿನಿಂದೇನು ?

ಅರಿಂದಮ—ಮತ್ತೊಂದು ಮಾತು—ನಿಜವನ್ನೇ ಹೇಳುವೆಯಷ್ಟೆ?

ಫೂಲ.—ಏತಕ್ಕೆ ಹೇಳದಿರಲಿ ?

ಅರಿಂದಮ—ಪೆಟ್ಟಿಗೆಯಲ್ಲಿ ರೇವತಿಯ ತಂಗಿಯ ಮೃತ ದೇಹವನ್ನು ಇಟ್ಟು ಕಳುಹಿಸಿದಾಗ, ಅವರಿಗಾಗಲೇ ಹದಿನೆಂಟು ಮಂದಿಯನ್ನು ಕೊಲೆಮಾಡಿರುವುದಾಗಿ ಒಂದು ಕಾಗದ ಬರೆದಿರುತ್ತೆ; ಅದರ ವಿವರಣವನ್ನು ಹೇಳು ?

ಫೂಲ.—ಇದೀಗ ನನ್ನ ಗೌರವದ ಮಾತು. ಇದರಲ್ಲಿ ಏಕೆ ಸುಳ್ಳು ಹೇಳಲಿ! ನನ್ನ ಮರಣವು ಸನ್ನಿಹಿತವಾಗಿರುವುದನ್ನು ತಿಳಿದಮೇಲೆ ನನ್ನ ಗೌರವಸೂಚಕವಾದ ಮಾತುಗಳನ್ನು ಏಕೆ ಬಚ್ಚಿಡಬೇಕು ? ನಾನು ಮಾಡಿರುವ ಹದಿನೆಂಟು ಕೊಲೆಗಳಿಗಾಗಿ ನಾನು ಹದಿನೆಂಟು

ನಲಗಲ್ಲಿಗೆ ಬರಬೇಕಾಗಿಲ್ಲವಲ್ಲ. ನನ್ನ ಸ್ಥಳವು ಅಲಹಾಬಾದು. ನಾನು ದರಿದ್ರ ಬ್ರಾಹ್ಮಣ. ಹೆಸರು—ವಿನೋದಲಾಲ ಚಟ್ಟೋಪಾಧ್ಯಾಯನೆಂದು. ಕೊಲೆಗಾರ ವಿನೋದಚಾತುರ್ಯನ ಕತೆಗಳನ್ನು ನೀನು ಕೇಳಿರಬಹುದು. ಯಾವ ವಿನೋದಚಾತುರ್ಯನನ್ನು ದಸ್ತಗಿರಿಮಾಡುವ ಕಾರ್ಯದಲ್ಲಿ ಎಷ್ಟೋ ಮಂದಿ ಪೋಲೀಸು ಅಧಿಕಾರಿಗಳೂ, ಎಷ್ಟೋ ಜನ ಶಕ್ತರಾದ ಪತ್ತೇದಾರರೂ ಈ ವೃತ್ತಿಯಿಂದಲೇ ಪಾರಾಗಬೇಕಾಯಿತೋ ಆ ವಿನೋದಚಾತುರ್ಯನೆಂಬವನು ನಾನೇ. ಯಾವ ಮೋಹಿನಿಯ ಸುದ್ದಿಯನ್ನು ಕುರಿತು ನೀನು ಪ್ರಸ್ತಾಪಿಸುತ್ತಿರುವೆಯೋ ಅದೇ ಮೋಹಿನಿಯ ತಂದೆ, ಚಿಕ್ಕಪ್ಪ, ಮಾವ, ಅಣ್ಣ ಇಷ್ಟು ಜನರು ಒಂದೇ ರಾತ್ರಿಯಲ್ಲಿ ನನ್ನಿಂದ ಹತರಾದರು. ಅದು ಇಂದಿಗೆ ಹತ್ತು ವರ್ಷಗಳ ಮಾತು. ವಿಧವೆಯಾದ ಮೋಹಿನಿಯನ್ನು ಜಾತಿಭ್ರಷ್ಟಳಾಗುವಂತೆ ಮಾಡಿದ್ದು ನಿಜವಾಗಿಯೂ ಕೇವಲ ಅರ್ಥಲೋಭದಿಂದಲೇ; ಕಾರಣವೇನೆಂದರೆ ನನ್ನ ಹೃದಯದಲ್ಲಿ ಪ್ರೀತಿ, ವಿಶ್ವಾಸ, ಸ್ನೇಹ, ಮಮತೆ ಮೊದಲಾದ ಯಾವುವೂ ನೆಲೆಯಾಗಿ ನಿಲ್ಲಲಾರವು. ಮೋಹಿನಿಯ ಮನೆಯು ನಮ್ಮ ಗ್ರಾಮದಲ್ಲಿಯೇ. ಮೋಹಿನಿಯನ್ನು ಮನೆಯಿಂದ ಹೊರಡಿಸಿಕೊಂಡು ಬಂದನಂತರ ಮೋಹಿನಿಯ ತಂದೆಯು ಕೋಪದಿಂದ ನಮ್ಮ ಮನೆಗೆ ಕಿಚ್ಚಿಟ್ಟನು. ಅದರ ಪ್ರತೀಕಾರದ ಸಲುವಾಗಿ ನಾನು ಮೋಹಿನಿಯ ತಂದೆ, ಚಿಕ್ಕಪ್ಪ, ಮಾವ, ಅಣ್ಣಂದಿರು ಇಷ್ಟು ಮಂದಿಯನ್ನೂ ಒಂದೇ ರಾತ್ರಿಯಲ್ಲಿ ಕೊಂದುಹಾಕಿದೆ. ಆ ರಾತ್ರಿಯೇ ನಾನು ಮೋಹಿನಿಯೊಡನೆ ಆ ಸ್ಥಳವನ್ನು ಬಿಡಬೇಕಾಯಿತು. ಇದಾದಮೇಲೆ ಒಂಬತ್ತು ಮಂದಿ ಪೋಲೀಸಿನವರನ್ನು ತೀರಿಸಿದೆನು. ಅವರೆಲ್ಲರೂ ನನ್ನನ್ನು ಹುಡುಕುವುದರಲ್ಲಿ ದುಸ್ಸಾಹಸಿಕವಾದ ಪ್ರಯತ್ನ ನಡೆಸಿದ್ದರು. ಅನಂತರ, ಅರ್ಥಲೋಭದಿಂದಲೇ ಒಬ್ಬ ಮುಸಲರ ಹುಡುಗಿಯನ್ನು ಮದುವೆಯಾಗಿ, ಅವಳ ತಂದೆಯನ್ನೂ ತೀರಿಸಿದೆ. ಅವಳನ್ನೂ ಕೊಂದುಹಾಕಿದೆ. ಕುಲಸುಮಳ ತಾಯಿಯನ್ನೂ ಅಣ್ಣನನ್ನೂ ಕೊಂದೆನು. ರೇವತಿಯ ತಂಗಿಯನ್ನೂ ಕೊಂದೆನು, ಇಲ್ಲಿಗೆ ಹದಿನೆಂಟಾಯಿತು. ಇವುಗಳ ಜತೆಗೆ ತಪಾಬುದ್ದೀನನನ್ನು ಕೊಂದೆನು. ಕಾರಾ

ಗೃಹದಲ್ಲಿ ಪಹರೆಯುವನನ್ನು ತೀರಿಸಿದೆನು. ಇನ್ನೂ ಕೊಂಚ ಕಾಲ ಬದುಕಿದ್ದಿದ್ದರೆ ಇನ್ನೂ ಅನೇಕ ಕೊಲೆಗಳನ್ನು ಮಾಡುತ್ತಲಿದ್ದೆ. ಮುಖ್ಯವಾಗಿ ನಿನ್ನನ್ನೂ ಯೋಗೇಂದ್ರನಾಥನನ್ನೂ ಕೊಲ್ಲಬೇಕೆಂಬ ಆಸೆ ಬಲವತ್ತರವಾಗಿದ್ದಿತು. ನೀವುಗಳು ಇನ್ನೂ ಬದುಕಿರುವಾಗ ನನಗೆ ಮರಣದಲ್ಲಿ ಸುಖವಿಲ್ಲವಾಗಿದೆ. ಅಯ್ಯೋ! ಬಹು ಬಾಧೆ! ಅರಿಂದಮ ಪ್ರಾಣಹೋಗುತ್ತಿದೆ. ನನ್ನ ಶರೀರವು ದುರ್ಬಲವಾಗುತ್ತ ಬಂದಿತು. ಈ ಯಾತನೆಯು ಎಷ್ಟು ಭಯಂಕರ!

ಅರಿಂದಮನು ದೇವೇಂದ್ರವಿಜಯನಿಗೆ ಸಂಜ್ಞೆ ಮಾಡಿದನು. ದೇವೇಂದ್ರವಿಜಯನು ಫೂಲಸಾಹೇಬನ ಕೈಗಳಿಗೆ ಡಬ್ಬಲ್ ಕೋಳಗಳನ್ನೂ ಕಾಲುಗಳಿಗೆ ಡಬ್ಬಲ್ ಸಂಕಲೆಗಳನ್ನೂ ತೊಡರಿಸಿದನು.

---

## ಒಂಬತ್ತನೆಯ ಪರಿಚ್ಛೇದ

### ಭೀಷಣ ಪ್ರತಿಹಿಂಸೆ

ಯೋಗೇಂದ್ರನಾಥನಿಗೆ ಈ ಸಮಾಚಾರವನ್ನು ತಿಳುಹುವುದಕ್ಕೋಸ್ಕರ ಅರಿಂದಮನು ದೇವೇಂದ್ರವಿಜಯನನ್ನು ಥಾಣೆಗೆ ಕಳುಹಿಸಿದನು. ಒಂದು ಗಂಟೆಯೊಳಗಾಗಿ ಯೋಗೇಂದ್ರನಾಥನು ಆರೇಳು ಮಂದಿ ಕಾನ್‌ಸ್ಟೇಬಲ್ಲರೊಡನೆ ಅರಿಂದಮನ ಮನೆಗೆ ಬಂದನು. ಅಲ್ಲಿ ನಡೆದಿದ್ದ ವಿದ್ಯಮಾನಗಳನ್ನು ನೋಡಿಯೂ ಕೇಳಿಯೂ ಅಪರಿಮಿತವಾದ ಧನ್ಯವಾದಗಳೊಡನೆ ಅರಿಂದಮನನ್ನು ಪ್ರಶಂಸೆಮಾಡದಿರಲು ಅವನಿಗೆ ಸಾಧ್ಯವಾಗಲಿಲ್ಲ.

ಯೋಗೇಂದ್ರನಾಥನು ಎಲ್ಲರನ್ನೂ ಥಾಣೆಗೆ ಕರೆದುಕೊಂಡು ಹೊರಟನು. ಅರಿಂದಮನೂ ದೇವೇಂದ್ರವಿಜಯನೂ ಸಂಗಡಲೇ ಇದ್ದರು. ಫೂಲಸಾಹೇಬನ ವಿನಾ ಉಳಿದ ದಸ್ಯುಗಳನ್ನು ಕರೆದುಕೊಂಡು ದೇವೇಂದ್ರವಿಜಯನೂ ಕಾನ್‌ಸ್ಟೇಬಲ್ಲರುಗಳೂ ಮುಂದಾಗಿ ನಡೆದರು. ಅವರ ಹಿಂದೆಯೇ, ಫೂಲಸಾಹೇಬನೊಂದಿಗೆ ಅರಿಂದಮನೂ ಯೋಗೇಂದ್ರನಾಥನೂ ಹೊರಟರು.

ಆ ವೇಳೆಗೆ ರಾತ್ರಿ ಕಳೆಯುತ್ತ ಬಂದಿದ್ದಿತು. ದೂರದಲ್ಲಿನ ಮಾವಿನ ಮರದ ನವಪಲ್ಲವರಾಶಿಯೊಳಗಿನಿಂದ ಒಂದೆರಡು ಕೋಗಿಲೆಗಳು ಕೂಗಿದವು. ಉಷಃಕಾಲದ ತಂಪಾದ ಗಾಳಿಯು ಬಿದಿರುಪೊದೆಗಳ ಮಧ್ಯೆ ಸರಸರನೆ ಶಬ್ದ ಮಾಡುತ್ತಿದ್ದಿತು. ತಮೋರಾಶಿಯಂತೆ ಕಾಣಿಸುತಲಿದ್ದ ಮರದ ಒಳಗೂ ಹೊರಗೂ ಲೆಕ್ಕವಿಲ್ಲದಷ್ಟು ಮಿಣುಗು ಹುಳುಗಳು ಮಿಣುಗುಟ್ಟುತ್ತಿದ್ದುವು. ರಸ್ತೆಯಲ್ಲಿ ಇನ್ನೂ ಜನಸಂಚಾರಕ್ಕೆ ಆರಂಭ ವಿಲ್ಲ. ಇಂತಹ ಸಮಯದಲ್ಲಿ, ಸಮೀಪದಲ್ಲಿನ ಮರದಡಿಯಿಂದ ಓಡಿ ಬಂದು, ಎವೆಯಿಕ್ಕುವುದರೊಳಗಾಗಿ ಫೂಲಸಾಹೇಬನ ಹೃದಯದಲ್ಲಿ ಉಗ್ರವಾದ ಚೂರಿಯೊಂದನ್ನು ನೆಟ್ಟ ಆ ಹೆಣ್ಣು ಪಿಶಾಚಿಯು ಯಾರಿರ ಬಹುದು? ಅರಿಂದಮನೂ ಯೋಗೇಂದ್ರನಾಥನೂ ಆ ನರಹಂತ್ರಿಯನ್ನು ಹಿಡಿಯುವುದಕ್ಕೆ ಪ್ರಯತ್ನಮಾಡುವಷ್ಟರಲ್ಲಿಯೇ ಆ ಡಾಕಿನಿಯು ಅದೇ ಚೂರಿಯನ್ನು ತನ್ನ ಎದೆಗೂ ನಾಟಿಕೊಂಡು ಕಿಲಕಿಲನೆ ನಗುತ್ತಾ ತನ್ನ ವಿಕಾರವಾದ ನಗೆಯಿಂದ ನಿದ್ರಿಸುತ್ತಿದ್ದ ನಿಶಾದೇವಿಯು ಅಂಧಕಾರ ಮಯವಾದ ವಕ್ಷವನ್ನು ತುಮುಲ ತುಮುರಾಗುವಂತೆ ಮಾಡಿದಳು; ಅದರಿಂದ ಮಾವಿನ ಮರದ ಕೋಗಿಲೆಯು ಮೌನಗೊಂಡಿತು. ಗಾಳಿಯು ನಿಂತುಹೋದಂತೆಯೇ ತೋರಿತು. ಆಕಾಶದಲ್ಲಿನ ನಕ್ಷತ್ರಗಳೆಲ್ಲವೂ ನಿದ್ರೆ ಯಿಲ್ಲದ ಬಳಲಿದ ನೇತ್ರಗಳಿಂದ ನಿಶಾರಾಕ್ಷಸಿಯ ಈ ಭೀಷಣತಮವಾದ ಅಭಿನಯವನ್ನು ಎವೆಯಿಕ್ಕದೆ ನೋಡುತ್ತಿರುವುವು. ಪ್ರಳಯಂಕರಿ ಯಾದ ನಿಶೆಯ ರಕ್ತಪ್ಲಾವಿತ ಮೂರ್ತಿಯ ಸಮಕ್ಷದಲ್ಲಿ, ಶಬ್ದಹೀನ ವಾದ ಆಕೆಯ ಗಾಂಭೀರ್ಯದ ನಡುವೆ ನಿಂತು, ನೋಡುವುದಕ್ಕೆ ಅಸಾಧ್ಯವಾಗಿಯೂ ಭಯಂಕರವಾಗಿಯೂ ಇರುವ ಆಕೆಯ ಎರಡು ದೃಶ್ಯಗಳನ್ನು ಕಂಡು ಪ್ರಕೃತೀದೇವಿಯು ಶಾಸನ ಭೀತಳಾಗಿರುವ ಅಪರಾಧಿನಿಯಾದ ಬಾಲಿಕೆಯ ಹಾಗೆ ಗಡಗಡನೆ ನಡುಗುತ್ತಿದ್ದಳು.

ರಕ್ತಪ್ರವಾಹವು ಫೂಲಸಾಹೇಬನ ದೇಹವನ್ನೆಲ್ಲಾ ನೆನೆಯಿ ಸುತ್ತಾ ಹರಿಯಬಾರಂಭಿಸಿತು. ಕೂಡಲೇ, ಅವನು ಅಲ್ಲಿಯೇ ನೆಲಕ್ಕೆ ಉರುಳಿದನು. ತನ್ನದೊಂದು ಚೂರಿಯ ಆಘಾತ ಮಾತ್ರದಿಂದ ಫೂಲ

ಸಾಹೇಬನ ಪ್ರಾಣದೊಡನೆ ಅವನ ಬಂಧನವನ್ನೂ ಪರಿಹರಿಸಿದ ಆ ದಾಸಿಯನ್ನು ಅರಿಂದಮನು ಗುರ್ತಿಸಿದನು. ಅವಳೇ ಆ ಮೋಹಿನಿ!

ಮೋಹಿನಿಯ ಹೃದಯದ ಗಾಯವೂ ಸಾಂಘಾತಿಕವಾಗಿಯೇ ಇದ್ದಿತು. ಯೋಗೇಂದ್ರನೂ ಅರಿಂದಮನೂ ಅವಳನ್ನು ಹಿಡಿದುಕೊಂಡರು. ಮತ್ತೂ ಅವಳ ಕೈಯಿಂದ ರಕ್ತಾಕ್ತವಾದ ಆ ಚೂರಿಯನ್ನು ಕಸರಿಕೊಂಡರು. ಫೂಲಸಾಹೇಬನ ಹೃದಯದ ರಕ್ತಸ್ರಾವವು ಏತರಿಂದಲೂ ಕಡಿಮೆಯಾಗಲಿಲ್ಲ. ಅವನು ಪ್ರತಿ ಮುಹೂರ್ತದಲ್ಲಿಯೂ ಮೃತ್ಯುವಿಗೆ ಸಮೀಪಗತನಾಗುತ್ತಿರುವನು. ಮೋಹಿನಿಯು ಅಂತಹ ಸಮಯದಲ್ಲಿಯೂ ಚಪ್ಪಾಳೆ ಹಾಕಿಕೊಂಡು ನಗುತ್ತಾ—ನೋಡ! ಹೇಗಿದೆ? ನಾನು ಸುಳ್ಳು ಜೊಂಕುವಳೆ? ಆಲೋಚಿಸಿ ನೋಡು, ಎಂತಹ ಸುಖ! ಇದಕ್ಕಿಂತ ಸಂತೋಷವೆ? ಎಂದಳು. ಮೋಹಿನಿಯ ನಗೆಗೆ ಪಾರವಿಲ್ಲ!

"ಮೋಹಿನಿ! ನೀನು ನನಗೆ ಬಹಳ ಉಪಕಾರಮಾಡಿದೆ. ಅರಿಂದಮನ ದೆಸೆಯಿಂದ ನನಗೆ ಒದಗಿಬರುತ್ತಿದ್ದ ಗಲ್ಲಿನ ಮರಕ್ಕಿಂತಲೂ ನಿನ್ನ ಚೂರಿಯು ಎಷ್ಟೋ ಉತ್ತಮವು" ಎಂದು ಹೇಳಿ, ಫೂಲಸಾಹೇಬನು ಅರಿಂದಮನನ್ನು ಕುರಿತು—"ಅರಿಂದಮ, ನಾನು ಈಗ ಸಾಯುತ್ತೇನೆ. ಇನ್ನಾದರೂ ನೀನು ನಿರ್ಭಯನಾಗಿರಬಹುದೆಂದು ಕನಸಿನಲ್ಲಿಯೂ ಎಣಿಸಬೇಡ. ಜುಮೆಲೆಯ ವಿಷಯದಲ್ಲಿ ಜಾಗರೂಕನಾಗಿರು. ಈ ಮೊದಲು ಅವಳನ್ನು ಹುಡುಕುವುದರಲ್ಲಿ ನಿರತನಾಗು. ಮುಖ್ಯವಾಗಿ ಅವಳಿಗೆ ನಿನ್ನ ಮೇಲೆ ವಿಶೇಷ ಕೋಪವಿದೆ. ಅವಳು ನಿನ್ನ ರಕ್ತ ದರ್ಶನ ಮಾಡಿಬಿಡುವುದಾಗಿ ಪ್ರತಿಜ್ಞೆ ಮಾಡಿದ್ದಾಳೆ. ನಾನು ಸಾಯುತ್ತೇನೆ. ಎಷ್ಟೇ ಪ್ರಯತ್ನಮಾಡಿದರೂ 'ಅಧರ್ಮಕ್ಕೆ ಜಯವಿಲ್ಲ' ಎಂಬುದು ಈಗ ನಿದರ್ಶನಕ್ಕೆ ಬಂದಿತು" ಎಂದು ಹೇಳಿದನು.

ವಿಶೇಷವಾದ ರಕ್ತಪ್ರವಾಹದ ದೆಸೆಯಿಂದ ಫೂಲಸಾಹೇಬನ ಶರೀರದಲ್ಲಿ ಶಕ್ತಿಯು ಬಹು ಬೇಗ ಕುಂದುತ್ತ ಬಂದಿತು. ಕಣ್ಣಿನ ಕಾಂತಿಯು ಕಡಿಮೆಯಾಯಿತು. ನಾಲಿಗೆಯು ಒಣಗುತ್ತಿದ್ದಿತು. ಫೂಲಸಾಹೇಬನು

ಸಾಯುವುದಕ್ಕೆ ಮೊದಲು ಬಹಳ ಹೊತ್ತಿನವರೆಗೂ ಅರಿಂದಮನನ್ನು ಸ್ಥಿರದೃಷ್ಟಿಯಿಂದ ನೋಡುತ್ತಿದ್ದನು. ಆ ದೃಷ್ಟಿಯಲ್ಲಿ ಅರಿಂದಮನಿಗೆ ಮತ್ತಾವುದನ್ನೋ ಕುರಿತು ಹೇಳಬೇಕೆಂದು ಆಸೆಯಿರುವಂತೆ ತೋರು ತ್ತಿದ್ದಿತು. ಹೇಳಲಾಗಲಿಲ್ಲ. ಆ ವೇಳೆಗೆ ಫೂಲಸಾಹೇಬನಿಗೆ ಮಾತನಾಡುವ ತ್ರಾಣವೂ ಇಲ್ಲವಾಗಿ ಪ್ರಾಣವು ಕಂಠಗತವಾಗಿತ್ತು. ಒಂದೆರಡು ಸಲ ಮಾತನಾಡುವುದಕ್ಕೆಂದು ಬಾಯನ್ನು ಅಗಿಸಿದುದೆಷ್ಟೋ ಅಷ್ಟೇ; ಯಾವ ಮಾತೂ ಹೊರಹೊರಡಲಿಲ್ಲ; ಆದರೆ ಒಂದು ಬಗೆಯ ಅವ್ಯಕ್ತ ಸ್ವರವು ಮಾತ್ರ ಉಂಟಾಯಿತು; ಅನಾದ ಸ್ವಲ್ಪ ಹೊತ್ತಿನೊಳಗಾಗಿ ದುರಾಂತನಾದ ಫೂಲಸಾಹೇಬನು ಈ ಪ್ರಪಂಚದಿಂದ ಅಸ್ತನಾದನು. ಆದರೆ ಅವನ ಆ ಭಯಂಕರ ಕೀರ್ತಿಚರಿತ್ರೆಯು ಮಾತ್ರ ಅನೇಕರ ಮನಸ್ಸಿನಲ್ಲಿ ಬಹು ಕಾಲದವರೆಗೂ ಜಾಗರಿತವಾಗಿಯೇ ಇರುವುದು.

ಬಹುವಾಗಿ ರಕ್ತಸ್ರಾತವಾಗುತ್ತಿದ್ದುದರಿಂದ ಮೋಹಿನಿಯ ಮರಣವೂ ಜಾಗ್ರತೆಯಾಗಿಯೇ ಸಮೀಪಿಸಿತು. ಏನೇನು ಮಾಡಿದರೂ ರಕ್ತ ಪ್ರವಾಹವನ್ನು ನಿಲ್ಲಿಸಲಾಗಲಿಲ್ಲ. ಫೂಲಸಾಹೇಬನು ಮೃತಿ ಗೊಂಡ ಕೊಂಚ ಹೊತ್ತಿನೊಳಗಾಗಿ ಮೋಹಿನಿಯೂ ಇಹಲೋಕವನ್ನು ಬಿಟ್ಟುಹೋದಳು.

* * * * *

ಇದಾದ ನಂತರ ಅರಿಂದಮನು ಫೂಲಸಾಹೇಬನ ಅಂಗಿಯ ಕಿಸೆಯನ್ನು ಹುಡುಕಿದ್ದರಲ್ಲಿ ಎರಡು ಪಿಸ್ತದ ಮುಳ್ಳುಗಳೂ ಒಂದು ಕಾಗದವೂ ಸಿಕ್ಕಿದುವು. ಕಾಗದವು ಬಹು ಪ್ರಯೋಜನಕಾರಿಯಾದದ್ದು. ಅರಿಂದಮನು ಓದಿಕೊಂಡು ಯೋಗೇಂದ್ರನಾಥನ ಕೈಗೆ ಅದನ್ನು ಕೊಟ್ಟನು. ಯೋಗೇಂದ್ರನಾಥನೂ ಕಾಗದವನ್ನು ಓದಿ—"ಕಾಗದವು ಪ್ರಯೋಜನಕರವಾದುದೇ ಹೌದು. ರಹಸ್ಯಮಯವಾದ ಈ ಸಮಸ್ಯೆಯು ಪೂರ್ಣವಾಗುವುದಕ್ಕೆ ಇಷ್ಟು ದಿನವಾಯಿತು" ಎಂದು ಅಭಿಪ್ರಾಯಪಟ್ಟರು.

ಫೂಲಸಾಹೇಬ ಮತ್ತೂ ಮೋಹಿನಿ ಇವರ ಶವದೇಹಗಳು ಠಾಣೆಗೆ ಒಯ್ಯಲ್ಪಟ್ಟವು.

## ಹತ್ತನೆಯ ಪರಿಚ್ಛೇದ

( * * * * )

ಫೂಲಸಾಹೇಬನು ಸಿಕ್ಕಿಬಿದ್ದನು! ಸತ್ತನು. ದಸ್ಯುಗಳೆಲ್ಲರೂ ಸಿಕ್ಕಿದರು. ಕಾನೂನಿನ ಮೇರೆ ಎಲ್ಲರಿಗೂ ದಂಡನೆಯಾಯಿತು. ಆದರೆ, ರೇವತಿಯನ್ನು ಹುಡುಕುವ ಯಾವ ಪ್ರಯತ್ನವೂ ನಡೆಯಲಿಲ್ಲವಾಗಿ ಅರಿಂದಮನು ಹೇಳುತ್ತಿದ್ದ ಭರವಸೆಯ ಮಾತುಗಳೆಲ್ಲವೂ ದೇವೇಂದ್ರವಿಜಯನಿಗೆ ನಿರರ್ಥಕವೆಂದು ತೋರಲಾರಂಭವಾಯಿತು. ಒಂದು ದಿನ ದೇವೇಂದ್ರವಿಜಯನು—ಎಲ್ಲವೂ ಆದುವು. ಇನ್ನು ನಾನು ಊರಿಗೆ ಪ್ರಯಾಣ ಮಾಡುತ್ತೇನೆ. ಇಲ್ಲಿ ಈಗ ನನ್ನ ಅವಶ್ಯಕತೆ ಏನಿದ್ದೀತು ? ಎಂದು ಅರಿಂದಮನನ್ನು ಸ್ಪಷ್ಟವಾಗಿ ಕೇಳಿಬಿಟ್ಟನು.

ದೇವೇಂದ್ರವಿಜಯನ ಮುಖದಲ್ಲಿಯೂ ಕಣ್ಣುಗಳಲ್ಲಿಯೂ ಕೋಪದ ರೇಖೆಯು ತಲೆದೋರಿದ್ದಿತು. ಅರಿಂದಮನು ದೇವೇಂದ್ರನ ಕಡೆ ನೋಡದೆಯೇ ಅವನ ಮನೋಭಾವವನ್ನು ಅವನ ಧ್ವನಿಯಿಂದಲೇ ತಿಳಿದವನಾಗಿ, "ಅಣ್ಣಾ, ಅದೇನು ! ಇನ್ನು ಕೆಲವು ದಿನಗಳು ನೀನು ಇಲ್ಲಿಯೇ ಇರಬೇಕು. ರೇವತಿಯ ಉದ್ಧಾರವಿನ್ನೂ ಆಗಲಿಲ್ಲವಲ್ಲ?" ಎಂದನು.

ದೇವೇಂದ್ರ—ಆ ವಿಷಯದಲ್ಲಿ ತಾವು ತೊಂದರೆ ತೆಗೆದುಕೊಳ್ಳಬೇಕಾದುದು ಅನಾವಶ್ಯಕ.

ಅರಿಂದಮ—ನಿನಗೆ ಕೋಪ ಬಂದಿರುವಂತೆ ತೋರುತ್ತಿದೆ. ದೇವೇಂದ್ರಬಾಬು ! ಕೋಪದ ಮಾತುಗಳು ಬೇಕಿಲ್ಲ. ಕೇವಲ ರೇವತಿಯ ಉದ್ಧಾರ ಮಾತ್ರದಿಂದ ಫಲವಿಲ್ಲ. ಆಕೆಯ ಪಿತ್ರಾರ್ಜಿತವಾದ ಸಮಸ್ತ ಸಂಪತ್ತಿಯೊಂದಿಗೆ ಅವಳ ಉದ್ಧಾರವಾಗುವ ಪ್ರಯತ್ನ ಮಾಡುತ್ತಿದ್ದೇನೆ. ರೇವತಿಯ ಚಿಕ್ಕಪ್ಪನೆಂತಹನೆಂಬುದನ್ನು ಫೂಲಸಾಹೇಬನಿಂದ ಕೇಳಿರುವೆಯಷ್ಟೆ ? ಅವನು ಸಾಮಾನ್ಯ ಶತ್ರುವಲ್ಲ; ಎಡಿಸನ್ ತಯಾರಿಸಿದ ಫೂಲಸಾಹೇಬನ ಪ್ರತಿಮೂರ್ತಿಯೇ ಎಂದು ಹೇಳಬೇಕು.

ದೇವೇಂದ್ರ—ಹಾಗಾದರೆ, ಈಗ ಏನು ಮಾಡಬೇಕೆಂದು ತಮ್ಮ ಆಲೋಚನೆ?

ಅರಿಂದಮ—ಒಂದು ಸಲ ರೇವತಿಯ ಚಿಕ್ಕಪ್ಪನನ್ನು ಕಂಡು ಮಾತನಾಡಬೇಕು. ನೀನೂ ಸಂಗಡ ಬಾ. ರೇವತಿಯ ಉದ್ಧಾರದ ಸಲುವಾಗಿ ಒಬ್ಬ ಪತ್ತೇದಾರನನ್ನು ಕರೆದುಕೊಂಡು ಬರುವುದಕ್ಕೆ ನಿನಗೆ ಹೇಳಿದ್ದನಷ್ಟೆ? ಈಗ ನೀನು ನನ್ನನ್ನು ಅವನಲ್ಲಿಗೆ ಕರೆದುಕೊಂಡುಹೋಗಿ ಉತ್ತಮನಾದ ಪತ್ತೇದಾರನೆಂದು ಹೇಳಿ ಅವನಿಗೂ ನನಗೂ ಪರಿಚಯ ಮಾಡಿಸು. ಇಷ್ಟು ಸಾಕು. ಅನಂತರ ನನ್ನ ಸರಿಯಾದ ಪರಿಚಯವನ್ನು ಬಹು ಜಾಗ್ರತೆಯಾಗಿ ನಾನೇ ಮಾಡಿಕೊಳ್ಳುವೆನು.

ದೇವೇಂದ್ರ—ಓಹೊ! ರೇವತಿಯ ಚಿಕ್ಕಪ್ಪನು ಅಷ್ಟು ಭಯಂಕರನೆ? ಹಣದಾಸೆಯಿಂದ ತನ್ನ ಅಣ್ಣನ ಮಕ್ಕಳನ್ನೇ ಕೊಲೆಗಾರರಿಗೆ ಒಪ್ಪಿಸಿದವನೆ? ಜನರು ಸಂದೇಹಪಟ್ಟಾರೆಂದು ತಿಳಿದು ಈಗ ಪತ್ತೇದಾರರನ್ನು ಗೊತ್ತುಮಾಡುತ್ತಿರುವನೆ. ಈ ವಿಚಾರದಲ್ಲಿ ಫೂಲಸಾಹೇಬನ ಮಾತುಗಳನ್ನು ನಿಜವೆಂದು ನಂಬುತ್ತೀರಾ?

ಅರಿಂದಮ—ದೇವೇಂದ್ರ, ಈ ಜಗತ್ತಿನಲ್ಲಿ ಎಂತೆಂತಹ ಜನರಿರುವರೆಂಬುದನ್ನು ಬಲ್ಲೆಯಾ? ಈ ಕಾಲದಲ್ಲಿ ಜನರ ಮರ್ಮವರಿಯುವುದು ಬಹು ಕಷ್ಟ. ಮನುಷ್ಯನು ನಿರಾಪದನಾಗಿರಬೇಕಾದರೆ ಮನುಷ್ಯರ ಗುಣಾವಗುಣಗಳನ್ನು ಚೆನ್ನಾಗಿ ಪರಿಶೀಲಿಸಿ ತಿಳಿದುಕೊಳ್ಳುತ್ತಿರುವುದು ಆವಶ್ಯಕ. ನೀನು ಇನ್ನೂ ಹುಡುಗ. ಈ ಪ್ರಪಂಚದ ನಡೆವಳಿಯ ವಿಚಾರಗಳೊಂದೂ ನಿನ್ನವರೆಗೆ ಬಂದಿಲ್ಲ. ಈ ಸಂದರ್ಭದಲ್ಲಿ ಫೂಲಸಾಹೇಬನು ನಿಜವನ್ನೇ ಹೇಳಿದ್ದಾನೆಂದು ನನಗೆ ನಂಬುಗೆ.

ದೇವೇಂದ್ರ—ರೇವತಿಯ ಚಿಕ್ಕಪ್ಪನ ಮಾತು ಕಥೆಗಳನ್ನೂ ಭಾವಭಂಗಿಗಳನ್ನೂ ನೋಡಿದರೆ ಫೂಲಸಾಹೇಬನು ಹೇಳಿದ ಮಟ್ಟಿಗೆ ಭಯಂಕರನಾಗಿರಲಾರನೆಂದು ನನ್ನ ಅಲ್ಪಬುದ್ಧಿಗೆ ತೋರುತ್ತಿದೆ. ಆತನು ಜನರಲ್ಲಿ ಮಾತನಾಡುವ ಮತ್ತೂ ವ್ಯವಹರಿಸುವ ರೀತಿಗಳನ್ನು ನೋಡಿದರೆ,

ಆತನ ಪರಮ ಶತ್ರುಗಳು ಕೂಡ ಆತನನ್ನು ಗೌರವಿಸದೇ ಇರಲಾರರೆಂದು ಭಾವಿಸುತ್ತೇನೆ.

ಅರಿಂದಮ—ನಾನು ಹೇಳುವುದೂ ಅದೇ. ನೀನು ಇನ್ನೂ ಚಿಕ್ಕವನು. ನನ್ನನ್ನು ಸಂಗಡ ಕರೆದುಕೊಂಡು ಒಂದಾವರ್ತಿ ಆತನ ಬಳಿಗೆ ನಡೆ. ಆ ಮನುಷ್ಯನನ್ನು ತಕ್ಕ ಯುಕ್ತಿಯಿಂದ ಪರಿಷ್ಕಾರವಾಗಿ ತೊಳೆದು ಒರಸಿ ಸಹಜವಾದ ಉಡಿಗೆ ತೊಡಿಗೆಗಳನ್ನು ಹಾಕಿ ನಿನ್ನ ಮುಂದೆ ಬಿಟ್ಟಾಗ, ನೀನು 'ಗೌರವಶಾಲಿ' ಎಂದು ತಿಳಿದಿರುವ ಅದೇ ಮನುಷ್ಯನು ಎಂತಹ ಪಂಗಡಕ್ಕೆ ಸೇರಿದವನು ಎಂಬುದು ತಾನಾಗಿ ವ್ಯಕ್ತಪಡುವುದು. ಆಗ, ನಾನು ಬಹಳವಾಗಿ ವಾಕ್ಯವ್ಯಯಮಾಡ ಬೇಕಾದ ಸಂಭವವಿರಲಾರದು.

---

## ಹನ್ನೊಂದನೆಯ ಪರಿಚ್ಛೇದ

### ಸನ್ಮಾರ್ಗದ ತೋರಿಕೆ

ಆ ದಿವಸವೇ ಅರಿಂದಮನು ದೇವೇಂದ್ರವಿಜಯನನ್ನು ಸಂಗಡ ಕರೆದುಕೊಂಡು ರೇವತಿಯ ಚಿಕ್ಕಪ್ಪನನ್ನು ನೋಡುವುದಕ್ಕಾಗಿ ವೇಣೀಮಾಧವಪುರಕ್ಕೆ ಪ್ರಯಾಣಮಾಡಿದನು. ದೇವೇಂದ್ರವಿಜಯನಿಗೆ ಗೋಪಾಲಚಂದ್ರನ ಮನೆಯು ಪರಿಚಯವಿದ್ದಿತು. ಇಬ್ಬರೂ ಆ ಮನೆಗೆ ಹೋಗಿ, ಅದರ ಹೊರಭಾಗದ ಪಡಸಾಲೆಯಲ್ಲಿ ಕುಳಿತುಕೊಂಡು ಸೇವಕನೊಬ್ಬನ ಮೂಲಕವಾಗಿ ಗೋಪಾಲಚಂದ್ರನಿಗೆ ವರ್ತಮಾನ ಕಳುಹಿದರು. ಆ ಸಮಯದಲ್ಲಿ ಅಂತಃಪುರದಲ್ಲಿದ್ದ ಗೋಪಾಲಚಂದ್ರನು ವರ್ತಮಾನ ತಿಳಿದೊಡನೆಯೇ ಹೊರಕ್ಕೆ ಬಂದನು. ಬಂದವನೇ ಆಗಂತುಕರಿಬ್ಬರನ್ನೂ ಮಧುರೋಕ್ತಿಗಳಿಂದ ಉಪಚರಿಸಿ, ದೇವೇಂದ್ರವಿಜಯನನ್ನು ಕುರಿತು ಅವನ ಕ್ಷೇಮಸಮಾಚಾರಗಳ ವಿಷಯವಾಗಿ ಪ್ರಶ್ನೆ ಮಾಡತೊಡಗಿದನು.

ಗೋಪಾಲಚಂದ್ರನಿಗೆ ವಯಸ್ಸಾಗಿದೆ. ಸುಮಾರು ನಾಲ್ವತ್ತೆಂಟು ವರುಷಕ್ಕೆ ಕಡಿಮೆಯಿಲ್ಲ. ಗೌರವರ್ಣ, ಸ್ಥೂಲದೇಹ, ಶರೀರದ ಇತರ ಅಂಗಪ್ರತ್ಯಂಗಗಳಿಗಿಂತ ಹೊಟ್ಟೆಯು ಹತ್ತು ಬಾರಿಗೆ ಹಿರಿದಾಗಿದೆ. ಅದರಿಂದ ಇವನು ಎಲ್ಲರೊಡನೆ ಕುಳಿತು ಸರಿಯಾಗಿ ಊಟಮಾಡಲಾಗುತ್ತಿರಲಿಲ್ಲ. ತಲೆಯಲ್ಲಿ ಕೂದಲು ಗಿತ್ತುಗಿಡ್ಡಾಗಿದ್ದುದೂ ಅಲ್ಲದೆ, ಅಲ್ಲಲ್ಲಿ ಉದುರಿಹೋದಹಾಗಿತ್ತು. ಗಡ್ಡ ಮೀಸೆಗಳು ಇಲ್ಲವೇ ಇಲ್ಲ. ಕುತ್ತಿಗೆಯಲ್ಲಿ ತುಳಸೀಮಣಿಯ ಹಾರ; ವಿಸ್ತಾರವಾದ ಉದರ ಪ್ರಾಕಾರದ ಮೇಲೆ ಅಲ್ಲಲ್ಲಿ ಬಗೆ ಬಗೆಯ ವೈಷ್ಣವ ಮುದ್ರೆಗಳ ಛಾಪು.

ಗೋಪಾಲಚಂದ್ರನು ಅರಿಂದಮನನ್ನು ಕುರಿತು, ಮಹಾಶಯ, ದೇವೇಂದ್ರವಿಜಯ ಬಾಬುಗಳಿಂದ ನನ್ನ ದುರದೃಷ್ಟದ ವಿಚಾರವನ್ನೆಲ್ಲಾ ತಾವು ಕೇಳಿರಬಹುದೆಂದು ತೋರುತ್ತದೆ. "ಆಹಾ! ರೇವತಿ! ನನ್ನ ತಾಯಿ! 'ಚಿಕ್ಕಪ್ಪ' ಎಂದರೆ ತೀರಿತು. ಅವಳಿಗೆ ಮತ್ತೇನೂ ಬೇಕಿಲ್ಲ! ಕೋಹಣೆಯೋ, ನನ್ನ ತೊಡೆಯಮೇಲೆಯೋ ಬೆಳೆದವಳು. ಒಂದು ಗಳಿಗೆಯಾದರೂ ನನ್ನನ್ನು ಬಿಟ್ಟಿದ್ದವಳಲ್ಲ. ಅಯ್ಯೋ! ಎಂತಹ ಸರ್ವನಾಶವಾಯಿತು! ಕೃಷ್ಣಾ! ರಾಧಾಮಾಧವ! ರಾಧಾಮಾಧವ! ಪೂರ್ವಜನ್ಮದಲ್ಲಿ ಎಂತಹ ಪಾಪಮಾಡಿದ್ದೆನೋ ತಿಳಿಯದು" ಎಂದು ಕಳವಳಿಸಿದನು.

ಅರಿಂದಮ—ತಮ್ಮಂತಹ ಹಿರಿಯ ಸತ್ಪುರುಷರಿಗೆ ಇಂತಹ ಸಂಕಟಗಳೊದಗುವುದು ಬಹು ವ್ಯಸನಕರವಾದ ವಿಚಾರ. ತಮ್ಮ ಆಶೀರ್ವಾದ ಬಲದಿಂದ, ಮಹಾಮಹಿಮರಾದ ತಮ್ಮ ಕಾರ್ಯದಲ್ಲಿ ಸ್ವಲ್ಪ ಮಟ್ಟಿಗಾದರೂ ಕೃತಕಾರ್ಯನಾಗಬಲ್ಲೆನೋ ಏನೋ ಪರೀಕ್ಷಿಸಬೇಕೆಂದಿದ್ದೇನೆ. ಈಗ ಮಹಾಶಯರು ದಯವಿಟ್ಟು ನನ್ನನ್ನು ಈ ಕೆಲಸಕ್ಕೆ ಗೊತ್ತುಮಾಡಿಕೊಳ್ಳುವುದಾದರೆ......

ಗೋಪಾಲ—ಪುನಃ ಗೊತ್ತುಮಾಡುವುದೇನು ಬಂತು? ಇದಕ್ಕೋಸ್ಕರವಾಗಿಯೇ ನಿಮ್ಮನ್ನು ಬರಮಾಡಿದ್ದು.

ಅರಿಂದಮ—ನಾನು ತಮ್ಮ ಕೆಲಸವನ್ನು ಸಾಧಿಸಿಕೊಟ್ಟ್ಟದೇ ಆದರೆ ನನ್ನ ಪರಿಶ್ರಮಕ್ಕಾಗಿ ಮಹಾಶಯರು ಏನು ಕೊಡೋಣಾಗುತ್ತಿದೆಂಬುದನ್ನು ನಿಶ್ಚಯವಮಾಡಿ, ಈಗಲೇ ಒಂದು ಸಮ್ಮತಿ ಪತ್ರವನ್ನು ಬರೆದುಕೊಡಬೇಕು.

ಗೋಪಾಲ—ಇದಕ್ಕೆ ಬೇರೆ ಒಪ್ಪಿಗೆ ಕಾಗದವೆಂದರೇನು? ತಾವು ಕೇಳಿದುದನ್ನು ಒಡನೆಯೇ ಕೊಡುತ್ತೇನೆ. ಹೇಗೆ ಮಾಡಿದರೆ ನೀವು ತೃಪ್ತರಾಗುವಿರೋ ಹಾಗೆ ಮಾಡುತ್ತೇನೆ. ಅದು ನನ್ನ ಕರ್ತವ್ಯ; ಇದಕ್ಕಾಗಿ ನನ್ನ ಸರ್ವಸ್ವವು ವೆಚ್ಚವಾದರೂ ಚಿಂತೆಯಿಲ್ಲ. ನನಗೆ ಅವರಿಬ್ಬರೂ ದೊರೆತರೆಂದರೆ ಆ ಆನಂದದಿಂದ ನನ್ನ ಹೃದಯವು ದಶಗುಣವಾಗಿ ವಿಸ್ತಾರಗೊಳ್ಳುವುದು.

ಅವರಿಬ್ಬರೂ ದೊರೆಯದೇ ಹೋದಲ್ಲಿ ಹೊಟ್ಟೆಯು ಮತ್ತೂ ದುಂದಾಗುವುದೆಂದು ಅರಿಂದಮನು ಮನಸ್ಸಿನಲ್ಲಿಯೇ ಭಾವಿಸಿಕೊಂಡು, ಯಾವುದೊಂದು ಕಾಗದಪತ್ರವೂ ಇಲ್ಲದೆ ನಾನು ಏನುತಾನೇ ಮಾಡಬಲ್ಲೆನು? ಇದಕ್ಕಾಗಿ ತಾವು ಇಷ್ಟು ಹಿಂದು ಮುಂದು ಆಲೋಚಿಸುವುದಕ್ಕೆ ಕಾರಣವೇನೋ ನನಗೆ ತಿಳಿಯದು, ಎಂದು ವ್ಯಕ್ತವಾಗಿ ಹೇಳಿದನು.

ಗೋಪಾಲ—ಇಲ್ಲ ಇಲ್ಲ; ಹಿಂದು ಮುಂದು ಯೋಚಿಸುವುದೇನಿದೆ? ಈಗಲೇ ಬರೆದುಕೊಡುತ್ತೇನೆ. ನಾನು ಏನೇನು ಬರೆಯಬೇಕೋ ಮತ್ತೂ ಎಷ್ಟು ರೂಪಾಯಿಗಳಾದರೆ ತಾವು ಸಂತುಷ್ಟಿಗೊಳ್ಳುವಿರೋ ಹೇಳಿಬಿಡಿ.

ಅರಿಂದಮ—ಒಂದುನೂರು ಎಂದರೆ ಒಪ್ಪಿಗೆಯೆ?

ಗೋಪಾಲ—ಒಂದುನೂರೆ? ನಾನು ನಿಮಗೆ ಐದುನೂರು ಕೊಡುತ್ತೇನೆ.

ಅರಿಂದಮನು—(ಮನಸ್ಸಿನಲ್ಲಿಯೇ ನಗುತ್ತ) ಮಹಾಶಯರ ಹೃದಯವು ಬಹು ಉದಾರವಾದದ್ದು. ಹೇಗಾದರೂ ಆಗಲಿ, ನಾನು ತಮಗಾಗಿ, ಮತ್ತಷ್ಟು ಉತ್ಸಾಹದಿಂದ ಕೆಲಸಮಾಡುತ್ತೇನೆ.

ಗೋಪಾಲ—ಏನೆಂದು ಬರೆಯಬೇಕು ?

ಅರಿಂದಮ—ಮತ್ತೇನೂ ವಿಶೇಷವಾಗಿಲ್ಲ ; ತಮ್ಮ ಕಾರ್ಯವು ಕೈಗೂಡಿದರೆ ತಾವು ನನಗೆ ಐದುನೂರು ರೂಪಾಯಿಗಳ ಪುರಸ್ಕಾರ ಕೊಡುವುದಾಗಿ ಬರೆದು ನಿಮ್ಮ ಪೂರ್ತಿಯಾದ ಹೆಸರಿನ ಹಸ್ತಾಕ್ಷರ ಹಾಕಿಕೊಟ್ಟರೆ ಸಾಕು.

ಗೋಪಾಲಚಂದ್ರನು ಅದೇ ಅರ್ಥದಲ್ಲಿ ಒಂದು ಸಮ್ಮತಿ ಪತ್ರವನ್ನು ಬರೆದು ತನ್ನ ಹೆಸರಿನ ಸಹಿಮಾಡಿದನು. ಅನಂತರ ಅದನ್ನು ಅರಿಂದಮನ ಕೈಯಲ್ಲಿಕೊಟ್ಟನು.

ಅರಿಂದಮ—'ಯಥೇಷ್ಟವಾಯಿತು' ಎಂದು ಹೇಳಿ ಕೂಡಲೇ ಅದನ್ನು ಕಿಸೆಯಲ್ಲಿ ಹಾಕಿಕೊಂಡು, ಈ ಮೊದಲು ತಮ್ಮ ಕಾರ್ಯದಲ್ಲಿ ಯತ್ನಶೀಲನಾಗಿದ್ದೇನೆ. ಮಹಾಶಯ, ಮೊದಲು ತಮ್ಮ ಮನೆಯನ್ನು ನಾನು ಹುಡುಕಿನೋಡಬೇಕು, ಎಂದನು.

ಈ ಮಾತನ್ನು ಕೇಳಿ ಗೋಪಾಲಚಂದ್ರನು ಹೊ ಹೊ ಹೋ ಎಂದು ಗಟ್ಟಿಯಾಗಿ ನಗತೊಡಗಿದನು. ನಗೆಯ ವೇಗವು ಕಡಮೆಯಾದ ಮೇಲೆ, ''ಅದಹಾಗೆಯೇ ಆಯಿತು. ನಿಮ್ಮಂತಹ ಬುದ್ಧಿವಂತರಿಂದ ನನಗೆ ಎಷ್ಟರ ಉಪಕಾರವಾಗುವುದೆಂಬುದನ್ನು ನಾನೀಗಲೇ ದಿವ್ಯ ಚಕ್ಷುವಿನಿಂದ ನೋಡುತ್ತಿದ್ದೇನೆ. ಈ ಮನೆಯಲ್ಲಿ ಹುಡುಕುವುದರಿಂದ ಆಗುವುದೇನು ? ಈ ಮನೆಯನ್ನು ಹುಡುಕುವುದರಿಂದ ಅವರು ಪತ್ತೆಯಾಗುವುದಿಲ್ಲ. ಈವರೆಗೂ ಅವರು ಈ ಮನೆಯೊಳಗೇ ಅವಿತುಕೊಂಡಿರುವರೆಂದು ಭಾವಿಸಿದಿರಾ ?'' ಎಂದು ಕೇಳಿದನು.

ಅರಿಂದಮ—ಅವರುಗಳೇ ಸಿಕ್ಕದಿದ್ದರೂ ಹೇಗೆ ಮಾಡಿದರೆ ಅವರು ಸಿಕ್ಕುವರೋ ಅದನ್ನು ನಿಶ್ಚಯಿಸಬಹುದು. ಅದಕ್ಕಾಗಿಯೇ ನಾನು ಮನೆಯನ್ನು ಹುಡುಕಬೇಕೆಂದು ಹೇಳಿದ್ದು. ಇದಕ್ಕೆ ತಾವೇಕೆ ಅಸಮ್ಮತರಾಗಬೇಕು ?

ಗೋಪಾಲ—ಅಸಮ್ಮತಿಯೇನು ಬಂತು ; ಏನೂ ಇಲ್ಲ ; ಮನೆಯೊಳಗಿರುವವರಿಗೆಲ್ಲಾ ಸ್ವಲ್ಪ ತೊಂದರೆಯಾಗುವುದೆಂದು ಹೀಗೆ ಹೇಳಿದೆ.

ಅರಿಂದಮ—ತೊಂದರೆ ಏನೂ ಇಲ್ಲ. ನಾನು ನಿಮ್ಮ ಮನೆಯನ್ನೆಲ್ಲಾ ಹುಡುಕಬೇಕೆಂದಿಲ್ಲ. ಮನೆಯ ಹೆಂಗಸರು ಮಕ್ಕಳು ಇದ್ದಲ್ಲಿಯೇ ಇರಲಿ. ನಾನು ಮನೆಯ ನಾಲ್ಕು ಕಡೆಯನ್ನು ಬಳಸಿನೋಡಬೇಕು. ಇದರಿಂದ ತೊಂದರೆಯಾಗುವುದೇನಿದೆ ?

ಗೋಪಾಲ—ಇದರಿಂದ ತೊಂದರೆ ಇಲ್ಲವಾದರೂ ಹೀಗೆ ನೋಡುವುದರಿಂದ ಫಲವಾದರೂ ಏನು ? ನನಗೊಂದೂ ತಿಳಿಯುವುದಿಲ್ಲ.

ಅರಿಂದಮ—ಪೇತ, ಅದನ್ನು ತಾವು ಈಗ ತಿಳಿಯಬೇಕಾದ ಆವಶ್ಯಕವಿಲ್ಲ.

"ಹಾಗಾದರೆ, ನಾನು ಒಂದು ಸಲ ಮನೆಯೊಳಕ್ಕೆ ಹೋಗಿ ಬರುತ್ತೇನೆ" ಎಂದು ಹೇಳಿ, ಗೋಪಾಲಚಂದ್ರನು ತನ್ನ ಸ್ಥೂಲ ದೇಹವನ್ನು ಹೊತ್ತುಕೊಂಡು, ಆಮೆಯಹಾಗೆ ಅಂತಃಪುರಕ್ಕೆ ಹೋಗಿ, ಸ್ವಲ್ಪ ಹೊತ್ತಿನಲ್ಲಿಯೇ ಹಿಂದಿರುಗಿಬಂದು ಅರಿಂದಮನನ್ನು ಕುರಿತು, "ಮಹಾಶಯ, ದಯಮಾಡಿಸಬೇಕು" ಎಂದನು.

ಮೂವ್ವರೂ ಎದ್ದು ಮನೆಯೊಳಕ್ಕೆ ಪ್ರವೇಶಮಾಡಿದರು.

---

## ಹನ್ನೆರಡನೆಯ ಪರಿಚ್ಛೇದ

### ಸನ್ಮಾರ್ಗದ ಅಭಿನಯ

ಒಳಮನೆಯ ಹಿಂಭಾಗದಲ್ಲಿ ಸಾಧಾರಣವಾದ ಒಂದು ಕೊಳ ಮತ್ತೂ ಅದರ ನಾಲ್ಕು ಕಡೆಯಲ್ಲಿ ಬಗೆಬಗೆಯಾದ ಫಲವೃಕ್ಷಗಳು. ಹೊರಗಿನ ಜನರ ದೃಷ್ಟಿಯು ಆ ಸ್ಥಳಕ್ಕೆ ಬೀಳದಿರುವುದಕ್ಕಾಗಿ ಆ ಸ್ಥಳದ ನಾಲ್ಕು ದಿಕ್ಕಿನಲ್ಲಿ ಎತ್ತರವಾದ ಪೌಳೀಗೋಡೆ. ಈ ಪುಷ್ಕರಿಣಿಯು ಮನೆಯ ಹೆಂಗಸರಿಂದ ವ್ಯವಹರಿಸಲ್ಪಡುತ್ತಲಿದೆ.

ಅರಿಂದಮನು ಗೋಪಾಲಚಂದ್ರ ಮತ್ತು ದೇವೇಂದ್ರವಿಜಯರನ್ನು ಸಂಗಡ ಕರೆದುಕೊಂಡು ಆ ಚಿಕ್ಕ ತೋಟವನ್ನು ಪ್ರವೇಶಿಸಿ ನಟ್ಟಮನಸ್ಸಿನಿಂದ ಪರೀಕ್ಷಿಸತೊಡಗಿದನು. ಹಾಗೆಯೇ ಪರೀಕ್ಷಿಸಿ ನೋಡುತ್ತಬಂದು ಒಂದು ಕಡೆ ಸ್ಥಿರವಾಗಿ ನಿಂತುಕೊಂಡನು. ಅಲ್ಲಿ ಅನೇಕ ಬಾಳೆಯ ಗಿಡಗಳು ಪ್ರಶಸ್ತವಾದ ಎಲೆಗಳಿಂದ ಪರಿಶೋಭಿಸುತಲಿದ್ದುವು. ಅವುಗಳಲ್ಲಿಯೂ ಎರಡು ಮೂರು ಗಿಡಗಳು ಪಕ್ಕ ಗಿಡಗಳಿಗಿಂತ ಅತಿಶಯ ಕಾಂತಿಭರಿತವಾಗಿದ್ದುವು. ಅರಿಂದಮನು ಗೋಪಾಲಚಂದ್ರನನ್ನು ಕುರಿತು—ಎಲ್ಲ ಗಿಡಗಳಿಗಿಂತ ಈ ಎರಡು ಮೂರು ಗಿಡಗಳು ಬಹು ಕೋಮಲವಾಗಿವೆ, ಎಂದು ಹೇಳಿದನು.

ಗೋಪಾಲ— ಹೌದು, ಈ ಗಿಡಗಳೇ ಬೇರೆ ಜಾತಿಯವು. ನಮ್ಮ ಬೇಸಾಯಗಾರರಲ್ಲಿ ರಾಮಸನಾತನನೆಂಬವನು ತಮ್ಮ ಮಾವನ ಮನೆಯಿಂದ ಇವುಗಳನ್ನು ತಂದುಕೊಟ್ಟನು. ಮಹಾಶಯ, ಮುಂದೆ ಹೋಗಿ ತೋಟವನ್ನು ಬಳಸಿಬರೋಣ, ಎಂದು ಹೇಳಿದನು.

ಅರಿಂದಮ—ಇಲ್ಲ, ನಾನು ಇನ್ನೆಲ್ಲಿಗೂ ಬರುವುದಿಲ್ಲ. ನನ್ನ ಕೆಲಸವು ಇಲ್ಲಿಯೇ ಕೈಗೂಡುವುದು. ಮಹಾಶಯ, ಒಂದು ಕೋರಿಕೆಯುಂಟು. ತಾವು ಈ ಬಾಳೆಯ ಗಿಡಗಳನ್ನು ನನಗೋಸ್ಕರವಾಗಿ ನಷ್ಟಪಡಿಸಿಕೊಳ್ಳಲು ಸಮ್ಮತಿಸಬೇಕು; ಇದಕ್ಕೇನಾದರೂ ಪ್ರತಿಬಂಧಕವುಂಟೇನು? ಎಂದು ಕೇಳಿದನು.

ಗೋಪಾಲ—(ನಗುತ್ತಾ) ಬಹಳ ಚೆನ್ನಾಯಿತು; ನೀವು ಬಹಳ ತಮಾಷೆಗಾರರು!

ಗೋಪಾಲಚಂದ್ರನ ಮಾತು ಮುಗಿಯುವುದರೊಳಗಾಗಿ ಅರಿಂದಮನು ಮೂರು ನಾಲ್ಕು ಗಿಡಗಳನ್ನು ಎಳೆದು ಬೀಸಾಡಿದನು. ಅದಕ್ಕಾಗಿ ಅಷ್ಟು ಬಲಪ್ರಯೋಗ ಮಾಡಬೇಕಾದ ಅವಶ್ಯಕವುಂಟಾಗಲಿಲ್ಲ. ಗೋಪಾಲಚಂದ್ರನು, ಏನು ಮಾಡಿದಿರಿ! ಏನು ಮಾಡಿದಿರಿ! ಎಂದು ಹೇಳುತ್ತ ತುಂಬ ಗಾಬರಿಗೊಂಡನು.

ಅರಿಂದಮನು ಗೋಪಾಲಚಂದ್ರನನ್ನು ಒಂದು ಸಲ ದುರದುರನೆ ನೋಡಿ, ಮತ್ತೊಮ್ಮೆ—'ತಾವು ಸುಮ್ಮನಿರೋಣಾಗಲಿ' ಎಂದು ಹೇಳಿ, ತನ್ನ ಕಾರ್ಯಸಾಧನೆಗೆ ಆತಂಕವಿಲ್ಲದಂತೆ ಮಾಡಿಕೊಂಡು ತನ್ನ ನಡುವಿನಲ್ಲಿಟ್ಟುಕೊಂಡು ಬಂದಿದ್ದ, ಉದ್ದವಾದ ಅಲಗಿರುವ, ಹರಿತವಾದ ಚೂರಿಯನ್ನು ಹೊರಕ್ಕೆ ತೆಗೆದು ಅದರಿಂದ ಆ ಗಿಡಗಳಿದ್ದ ಸ್ಥಳವನ್ನು ಅಗೆಯ ತೊಡಗಿದನು.

ಅರಿಂದಮನ ಈ ಕಾರ್ಯವನ್ನು ನೋಡಿಯೂ, ಅವನು ಮಾಡಿದ ತಿರಸ್ಕಾರಸೂಚಕವಾದ ಭರ್ತ್ಸನೆಯನ್ನು ಕೇಳಿಯೂ ಗೋಪಾಲಚಂದ್ರನ ಮುಖವು ಬಾಡಿ ವಿವರ್ಣವಾಯಿತು. ಅವನ ಕೈಕಾಲುಗಳು ನಡುಗಲಾರಂಭವಾದುವು. ಅವನು ಒಂದೊಂದು ಹೆಜ್ಜೆಯಂತೆ ಹಿಂದಕ್ಕೆ ಸರಿಯಲು ಪ್ರಯತ್ನಿಸಿದನು. ಅರಿಂದಮನ ದೃಷ್ಟಿಯು ಅವನ ಕಡೆಗೂ ಇದ್ದಿತಾಗಿ ಅರಿಂದಮನು—ಮಹಾಶಯ, ಪಲಾಯನ ಮಾಡಬೇಡ; ಸ್ಥಿರನಾಗಿ ನಿಲ್ಲು. ಇಲ್ಲವಾದರೆ ಇಲ್ಲಿ ನೋಡು, ಎಂದು ಪಿಸ್ತೂಲು ತೋರಿಸಿ, ಒಂದು ಹೆಜ್ಜೆ ಹಿಂದಿಟ್ಟರೂ ಪಿಸ್ತೂಲಿನಿಂದ ಹೊಡೆದು ಕಾಲು ಮುರಿಯುತ್ತೇನೆ, ಎಂದು ಗದ್ರಿಸಿದನು.

ಗೋಪಾಲ—ಇಲ್ಲ, ಏತಕ್ಕೆ ಓಡಲಿ, ಯಾಕಾಗಿ ಭಯ ಪಡಬೇಕು. ನೀವು ಪೋಲೀಸಿನವರೇ ಆದರೂ ನನಗೆ ಉಪಕಾರಿಗಳಾದ ಸ್ನೇಹಿತರು, ಎಂದು ಅಂಗಲಾಚಿದನು.

ಅರಿಂದಮನು ನಗುತ್ತಾ, ಅದು ಸತ್ಯವು, ಎಂದು ಹೇಳಿ, ದೇವೇಂದ್ರವಿಜಯನನ್ನು ನೋಡಿ—'ನೀನು ಈ ಪಿಸ್ತೂಲನ್ನು ಸರಿಯಾಗಿ ಹಿಡಿದುಕೊಂಡು ನಿಲ್ಲು. ಜೋಪಾನ, ಅವನು ಒಂದು ಹೆಜ್ಜೆ ಸರಿದರೂ ಒಡನೆ ಸುಟ್ಟುಬಿಡು' ಎಂದನು.

ದೇವೇಂದ್ರವಿಜಯನು ಈ ಅದ್ಭುತರಹಸ್ಯದ ಮರ್ಮವನ್ನು ತಿಳಿಯಲಾರದೆ, ವಿಸ್ಮಿತನಾಗಿ ಅರಿಂದಮನಿಂದ ಪಿಸ್ತೂಲನ್ನು ತೆಗೆದು ಕೊಂಡನು.

ಅರಿಂದಮನು ಚೂರಿಯಿಂದ ಬೇಗ ಬೇಗನೆ ಮಣ್ಣನ್ನು ಅಗೆದು ಎತ್ತಿಹಾಕುತ್ತಿದ್ದನು. ಎರಡು ಮೂರು ಗಿಡಗಳನ್ನು ಕಿತ್ತುಹಾಕಿದ್ದುದರಿಂದಲೇ ಆ ಸ್ಥಳವು ಬಹು ಮಟ್ಟಿಗೆ ಆಳವಾಗಿದ್ದಿತು. ಸದ್ಯಃ ಅರಿಂದಮನ ಅಲ್ಪಪರಿಶ್ರಮದಿಂದಲೇ ಅವನ ಕಾರ್ಯೋದ್ಧಾರವಾಯಿತು. ಸ್ವಲ್ಪಹೊತ್ತಿನೊಳಗಾಗಿಯೇ ಆ ಹಳ್ಳದಿಂದ ಅರಿಂದಮನು ಮನುಷ್ಯದೇಹದ ಸಂಪೂರ್ಣವಾದ ತೋಳಿನ ಮೂಳೆಯನ್ನು ಹೊರಕ್ಕೆ ತೆಗೆದನು. ಬೆರಳು ಮೊದಲು ಮಾಡಿಕೊಂಡು ಭುಜ ಶಿರದಲ್ಲಿನ ಸಂಧಿಸ್ಥಾನದವರೆಗೂ ಆ ಮೂಳೆಯಿದ್ದಿತು.

ಅದನ್ನು ನೋಡಿ ಅರಿಂದಮನು ಆನಂದಿತನಾದನು; ದೇವೇಂದ್ರವಿಜಯನು ನಡುಗಿದನು; ಗೋಪಾಲಚಂದ್ರನಿಗಾದರೋ ಈ ಪ್ರಪಂಚವೆಲ್ಲವೂ ಸುತ್ತುತ್ತಿರುವಂತೆ ಬೋಧೆಯಾಯಿತು.

ಗೋಪಾಲಚಂದ್ರನು ಸಹಸಾ ಸಮಾಧಾನ ತಂದುಕೊಂಡು—ಇದೇನು ವ್ಯಾಪಾರ! ಈ ಮೂಳೆಯನ್ನಿಲ್ಲಿಗೆ ಯಾರು ತಂದರು? ರಾಧಾಮಾಧವ! ಎಂದನು.

ಅರಿಂದಮ—ತರುವವರು ಯಾರು-ತಾವೇ ತಂದಿರುವಿರಿ. ಈ ಕೆಲಸವು ತಮ್ಮದೇ. ಇದು ರೋಹಿಣಿಯು ಸತ್ತಳೆಂಬುದಕ್ಕೆ ಸಾಕ್ಷಿಯಾಗಿ ಪೂಲಿಸಾಹೇಬನಿಂದ ಕೊಡಲ್ಪಟ್ಟುದೆಂಬುದು ಜ್ಞಾಪಕಕ್ಕೆ ಬರಲಿಲ್ಲವೇನೊ?

ಗೋಪಾಲ—ಇದೆಂತಹ ಮಾತು! ನೀವು ಸುಳ್ಳು ಹೇಳುತ್ತಿರುವಿರಿ.

ಅರಿಂದಮ—ನಮ್ಮಿಬ್ಬರಲ್ಲಿ ಒಬ್ಬನು ಸುಳ್ಳುಗಾರನೆಂಬುದನ್ನು ತಾವು ಹೇಗೆ ತಿಳಿದುಕೊಂಡಿರುವಿರೋ ಹಾಗೆಯೇ ನಾನೂ ತಿಳಿದುಕೊಂಡಿದೇನೆ. ಈಗ ತಮ್ಮ ಕೈಗಳಿಗೆ ಕೋಳಗಳನ್ನು ತೊಡಿಸಲು ನಾನು ಪ್ರೇರಿತನಾಗಿ ಬಂದಿದ್ದೇನೆ, ಎಂದು ಉತ್ತರ ಹೇಳಿದನು.

ಕೋಳದ ಹೆಸರನ್ನು ಕೇಳಿದುದೇ ತಡ, ಗೋಪಾಲಚಂದ್ರನು ತನ್ನ ದೊಡ್ಡಹೊಟ್ಟೆಯನ್ನು ಕುಣಿಯಿಸುತ್ತಾ ಹಾರಿಯಾಡಲು ಉಪಕ್ರಮಿ

ಸಿದನು. ಅರಿಂದಮನು ದೇವೇಂದ್ರವಿಜಯನಿಗೆ ಸಂಜ್ಞೆಮಾಡಿದನು. ದೇವೇಂದ್ರಬಾಬುವು ಗೋಪಾಲಚಂದ್ರನ ಕೈಗಳೆರಡನ್ನೂ ಭದ್ರವಾಗಿ ಹಿಡಿದುಕೊಂಡನು; ಅರಿಂದಮಬಾಬುವು **ಶ್ರೀಯುತ ಗೋಪಾಲಚಂದ್ರವಸುವಿನ ಕೈಗೆ ಕೈಕೋಳಗಳನ್ನು ತೊಡರಿಸಿಯೇಬಿಟ್ಟನು.**

---

## ಹದಿಮೂರನೆಯ ಪರಿಚ್ಛೇದ

### ಪ್ರಮಾಣಪತ್ರ

ಗೋಪಾಲಚಂದ್ರನು ಅರಿಂದಮನನ್ನು ಕುರಿತು,—ನೀವು ನಮ್ಮವರಾಗಿ ನನ್ನ ಕೈಗೇ ಕೋಳಗಳನ್ನು ತೊಡಿಸುವುದೇ?

ಅರಿಂದಮ—ನಾನು ತಮ್ಮವನೂ ಅಲ್ಲ, ಅವರವನೂ ಅಲ್ಲ; ನಾನು ಪೋಲೀಸು ನೌಕರ. ದೋಷಿಯಾದವನೊಡನೆ ಮರ್ಯಾದೆಯನ್ನು ಕಳೆಯುವ ಇಂತಹ ವ್ಯವಹಾರವನ್ನೇ ನಡೆಯಿಸಲು ನೇಮಕಪಟ್ಟಿರುತ್ತೇನೆ.

ಗೋಪಾಲಚಂದ್ರನು ಕಣ್ಣು ಕೆಂಪಗೆಮಾಡಿಕೊಂಡು—ಯಾವ ಆಧಾರದಿಂದ ನೀವು ನನ್ನನ್ನು ದೋಷಿಯೆಂದು ನಿಶ್ಚಯ ಮಾಡಿದಿರಿ? ಎಂದು ಕೇಳಿದನು.

ಅರಿಂದಮ—'ಅವಶ್ಯಕವಾದ ಪ್ರಮಾಣಗಳು ನನ್ನ ಹತ್ತಿರದಲ್ಲಿಯೇ ಇವೆ' ಎಂದು ಹೇಳುತ್ತಾ, ಒಂದು ಕಾಗದವನ್ನು ಹೊರಕ್ಕೆ ತೆಗೆದು ಅದನ್ನು ಗೋಪಾಲವಸುವಿನ ಎದುರಾಗಿ ಹಿಡಿದು—ಮಹಾಶಯ! ಈ ಕಾಗದವು ಯಾರದು? ಗುರ್ತಿಸಬಲ್ಲಿರಾ? ಎಂದು ಕೇಳಿದನು.

ಈ ಕಾಗದವನ್ನು ಅರಿಂದಮನು ಫೂಲಸಾಹೇಬನಿಂದ ಸಂಗ್ರಹಿಸಿದ್ದನು. ಹಠಾತ್ತಾಗಿ ಹತ್ತಿರದಲ್ಲಿ ಹಾವನ್ನು ನೋಡಿದುದೇ ಆದರೆ ಪಥಿಕನು ಹೇಗೆ ಹೆದರಿ ಹಿಂಜರಿದು ನಿಲ್ಲುವನೋ, ಆ ಕಾಗದವನ್ನು ನೋಡಿದ ಗೋಪಾಲಚಂದ್ರನ ಅವಸ್ಥೆಯೂ ಬಹುಳವಾಗಿ ಹಾಗೆಯೇ ಇದ್ದಿತು. ಗೋಪಾಲಚಂದ್ರನು ಗರ್ಜಿಸತೊಡಗಿದನು. ಮತ್ತೂ

ದೃಢಸ್ವರದಿಂದ ಹೇಳಿದನು—ಎಂದಿಗೂ ಇಲ್ಲ! ಈ ಕಾಗದವು ನನ್ನ ದಲ್ಲ !! ಎಂದು.

ಅರಿಂದಮು—ನುಮ್ಮಸಿರಿ; ಬಹಳ ಗಲಭೆ ಮಾಡಬೇಡಿರಿ. ಈ ಕಾಗದವು ನಿಮ್ಮ ಕೈಯ ಅಕ್ಷರವಲ್ಲವೆ? ಮತ್ತೂ ಇದರ ಅಡಿಯಲ್ಲಿರುವ ರುಜುವೋ—ನೋಡಿ ಹೇಳಿರಿ, ಈ ರುಜುವು ನಿಶ್ಚಯವಾಗಿ ನಿಮ್ಮದು ಹೌದೇ ಅಲ್ಲವೇ?

ಗೋಪಾಲ—ಅಲ್ಲ, ಈ ಬರವಣಿಗೆಯು ನನ್ನ ಕೈಬರಹವಲ್ಲ; ಈ ರುಜುವೂ ನನ್ನದಲ್ಲ.

ಗೋಪಾಲಚಂದ್ರನು ಇಷ್ಟಕ್ಕೆ ಮೊದಲು ಅರಿಂದಮನಿಗೆ ಬರೆದುಕೊಟ್ಟಿದ್ದ ಸಮ್ಮತಿ ಪತ್ರವನ್ನು ಅರಿಂದಮನು ತೆಗೆದು ತೋರಿಸಿ—ಇದರ ಬರವಣಿಗೆ ನಿಮ್ಮದೇ ತಾನೇ? ಅಥವಾ ಇದೂ ನಿಮ್ಮದಲ್ಲವೋ? ನೋಡಿ ಹೇಳಿರಿ. ಈ ನಿಮ್ಮ ಕೈಬರಹದೊಂದಿಗೆ ಇದರಲ್ಲಿರುವ ನಿಮ್ಮ ರುಜುವನ್ನು ಸರಿಯಾಗಿ ಹೋಲಿಸಿ ನೋಡಿರಿ, ಎಂದನು.

ಇಷ್ಟಾದರೂ ಗೋಪಾಲಚಂದ್ರನು ಮೊದಲಿನ ಹಾಗೆಯೇ ಸೃಷ್ಟನೆ! ಸೃಷ್ಟನೆ! ಈ ಕಾಗದವು ಸೃಷ್ಟನೆ! ನೀವುಗಳು ಬಹು ಭಯಂಕರ ಮನುಷ್ಯರು! ಎಂದು ಹೇಳಿದನು.

ಅರಿಂದಮನು ಮುಗುಳ್ನಗೆ ನಗುತ್ತಾ—ಆದರೂ, ತಮ್ಮನ್ನು ವಿಚಾರಿಸಿದವರಲ್ಲ, ಎಂದು ಹೇಳಿ—ಹಣದ ಆಸೆಯಿಂದ ಸ್ವಂತ ಅಣ್ಣನ ಮಗಳನ್ನು ಕೊಲ್ಲಿಸಿದವನು ಮನುಷ್ಯನೆ? ಅವನು ಮನುಷ್ಯರೂಪಿನ ರಾಕ್ಷಸ!! ಎಂದು ಪುನಃ ಹೇಳಿದನು.

* * * *

ಅರಿಂದಮನು ಯಾವ ಕಾಗದದ ಆಧಾರದಿಂದ ಗೋಪಾಲಚಂದ್ರನನ್ನು ದಸ್ತಗಿರಿಮಾಡಿದನೋ ಆ ಕಾಗದವನ್ನು ನಾವು ನೋಡಿದೆವು. ಆ ಕಾಗದದಲ್ಲಿ ಹೀಗಿತ್ತು:—

''ಕೇಶವಬಾಬು,

ಇಂದಿಗೆ ಎರಡು ದಿನಗಳಾದುವು. ತಮ್ಮ ಯಾವುದೊಂದು ವರ್ತಮಾನವೂ ಬರಲಿಲ್ಲವಾಗಿ ಬಹಳ ಕುತೂಹಲಿಯಾಗಿದ್ದೇನೆ. ಸಾವಧಾನ! ಆದಷ್ಟು ಬೇಗನೆ ರೇವತಿಯನ್ನೂ ರೋಹಿಣಿಯನ್ನೂ 'ಖೂನಿ'ಮಾಡಿರಿ. ಅವರು ಖೂನಿಯಾದ ಬಗ್ಗೆ ಯಾವುದಾದರೊಂದು ಗುರುತನ್ನು ನನಗೆ ತಲ್ಪಿಸಿದರೆ ನಾನು ಆ ಕೂಡಲೇ ತಮಗೆ ಸಲ್ಲಬೇಕಾದುದನ್ನು ಸಲ್ಲಿಸುತ್ತೇನೆ.

ಇತಿ,

**ಶ್ರೀ ಗೋಪಾಲಚಂದ್ರವಸು.''**

ಮತ್ತೂ ಎರಡು ಕಾಗದಗಳು:—

''ಕೇಶವಬಾಬು,

ತಾವು ನನ್ನಲ್ಲಿ ಅವಿಶ್ವಾಸಿಗಳಾಗಿರುವಿರೆಂಬುದು ಗೋರಾಚಾಂದನ ಹೇಳಿಕೆಯಿಂದ ವ್ಯಕ್ತವಾಯಿತು. ಸದ್ಯಃ ನಾನು ತಮಗೆ ಒಂದು ಕಾಸೂ ಕೊಡಲಾರೆ. ಕೊಡಲಾರೆನೇಕೆ—ಕೊಡುವುದಿಲ್ಲ. ಮೊದಲು ಕೆಲಸವಾಗಬೇಕು. ನನ್ನನ್ನು ನೀವು ಸಂತುಷ್ಟಿಗೊಳಿಸಿದನಂತರ ನಿಮ್ಮ ಪರಿಶ್ರಮಕ್ಕಾಗಿ ಕೊಡುತ್ತೇನೆಂದು ಹೇಳಿರುವ ರೊಕ್ಕವನ್ನು ಉತ್ತರ ಕ್ಷಣದಲ್ಲಿಯೇ ಕೊಡಲುಳ್ಳವನು. ಹೀಗೆ ಮಾಡುವುದೂ ಅಲ್ಲದೆ ನಿಮಗೆ ಪುರಸ್ಕಾರವನ್ನೂ ಮಾಡಬೇಕೆಂದಿದ್ದೇನೆ. ನೀವು ರೇವತಿಯನ್ನೂ ರೋಹಿಣಿಯನ್ನೂ ಆದಷ್ಟು ಬೇಗ 'ಖೂನಿ'ಮಾಡಿ. ಗೋರಾಚಾಂದನ ಮೂಲಕವಾಗಿ ಗುರ್ತನ್ನು ಕಳುಹಿಸಬೇಕು. ಫಲರಹಿತವಾದ ನಿಮ್ಮ ಈ ಕಾಲಹರಣವು ನನ್ನನ್ನು ಸಾರಗಾಣದ ಆಲೋಚನೆಗೆ ಗುರಿಮಾಡಿರುತ್ತದೆ. ತಾವು ಒಬ್ಬ ಕಾರ್ಯನಿರ್ವಾಹಕರಾದ ಕೆಲಸಗಾರರಾಗಿದ್ದುಕೊಂಡೂ ಹೀಗೆ ಕೆಲಸಮಾಡದೇ ಇರುವುದು ತುಂಬ ವ್ಯಸನಕರವಾದ ವಿಚಾರ. ಬರುವ ವಾರದೊಳಗಾಗಿ ಕಾರ್ಯನಿರ್ವಾಹಮಾಡಿ ನನ್ನ ಕಡೆಯಿಂದ ತಮಗೆ ಬರಬೇಕಾದುದನ್ನೆಲ್ಲಾ ಬರಮಾಡಿಕೊಳ್ಳುವಿರೆಂದು ನಂಬಿರುತ್ತೇನೆ. ಇತಿ.

**ಶ್ರೀ ಗೋಪಾಲಚಂದ್ರವಸು.''**

"ಕೇಶವಬಾಬು,

ತಾವು ರೇವತಿಯನ್ನೇನೂ ಮಾಡಿರುವುದಿಲ್ಲ. ಈ ಕಾಗದವನ್ನು ಓದಿದ ಕೂಡಲೇ ರೇವತಿಯನ್ನೂ ತೀರಿಸಿ ಆ ಬಗ್ಗೆ ಗುರ್ತನ್ನು ಬೇಗನೆ ಕಳುಹಿಸಿಕೊಡಿರಿ. ರೋಹಿಣಿಯ ಶವದೇಹವನ್ನು ಠಾಣೆಗೆ ಕಳುಹಿಸಿ ಎಂತಹ ಪರಾಕ್ರಮವನ್ನು ಪ್ರದರ್ಶನ ಮಾಡಿದಿರೋ ಅಂತಹ ಪರಾಕ್ರಮ ಪ್ರದರ್ಶನಕ್ಕಾಗಿ ರೇವತಿಯ ಶವವನ್ನು ಉಪಯೋಗಿಸಬೇಡಿ. ಅದರಿಂದ ಯಾವ ಫಲವೂ ಇಲ್ಲ. ಪ್ರಯೋಜನಕ್ಕೆ ಬದಲಾಗಿ ವಿಪತ್ತಾಗುವ ಸಂಭವವೇ ಬಹಳವಾಗಿರುತ್ತದೆ. ರೇವತಿಯ ಶವವನ್ನು ಮರೆಮಾಡಿಬಿಡಿರಿ. ರೋಹಿಣಿಯನ್ನು ಕೊಂದುದರಿಂದ ಒಪ್ಪಂದದ ಅರ್ಧಭಾಗ ಹಣ ಕಳುಹಿಸಬೇಕೆಂದು ಹೇಳುತ್ತೀರಿ. ರೋಹಿಣಿಯ ಮರಣದಿಂದ ನನ್ನ ಕೆಲಸವು ಅರ್ಧ ಮಾತ್ರ ಅನುಕೂಲವಾಗಿದ್ದಿದ್ದರೆ ನೀವು ಕೇಳುವ ಹಾಗೆ ಅರ್ಧ ಹಣ ಕಳುಹಿಸಿ ಕೊಡುತ್ತಿದ್ದೆನು. ರೋಹಿಣಿಯೊಬ್ಬಳನ್ನು ಕೊಂದ ಮಾತ್ರದಿಂದ ನನಗೆ ಏನೂ ಉಪಕಾರ ಮಾಡಿದ ಹಾಗಾಗಲಿಲ್ಲ. ಈಗ ನಾನು ತಮಗೆ ಖಂಡಿತವಾಗಿ ಏನನ್ನೂ ಕೊಡಲಾರೆ. ರೋಹಿಣಿಯು ಇಲ್ಲದಿರುವಾಗ ರೇವತಿಯೇ ಸಮಸ್ತ ಸಂಪತ್ತಿಗೂ ಅಧಿಕಾರಿಣಿ; ನೀವು ಮಾಡಿದ ಕೆಲಸದಿಂದ ರೇವತಿಗೆ ಅನುಕೂಲವಾಯಿತು. ಈ ಸಂದರ್ಭದಲ್ಲಿ ನನಗೇನು ಬಂದ ಹಾಗಾಯಿತು? ರೋಹಿಣಿಯ ಮರಣದ ಸಾಕ್ಷ್ಯವಾಗಿ ತಾವು ಕಳುಹಿಸಿದ್ದ ಒಂದು ಕಯ್ಯನ್ನು ನಮ್ಮ ಒಳಮನೆಯ ಪೆಟ್ಟಿಗೆಯಲ್ಲಿ ಹೂಳಿಟ್ಟು ಇದ್ದೇನೆ. ರೋಹಿಣಿಯ ಕೈಯನ್ನು ಕಳುಹಿಸಿದಂತೆ ರೇವತಿಯ ಒಂದು ಕೈ ತೆಗೆದು ಕಳುಹಿಸಿದರೆ ಫಲವಿಲ್ಲ. ರೋಹಿಣಿಯ ಕೈಯಲ್ಲಿ ಒಂದು ಕಪೆ ಸುಟ್ಟ ಗಾಯದ ಗುರುತು ಇದ್ದುದರಿಂದ ಗುರ್ತಿಸಿದ್ದಾಯಿತು. ಕತ್ತರಿಸಿದ ರೇವತಿಯ ತಲೆಯನ್ನು ಕಳುಹಿಸಿಕೊಡಿ. ಇತಿ,

**ಶ್ರೀ ಗೋಪಾಲಚಂದ್ರವಸು."**

⁂ ⁂ ⁂ ⁂

ಅರಿಂದಮನು ಪ್ರಯತ್ನಪುರಸ್ಸರವಾಗಿ ಶ್ರೀಯುತ ಗೋಪಾಲಚಂದ್ರನನ್ನು ಸ್ಥಳದ ಠಾಣೆಗೆ ಕಳುಹಿಸಿದನು.

ಅಧರ್ಮದ ಪರಿಣಾಮವು ಹೀಗೆಯೇ ಶೋಚನೀಯವಾಗುವುದು.

# ಹದಿನಾಲ್ಕನೆಯ ಪರಿಚ್ಛೇದ

## ನಿರುಪಮೆ

ಸೋಮನಾಥಪುರದಲ್ಲಿ ಆವಶ್ಯಕವಾಗಿ ಆಗಬೇಕಾಗಿದ್ದ ಕೆಲಸಗಳನ್ನೆಲ್ಲಾ ಮುಗಿಯಿಸಿಕೊಂಡು ಅರಿಂದಮನು ದೇವೇಂದ್ರವಿಜಯನನ್ನೂ ಕರೆದುಕೊಂಡು ರಘುನಾಥಪುರಕ್ಕೆ ಬಂದನು. ರಘುನಾಥಪುರವು ಅರಿಂದಮನ **ತೌರೂರು.** ಸೋಮನಾಥಪುರದಿಂದ ಹುಗಲೀ ಜಿಲ್ಲೆಗೆ ಬರಬೇಕಾದರೆ ರಘುನಾಥಪುರಕ್ಕೆ ಹತ್ತಿರವಾಗಿಯೇ ಪ್ರಯಾಣ ಮಾಡಬೇಕಾಗುವುದು. ರಘುನಾಥಪುರದಲ್ಲಿರುವವರೆಲ್ಲರಿಗೂ ಮಿಗಿಲಾದ ಸಮೃದ್ಧಶಾಲಿಯೆಂದರೆ ಅರಿಂದಮನೇ ಸರಿ. ಅಲ್ಲಿ ಆತನಿಗೆ ಯಥೇಷ್ಟವಾದ ಭೂಸಂಪತ್ತಿಯುಂಟು. ಅವನ ವಾಸಗೃಹವು ವಿಸ್ತಾರವಾದುದು. ಅದಕ್ಕೆ ಸರಿಸಮವಾದ ಎರಡಂತಸ್ತಿನ ಮಹಡಿಯ ಮನೆಯು ಆ ಗ್ರಾಮದಲ್ಲಿ ಇದರ ಬಿನಾ ಒಂದೂ ಇಲ್ಲ. ಮನೆಯ ಹಿಂಭಾಗದಲ್ಲಿ ಮರಬಳ್ಳಿಗಳಿಂದ ಶೋಭಿಸುವ ರಮ್ಯವಾದ ಉದ್ಯಾನ. ಅದರಲ್ಲಿ ಮತ್ಸ್ಯಸಮೂಹವನ್ನೊಳಕೊಂಡ ನಿರ್ಮಲವಾದ ನೀರು ತುಂಬಿದ ವಿಸ್ತಾರವಾದ ಸರೋವರ. ಸ್ವಲ್ಪದರಲ್ಲಿ ಹೇಳುವುದೆಂದರೆ, ಸಮೃದ್ಧಿಸಂಪನ್ನನಾದವನಿಗೆ ಆವಾವುದು ಆವಶ್ಯಕವೋ ಅರಿಂದಮನಿಗೆ ಅವುಗಳೊಂದರ ಅಭಾವವೂ ಇರಲಿಲ್ಲವೆನ್ನಬೇಕು.

ಆ ಊರಿನಲ್ಲಿ ದೇವೇಂದ್ರವಿಜಯನು ಹಲವು ದಿನಗಳನ್ನು ಕಳೆದನು. ಊಟ ಉಪಚಾರ ನಿದ್ರೆ ಇವು ಸ್ವಾಭಾವಿಕವಾಗಿ ನಡೆದುವು. ಕಳ್ಳರು, ದರೋಡೆಯವರು ಮುಂತಾದವರನ್ನು ಹಿಡಿಯುವುದರಲ್ಲಿ ಅರಿಂದಮನಿಗೆ ಹೇಗೆ ಆಸಕ್ತಿಯಿದ್ದಿತೋ ಹಾಗೆಯೇ ಮೀನು ಹಿಡಿವುದರಲ್ಲಿಯೂ ಒಂದು ಬಗೆಯ ಉತ್ಸಾಹವು ಪ್ರಬಲವಾಗಿದ್ದಿತು. ಆತನು ನಿತ್ಯವೂ ಬೆಳಗ್ಗೆ ಗಾಳವನ್ನು ತೆಗೆದುಕೊಂಡು ಸರೋವರದ ಸೋಪಾನದಲ್ಲಿ ಕುಳಿತು ಮತ್ಸ್ಯಕುಲವನ್ನು ಧ್ವಂಸಮಾಡತೊಡಗುವನು.

ಒಂದು ದಿನ ಪ್ರಾತಃಕಾಲದಲ್ಲಿ ಅಲ್ಲ—ಮಧ್ಯಾಹ್ನದಲ್ಲಿ ಅರಿಂದಮನು ದೇವೇಂದ್ರವಿಜಯನನ್ನು ಕುರಿತು—ನೀನು ಎರಡು ದಿನಗಳಿಂದಲೂ ಊರಿಗೆ ಹೋಗಬೇಕೆಂದು ಆತುರಪಡುತ್ತಿರುವೆಯಾದ್ದರಿಂದ ನಾಳಿನ ಬೆಳಿಗ್ಗೆ ನಿನ್ನನ್ನು ಕಳುಹಿಸಿ ಬರುತ್ತೇನೆ. ಹಾಗಾಗುವುದಾದರೆ ಇಂದಿನ ರಾತ್ರಿಯ ಭೋಜನವು ಸ್ವಲ್ಪ 'ಚೊಕ್ಕ ಭೋಜನವೇ' ಆಗಿರಬೇಕಾದ್ದು ಆವಶ್ಯಕ. ಹೇಗಾದರೂ ಮಾಡಿ, ಈ ದಿನ ಎಷ್ಟೇ ಕಡಿಮೆ ಎಂದರೂ ನಾಲ್ಕಾರು ದೊಡ್ಡ ದೊಡ್ಡ ಮೀನುಗಳನ್ನು ಹಿಡಿಯಬೇಕೆಂದಿದ್ದೇನೆ. ಗಾಳವನ್ನು ತೆಗೆದುಕೊಂಡು ನೀನು ತೋಟಕ್ಕೆ ನಡೆ; ಚಲ್ಲಿಯನ್ನು ಹಾಕಿ ಕುಳಿತುಕೋ. ನಾನು ಈಗಲೇ ಬರುತ್ತೇನೆ, ಎಂದು ಹೇಳಿದನು.

ದೇವೇಂದ್ರವಿಜಯ—ನಾನು ಈ ದಿನವೇ ಪ್ರಯಾಣಮಾಡುತ್ತೇನೆ.

ಅರಿಂದಮ—ಅದೇನು ಬಂತು? ನಾಳಿನ ಬೆಳಿಗ್ಗೆ ಖಂಡಿತವಾಗಿಯೂ ಕಳುಹಿಸಿಕೊಡುತ್ತೇನೆ. ಈ ದಿವಸ ಒಂದೆರಡು ಮೀನುಗಳನ್ನಾದರೂ ನೀನು ಹಿಡಿಯಲೇಬೇಕು. ನಡೆ, ನಾನು ಈಗಲೇ ಬರುತ್ತೇನೆ.

ದೇವೇಂದ್ರವಿಜಯನು ಮೀನಿನ ಬೇಟೆಗೆ ಬೇಕಾದ ಉಪಕರಣಗಳೊಡನೆ ತೋಟಕ್ಕೆ ಹೋದನು. ಇದರಲ್ಲಿಯೂ ಅರಿಂದಮನಿಗೆ ಒಂದು ಉದ್ದೇಶ್ಯವುಂಟು.

* * * *

ಉದ್ಯಾನದಲ್ಲಿ ಛಾಯಾಸ್ನಿಗ್ಧವಾದ ಸ್ವಚ್ಛ ಸರೋವರವು ಮರದೆಲೆಗಳ ನಡುವೆ ನುಸುಳಿಬಂದ ಬಿಸಿಲಿನಿಂದ ನಳನಳಿಸುತ್ತಿದೆ. ವಾಯುದೇವನ ಹಿಲ್ಲೋಲದಿಂದ ಚಲಿತವಾದ ತರಂಗಮಾಲೆಯ ದೆಸೆಯಿಂದ ಪ್ರತಿ ಮುಹೂರ್ತದಲ್ಲಿಯೂ ರವಿಕಿರಣವು ಸಹಸ್ರಖಂಡಗಳಾಗಿ ಪ್ರತಿಫಲಿಸುತ್ತಿದೆ; ಸುತ್ತಲ ಉದ್ಯಾನವು ಕುಸುಮ ಸೌರಭದಿಂದ ಪೂರ್ಣವಾಗಿದೆ.

ದೇವೇಂದ್ರವಿಜಯನು ಗಂಭೀರವಾಗಿ ನಡೆಯುತ್ತ ಸೋಪಾನದ ಹತ್ತಿರ ಹೋಗಿ ನೋಡಿದನು. ಸ್ವಚ್ಛವಾಗಿಯೂ ಅಲುಗಾಡುತ್ತಲೂ ಇದ್ದ ನೀರಿನಲ್ಲಿ ತನ್ನ ಎರಡು ಕಾಲುಗಳನ್ನೂ ಮುಳುಗಿಸಿ ನೀರಿಗೆ ಸಮೀಪವಾಗಿರುವ ಮೆಟ್ಟಲಮೇಲೆ, ಅಪರೂಪ ರೂಪವತಿಯಾದ ಯುವತಿಯೊಬ್ಬಳು ಕುಳಿತು ಮುಖವನ್ನು ಅತ್ತಕಡೆ ತಿರುಗಿಸಿಕೊಂಡಿದ್ದಾಳೆ. ಸಮೀಪದಲ್ಲಿಯೇ ಇದ್ದ ಮಾವಿನಮರದಲ್ಲಿ ಮರೆಯಾಗಿದ್ದೊಂದು ಕೊಂಬೆಯಮೇಲೆ ಕುಳಿತಿರುವ ಯಾವುದೋ ಮಧುರ ಕಂಠದ ಕೋಗಿಲೆಯು ತನ್ನ ವಿರಹಾಕುಲವಾದ ವೇದನಾಗೀತವನ್ನು ಹಾಡಿ ಉದ್ಯಾನವನ್ನೆಲ್ಲಾ ಮುಖರಿತವಾಡುತ್ತಿದೆ. ಸುಂದರಿಯ ಆ ಚಂಚಲ ನೇತ್ರಗಳು ಪಂಚಮತಾನದಲ್ಲಿ ಹಾಡುತ್ತಿದ್ದ ಕೋಗಿಲೆಯನ್ನೇ ನೋಡುವುದರಲ್ಲಿ ಸ್ಥಿರವಾಗಿದ್ದುವು; ದೇವೇಂದ್ರವಿಜಯನು ಅಲ್ಲಿಗೆ ಬಂದುದನ್ನು ಅವಳು ನೋಡಲೇ ಇಲ್ಲ.

ದೇವೇಂದ್ರವಿಜಯನು, ಮೇಘದಂತೆ ನಿಬಿಡವಾಗಿಯೂ ಶೈವಲದಂತೆ ತರಂಗತರಂಗವಾಗಿಯೂ, ಭ್ರಮರಮಾಲೆಯಂತೆ ಕಪ್ಪಾಗಿಯೂ ಇರುವ ಆ ಸೌಂದರ್ಯನಿಧಿಯ ಬಿಚ್ಚಿದ ಕೇಶದಾಮವು ಗುಚ್ಛಗುಚ್ಛವಾಗಿ ಬೆನ್ನಮೇಲೆ ಹೊರಳುತ್ತಾ ಬಂದು ನೀರಿನಲ್ಲಿ ತೋಯುತ್ತಿರುವುದನ್ನು ನೋಡಿದನು. ಆದರೆ, ಆ ರೀತಿಯಾಗಿ, ಅಲ್ಲಿ ನಿಂತುಕೊಂಡು ನೋಡುತ್ತಿರುವುದು ತೀರಾ ಅನ್ಯಾಯವೆಂದುಕೊಂಡು ಹಿಂದಿರುಗಿದನು. ಆ ಸಮಯದಲ್ಲಿ ಒಂದು ತರಗೆಲೆಗೆ ಕಾಲು ತಗಲಿ ಸ್ವಲ್ಪ ಸದ್ದಾಯಿತು. ಯುವತಿಯು ಅವಸರವಸರವಾಗಿ ಅತ್ತಕಡೆ ತಿರುಗಿನೋಡಿದಳು. ನೋಡಿದುದೇ ಅವಳ ಬಾಯಲ್ಲಿ ಮಾತು ಹೊರಡಲಿಲ್ಲ. ಅವಳ ಆಗಿನ ರೀತಿಯನ್ನು ನೋಡಿದರೆ ಏಳಬೇಕೋ, ಮುಳುಗಬೇಕೋ, ಓಡಿ ಹೋಗಬೇಕೋ ಯಾವುದೂ ತೋರದಹಾಗಾಯಿತೆಂದು ಭಾಸವಾಯಿತು.

ದೇವೇಂದ್ರವಿಜಯನು ಕೂಡ ಆ ನಿರುಪಮೆಯ ಮುಖವನ್ನು ನೋಡಿ ಮುಗ್ಧನಾದನು; ವಿಸ್ಮಯಗೊಂಡನು; ವಿಹ್ವಲತೆಯಿಂದ

ಅಲ್ಲಿಯೇ ಸ್ತಂಭಿತನಾದನು. ವಿಸ್ಮಯಗೊಂಡ ದೇವೇಂದ್ರವಿಜಯನು ಅವಳನ್ನು ಕುರಿತು ವ್ಯಾಕುಲಿತ ಕಂಠದಿಂದ "ನೀನು ಈ ಸ್ಥಳದಲ್ಲಿ!" ಎಂದನು.

---

## ಹದಿನೈದನೆಯ ಪರಿಚ್ಛೇದ

### ಪರಿಶಿಷ್ಟ

ಅರಿಂದಮನು ಆ ವೇಳೆಗೆ ಸರಿಯಾಗಿ ಅಲ್ಲಿಗೆ ಬಂದನು. ಈವರೆಗೂ ಆತನು ಮರೆಯಾಗಿದ್ದನೆಂದು ಬೋಧೆಯಾಯಿತು. ಅವನನ್ನು ನೋಡಿ ಆ ಯುವತಿಯು ನಾಚಿಕೆಯಿಂದ ಬೇಗಬೇಗನೆ ಮೆಟ್ಟಲುಗಳನ್ನು ಹತ್ತಿ ಹೊರಟುಹೋದಳು. ದೇವೇಂದ್ರವಿಜಯನು ಅಪ್ರತಿಭನಾದವನ ಹಾಗಾಗಿ ಇತ್ತಲೂ ಅತ್ತಲೂ ನೋಡತೊಡಗಿದನು. ಅರಿಂದಮನ ಮುಖವನ್ನು ನೋಡಲು ಅವನಿಗೆ ಸಾಹಸವಿಲ್ಲ!

ಈ ರೀತಿಯನ್ನೆಲ್ಲಾ ನೋಡಿ ಅರಿಂದಮನು—ನಡೆ, ಈಗ ನಿನ್ನ ವಿನಾಸು ಹಿಡಿಯುವುದಾಗುವುದಿಲ್ಲ. ಗ್ರಾಮದ ಹುಡುಗಿಯರೆಲ್ಲರೂ ಈ ಘಾಟಿಗೆ ನೀರಿಗೆ ಬರುವ ವೇಳೆಯಾಯಿತು. ಸಾಯಂಕಾಲದ ನಂತರವಾಗಲಿ, ಎಂದನು.

ದೇವೇಂದ್ರವಿಜಯನ ಮನಸ್ಸಿನಲ್ಲಿ ದಾರುಣವಾದ ಉತ್ಕಂಠಿತೆ. ಅವನು ಅರಿಂದಮನನ್ನು ಕುರಿತು ಬಹು ಸಾಹಸವಾಡಿ—ಈಗ ಇಲ್ಲಿಂದ ಹೊರಟುಹೋದವಳನ್ನು ತಾವು ಬಲ್ಲಿರಾ? ಎಂದು ಕೇಳಿದನು.

ಅರಿಂದಮ—ಕಾರಣವೇನು ಹೇಳು?

ದೇವೇಂದ್ರವಿಜಯನು ನಿರುತ್ತರನಾಗಿದ್ದನು.

ಅರಿಂದಮ—ಈ ಘಾಟಿಗೆ ಈ ಗ್ರಾಮದ ಹೆಣ್ಣುಮಕ್ಕಳೆಷ್ಟೋ ಬರುತ್ತಾರೆ. ನಾನು ಅವರನ್ನೆಲ್ಲಾ ಏಕೆ ಗುರುತಿಸಲಿ? ಆದರೆ ನಮ್ಮ ಮನೆಯ ಹೆಂಗಸರು ಕೆಲಕೆಲವರನ್ನು ಗುರುತಿಸಬಹುದು!!

ದೇವೇಂದ್ರವಿಜಯ—ಈಗ ನಾನು ಇಲ್ಲಿ ನೋಡಿದವಳು ರೇವತಿಯ ಹಾಗೆಯೇ ಕಾಣುವಳು; ಅವಳು ರೇವತಿ.

ಅರಿಂದಮನು ಗಟ್ಟಿಯಾಗಿ ನಕ್ಕು, ನಿಶ್ಚಯವಾಗಿ? ಅವಳನ್ನು ಕೇಳಿ ಅವಳ ಹೆಸರು ತಿಳಿದುಕೊಂಡೆಯೇನು?

ದೇವೇಂದ್ರವಿಜಯ—ಹೆಸರು ಕೇಳಿ ತಿಳಿಯಬೇಕಾದ ಆವಶ್ಯಕವಿಲ್ಲ. ನನಗೆ ಚೆನ್ನಾಗಿ ಗುರ್ತಿದೆ. ಅವಳು ರೇವತಿ. ಅದೇ ಮುಖ, ಅದೇ ಕಣ್ಣು, ಅದೇ ರೀತಿ. ಎಲ್ಲವೂ ಅದೇ. ನಾನು ಎಂದೂ ಭ್ರಾಂತಿಗೊಂಡುದಿಲ್ಲ.

ತಂತಮ್ಮ ತಪ್ಪು ತಮಗೆ ಎಂದಿಗೂ ಕಾಣಿಸದು. ಅಲ್ಲದೆ ಈ ಎಲ್ಲ ವಿಚಾರಗಳಲ್ಲಿ ಭ್ರಾಂತಿಗೊಳ್ಳುವುದು ಬಹು ತಪ್ಪೇ ಸರಿ. ಹೇಗಾದರೂ ಆಗಲಿ, ವಿನಾನು ಹಿಡಿಯಬೇಕೆಂದು ನಿನ್ನನ್ನು ಇಲ್ಲಿಗೆ ಕಳುಹಿಸಿದೆನು; ನೀನು ಒಂದೇಬಾರಿಗೆ ಒಬ್ಬ ವಿನಾಸಾಕ್ಷಿಯನ್ನೇ ಗಂಟುಹಾಕಿಕೊಂಡಿರುವೆ. ಹುಡುಗರ ಸಾಹಸವೇ ಸಾಹಸ! ಎಂದು ಅರಿಂದಮನು ನಗುತ್ತಾ ಹೇಳಿದನು.

ದೇವೇಂದ್ರ—ತಮಗೆ ಎಲ್ಲವೂ ತಿಳಿದಿದೆ. ತಾವು ಎಲ್ಲವನ್ನೂ ನನಗೆ ಮರೆಮಾಚುತ್ತಿದ್ದೀರಿ. ನಾನು ಈಗ ನೋಡಿದವಳು ರೇವತಿಯು ಹೌದೇ ಅಲ್ಲವೇ ಹೇಳಿರಿ.

ಅರಿಂದಮ—ಅವಳು ರೇವತಿಯೇ ಹೌದು. ಯಾವ ರೀತಿಯಿಂದಲಾದರೂ ರೇವತಿಯನ್ನು ಕರೆದುಕೊಂಡು ಬರುತ್ತೇನೆಂದು ಹೇಳಿ ನಿನಗೆ ಪ್ರಮಾಣಮಾಡಿಕೊಟ್ಟಿದ್ದೆನಷ್ಟೆ; ಹಾಗೆ ಪ್ರತಿಜ್ಞೆಮಾಡುವುದಕ್ಕೆ ಮೊದಲೇ ನಾನು ರೇವತಿಯನ್ನು ಅವಳಿಗೆ ಉಂಟಾಗಿದ್ದ ವಿಪತ್ತುಗಳಿಂದ ತಪ್ಪಿಸಿ ಕರೆದುಕೊಂಡು ಬಂದಿದ್ದೆನು. ಒಬ್ಬ ಪೋಲೀಸಿನವನಿಗೆ ರೇವತಿಯ ಅಜ್ಜನ ವೇಷವನ್ನು ಹಾಕಿ ರೇವತಿಯನ್ನು ಅರ್ಥಪಿಶಾಚನಾದ ಯದುನಾಥನಿಂದ ಬಿಡಿಸಿತಂದುದಾಯಿತು. ಅಲ್ಲಿಂದ ರೇವತಿಯನ್ನು ಇಲ್ಲಿಗೆ ಕಳುಹಿಸಿಕೊಟ್ಟೆನು. ಆ ಮೊದಲು ರೇವತಿಯು

ನಮ್ಮ ಮನೆಯಲ್ಲಿಯೇ ಇದ್ದಾಳೆ. ಪ್ರತಿದಿನವೂ ರೇವತಿಯು ಈ ಹೊತ್ತಿನಲ್ಲಿ ತೋಟದಲ್ಲಿ ಒಂಟಿಯಾಗಿರುವಳು. ಅವಳನ್ನು ನೀನು ನೋಡಿದರೂ ನೋಡಬಹುದೆಂಬ ಊಹೆಯಿಂದಲೇ ಏನಾನು ಹಿಟಯುನ ಸೆವಬಂದ ನಿನ್ನನ್ನು ಇಲ್ಲಿಗೆ ಕಳುಹಿಸಿದೆನು. ನೀನು ಈಗ ರೇವತಿಯನ್ನು ಕಣ್ಣಾರ ಕಂಡಿರುವೆ. ಇನ್ನು ಸಂಶಯವೇನೂ ಉಳಿಯಲಿಲ್ಲವಲ್ಲ? ಎಂದು ಹೇಳಿದನು.

ದೇವೇಂದ್ರವಿಜಯ—ಫೂಲಸಾಹೇಬನು ಸಿಕ್ಕಿಬಿದ್ದ ದಿವಸ, ನೀವು ಆತನನ್ನು ಕುರಿತು ರೇವತಿಯು ಕೊಲೆಯಾಗದಿದ್ದುದಕ್ಕೆ ಕಾರಣ ಕೇಳಿದಾಗ, ಫೂಲಸಾಹೇಬನು, ತನ್ನ ಬಾಯಿಯ ತುತ್ತನ್ನು ನೀವು ಕಸುಗೊಂಡಿರೆಂದು ಹೇಳಿದನಲ್ಲವೆ? ಅಂದೇ ನೀವು ರೇವತಿಯನ್ನು ಯಾವುದೋ ನಿರ್ಭಯವಾದ ಸ್ಥಳದಲ್ಲಿ ಬಚ್ಚಿಟ್ಟಿರಬೇಕೆಂದು ಭಾವಿಸಿದೆನು.

ಅರಿಂದಮ—ಏನಾದರೂ ಆಗಲಿ; ಈಗ ರೇವತಿಗೆ ಅವಳ ಸೋದರಿಯ ಕೊಲೆಯಾದ ವಿಚಾರವನ್ನು ಹೇಳಬೇಕಾದುದಿಲ್ಲ. ಎಷ್ಟು ದಿನ ಅದು ಅವಳಿಗೆ ತಿಳಿಯದಿರುವುದೋ ಅಷ್ಟೇ ಕ್ಷೇಮ. ಈಗ ರೇವತಿಯ ಮನಸ್ಸಿನ ಸ್ಥಿತಿಯು ಅಷ್ಟು ಸಮರ್ಪಕವಾಗಿಲ್ಲ. ಅವಳಿಗೆ ಒದಗಿದ ಆ ಭಯಂಕರವಾದ ದುಶ್ಚಿಂತೆಗಳ ದೆಸೆಯಿಂದ ಅವಳ ಶರೀರವು ಬಹು ದುರ್ಬಲವಾಗಿದೆ. ಈ ಸಮಯದಲ್ಲಿ ಶೋಕದ ಆಘಾತವು ಕೊಂಚ ಮಟ್ಟಿಗಾದರೂ ಆದರ ಪರಿಣಾಮವು ತೀರಾ ಶೋಚನೀಯವಾಗಬಹುದು. ವಿಶೇಷವಾಗಿ, ರೇವತಿಗೆ ರೋಹಿಣಿಯಲ್ಲಿ ಪ್ರಾಣ. ಅವರ ಚಿಕ್ಕಪ್ಪನ ವಿಚಾರವಾಗಿ ಕೂಡ ಈಗ ಅವಳಿಗೆ ಯಾವ ಮಾತನ್ನೂ ಹೇಳಬಾರದು. ಈ ವಿಚಾರಗಳಲ್ಲದೆ ಇನ್ನೂ ಒಂದು ಮಾತು ಹೇಳತಕ್ಕದ್ದಿದೆ. ದೇವೇಂದ್ರಬಾಬು, ರೇವತಿಯ ಮದುವೆಯಲ್ಲಿ ನಾನು ಹೆಣ್ಣಿನ ಕಡೆಯ ಬಯುಗನಾಗಬೇಕೆಂದಿದ್ದೇನೆ, ಎಂದನು.

ದೇವೇಂದ್ರವಿಜಯ—ಅದು ತಮ್ಮ ಅನುಗ್ರಹ.

—ಶ್ರೀ ಸಮಾಪ್ತಿ—